*Department of Public Instruction, Mysore.*

**H. H. the Maharani's Girls' School Series.**

ಪಂಡಿತ ರಮಾಬಾಯಿಯವರಿಂದ

ಮಹಾರಾಷ್ಟ್ರಭಾಷೆಯಲ್ಲಿ ರಚಿಸಲ್ಪಟ್ಟ

# ಸ್ತ್ರೀಧರ್ಮನೀತಿ

ಎಂಬ ಗ್ರಂಥವು.

ಶ್ರೀಮನ್ಮಹಾರಾಣಿಯವರ ಬಾಲಿಕಾ ಪಾಠಶಾಲೆಯ ಉಪಯೋಗಾರ್ಥವಾಗಿ

ಮೈಸೂರು ರೆವಿನ್ಯೂ ಸರ್ವೆ ಅ॥ ಸೂ॥

ಮಂ. ಸೂರ್ಯನಾರಾಯಣರಾಯರವರಿಂದ ಕನ್ನಡಿಸಲ್ಪಟ್ಟು

ಗ॥ ಕನ್ನಡ ಸ್ಕೂಲ್ ಹೆಡ್ ಮಾಸ್ಟರು ಬಿ. ಮಲ್ಲಪ್ಪನವರಿಂದ

ಲೇಖಕರ ಪ್ರಮಾದದಿಂದುಂಟಾದ ತಪ್ಪುಗಳಿಲ್ಲದಂತೆ

ಪರಿಷ್ಕೃತವಾಗಿರುತ್ತದೆ.



BANGALORE
PRINTED AT THE GOVERNMENT CENTRAL PRESS
1912.

# ಪೀಠಿಕೆ.

ಸ್ತ್ರೀಜನರಿಗೆ ಧರ್ಮ, ನೀತಿ, ಗೃಹಕೃತ್ಯ, ಮಕ್ಕಳ ಪೋಷಣೆ ಮೊದಲಾದ ಅನೇಕ ವಿಷಯಗಳಲ್ಲಿ ಅತ್ಯಂತ ಉಪಯೋಗವಾಗಿರುವಂತೆ ಪಂಡಿತ ರಮಾಬಾಯಿಯವರಿಂದ ಮಹಾರಾಷ್ಟ್ರ ಭಾಷೆಯಲ್ಲಿ ರಚಿಸಲ್ಪಟ್ಟಿರುವ "ಸ್ತ್ರೀಧರ್ಮನೀತಿ" ಎಂಬ ಈ ಗ್ರಂಥವು, ಮೈಸೂರು ಮಹಾರಾಣಿಯವರ ಬಾಲಿಕಾಪಾಠಶಾಲೆಯ ಉಪಯೋಗಾರ್ಥವಾಗಿ ಶ್ರೀಮನ್ಮಹಾರಾಜರವರ ದರ್ಬಾರು ಬಕ್ಷಿಯವರಾದ ಮಹಾರಾ॥ ಅಂಬಿಲ್ ನರಸಿಂಹಯ್ಯಂಗಾರ್ಯರವರ ಕೋರಿಕೆಯ ಮೇರೆಗೆ, ಮೈಸೂರು ರೆವಿನ್ಯೂ ಸರ್ವೆ ಅ॥ ಸೂ॥ ಮಂ. ಸೂರ್ಯನಾರಾಯಣರಾಯರವರಿಂದ ಭಾಷಾ ಶೈಲಿಗೆ ಅನುಕೂಲವಾಗಿರುವುದಕ್ಕಾಗಿ ಮಾತಿಗೆ ಮಾತು ಟೀಕಿಸಲ್ಪಡದೆ, ಈ ದೇಶದ ಸ್ತ್ರೀಜನರಿಗೆ ಉಪಯೋಗವಾಗುವಂತೆಯೂ ಸುಲಭವಾಗಿ ತಿಳಿವಂತೆಯೂ ಕನ್ನಡಿಸಲ್ಪಟ್ಟು, ಲೇಖಕರ ಪ್ರಮಾದದಿಂದುಂಟಾದ ತಪ್ಪುಗಳಿಲ್ಲದಂತೆ ಪರಿಶೋಧಿಸಲ್ಪಟ್ಟದೆ.

ಬಿ. ಮ.

---

# ಪ್ರಸ್ತಾವನೆ.

ಈ ಕಾಲದಲ್ಲಿ ನಿರ್ಭಾಗ್ಯವಾದ ನಮ್ಮ ದೇಶದ ಸ್ತ್ರೀಜಾತಿಯ ಅವಸ್ಥೆಯು ಎಷ್ಟು ಶೋಚನೀಯವಾಗಿದೆಯೋ ಅದನ್ನು ಹೇಳುವುದಕ್ಕಾಗುವುದಿಲ್ಲ ; ಇದನ್ನು ವಿಚಾರಪರರಾದವರು ಆಲೋಚಿಸಿದರೆ ಅವರ ಹೃದಯವು ದುಃಖದಿಂದ ಕರಗಿ ಹೋಗುವುದರಲ್ಲಿ ಸಂಶಯವಿಲ್ಲ. ಈ ದೇಶದ ಸ್ತ್ರೀಯರು ಸಹಾಯಶೂನ್ಯರಾಗಿಯೂ ಜ್ಞಾನಶೂನ್ಯರಾಗಿಯೂ ಇದ್ದಾರೆ. ತಮ್ಮ ಹಿತವನ್ನು ತಾವು ಹೇಗೆ ಮಾಡಿಕೊಳ್ಳಬೇಕೋ ಅದನ್ನು ಅವರು ತಿಳಿಯರು. ಆದಕಾರಣ ಬುದ್ಧಿವಂತರಾದವರು ಸ್ತ್ರೀಯರಿಗೆ ಹಿತವುಂಟಾಗುವ ರೀತಿಯನ್ನು ಬೋಧಿಸಿ ಅದರಂತೆ ಅವರು ಆಚರಿಸುವಹಾಗೆ ಮಾಡಬೇಕು. ಈ ಕಾಲದಲ್ಲಿ ಸ್ತ್ರೀಯರಿಗೆ ಜ್ಞಾನವುಂಟಾಗದೆ ದೇಶಕ್ಕೆ ಉನ್ನತಿಯು ಉಂಟಾಗುವುದಿಲ್ಲವೆಂಬುದನ್ನು ಬುದ್ಧಿವಂತರಾದವರು ತಿಳಿದುಕೊಂಡು ಇರುವುದಲ್ಲದೆ ಅವರ ಉನ್ನತಿಯ ವಿಷಯದಲ್ಲಿ ಪ್ರಯತ್ನಪಡುತ್ತಲೂ ಇದ್ದಾರೆ. ಇದು ಅತ್ಯಂತ ಸಂತೋಷಕರವಾದುದು.

ಲೋಕದಲ್ಲಿ ಮನುಷ್ಯರಿಗೆ ನೀತಿಶಾಸ್ತ್ರದಲ್ಲಿ ತಿಳಿವಳಿಕೆಯೂ ತದನುಸಾರವಾದ ಆಚರಣೆಯೂ ಇದ್ದರೆ ಅದು ಅವರ ಉನ್ನತಿಗೆ ಕಾರಣವಾಗಿ ಇರುವುದು. ಈ ಕಾಲದಲ್ಲಿ ಸ್ತ್ರೀಜಾತಿಗೆ ಇದೆರಡೂ ಇಲ್ಲ. ಇದಕ್ಕೆ ಶಾಸ್ತ್ರಜ್ಞಾನವಿಲ್ಲದೆ ಇರುವುದೇ ಮುಖ್ಯಕಾರಣವು. ಈ ಭರತಖಂಡದಲ್ಲಿ ಧರ್ಮಶಾಸ್ತ್ರ, ನೀತಿಶಾಸ್ತ್ರ, ಮತಶಾಸ್ತ್ರ ಮೊದಲಾದುವು ಅತಿ ಕಠಿನವಾದ ಸಂಸ್ಕೃತ ಭಾಷೆಯಲ್ಲಿರುವುದರಿಂದ ಅಕ್ಷರಜ್ಞರಲ್ಲದ ಈಗಿನ ಸ್ತ್ರೀಯರಿಗೆ ಆ ಶಾಸ್ತ್ರಜ್ಞಾನವುಂಟಾಗುವುದು ಗಗನಕುಸುಮದಂತೆ ಅಸಂಭವವು. ಆದುದರಿಂದ ದೇಶದಲ್ಲಿ ವಾಡಿಕೆಯಾಗಿರುವ ಸುಲಭವಾದ ಭಾಷೆಯಲ್ಲಿ ಧರ್ಮಶಾಸ್ತ್ರ, ನೀತಿಶಾಸ್ತ್ರ, ಪುರಾಣ, ಇತಿಹಾಸ ಮೊದಲಾದುವುಗಳನ್ನು ಬರೆದು ಈ ಮೂಲಕವಾಗಿ ಸ್ತ್ರೀಯರಿಗೆ ಜ್ಞಾನವನ್ನುಂಟುಮಾಡುವುದು ವಿಚಾರಪರರಾದ ಪುರುಷರಿಗೆ ಕರ್ತವ್ಯ

ವಾದುದೆಂದು ತಿಳಿದು ಈಚೆಗೆ ದೇಶದಲ್ಲಿ ವಿಚಾರಪರರಾದ ದೊಡ್ಡದೊಡ್ಡ ವಿದ್ವಾಂಸರು ದೇಶಭಾಷೆಯಲ್ಲಿ ಉತ್ತಮವಾದ ಗ್ರಂಥಗಳನ್ನು ರಚಿಸಿ ಸ್ತ್ರೀಯರಿಗೆ ಜ್ಞಾನಾಭಿವೃದ್ಧಿ ಉಂಟಾಗುವಂತೆ ಯತ್ನಮಾಡುತ್ತಾ ಇದ್ದಾರೆ. ಇದನ್ನು ನೋಡಿ ನಾನು ಬಹಳ ಸಂತೋಷಪಡುತ್ತೇನೆ. ಇಂಥ ಉಪಕಾರಕ್ಕಾಗಿ ಸ್ತ್ರೀಯರು ಅವರಿಗೆ ಕೃತಜ್ಞರಾಗಿರುವುದರಲ್ಲಿ ಸಂಶಯವಿಲ್ಲ.

ದೊಡ್ಡದೊಡ್ಡ ಗ್ರಂಥಗಳಲ್ಲಿ ಸ್ತ್ರೀನೀತಿಯು ಹೇಳಲ್ಪಟ್ಟಿದೆ. ಅದು ಅತಿ ವಿಸ್ತಾರವಾಗಿಯೂ ದುರವಗಾಹವಾಗಿಯೂ ಇರುವುದರಿಂದ ಸ್ತ್ರೀಯರು ತಿಳಿಯಲಶಕ್ಯವಾಗಿದೆ ಎಂದು ಮೇಲೆ ಹೇಳಿದ್ದೇನೆ. ಈಗ ದೊಡ್ಡ ದೊಡ್ಡ ವಿದ್ವಾಂಸರು ಸ್ತ್ರೀಯರಿಗೆ ನೀತಿಜ್ಞಾನ ಉಂಟಾಗುವುದಕ್ಕಾಗಿ ಸುಲಭವಾದ ಭಾಷೆಯಲ್ಲಿ ಉತ್ತಮವಾದ ಗ್ರಂಥಗಳನ್ನು ಬರೆದು ಇದ್ದಾರೆ. ಆದರೆ ಆ ಗ್ರಂಥಗಳು ಅನ್ಯೋಕ್ತಿರೂಪವಾಗಿಯೂ ಆಖ್ಯಾನರೂಪವಾಗಿಯೂ ಇರುವುದರಿಂದ ಕೆಲವು ಅಂಶಗಳು ತಿಳಿವುದಕ್ಕೆ ಅವಶ್ಯಕವಾಗಿವೆ. ಅವುಗಳಲ್ಲಿರುವ ಸಾರವನ್ನು ವಿಚಾರಮಾಡಿ ಅದರಂತೆ ಆಚರಿಸುವ ಯೋಗ್ಯತೆ ಸ್ತ್ರೀಯರಿಗೆ ಅದ್ಯಾಪಿ ಉಂಟಾಗಿಲ್ಲ. ಆದಕಾರಣ ಅಂಥ ಗ್ರಂಥಗಳ ಸಾರವನ್ನು ತಿಳಿದು ವಿವರಿಸತಕ್ಕುದು ಅವಶ್ಯಕವೆಂದು ಆ ಗ್ರಂಥಸಂಪಾದನೆಗಾಗಿ ನಾನು ಬಹಳವಾಗಿ ಪ್ರಯತ್ನಿಸಿದೆನು. ಇದುವರೆಗೂ ನಾನು ನೋಡಿದುದರಲ್ಲಿ ಇಂಥ ಗ್ರಂಥವಾವುದೂ ಕಾಣಿಸಲಿಲ್ಲ. ಇದಕ್ಕೆ ನನ್ನ ಅಲ್ಪಜ್ಞತೆಯೇ ಕಾರಣವಾಗಿರಬಹುದು. ಇಷ್ಟು ದೊಡ್ಡ ದೇಶದಲ್ಲಿ ಇಂಥ ಕೊರತೆಯನ್ನು ಕಲ್ಪಿಸುವುದು ಉಚಿತವಲ್ಲ. ಅದು ಹೇಗಾದರೂ ಇರಲಿ. ಅದರ ವಿಚಾರವನ್ನು ಮಾಡದೆ ನನ್ನ ಅಲ್ಪಬುದ್ಧಿಯ ಸಹಾಯದಿಂದ ಒಂದು ಚಿಕ್ಕ ಪುಸ್ತಕವನ್ನು ಬರೆಯಬೇಕೆಂದು ಇಚ್ಛೈಸಿ "ಸ್ತ್ರೀಧರ್ಮನೀತಿ" ಎಂಬ ಈ ಪುಸ್ತಕವನ್ನು ಬರೆದೆನು. ಈ ಗ್ರಂಥದಲ್ಲಿ ನನ್ನ ಅಲ್ಪಜ್ಞತೆಯಿಂದ ದ್ವಿರುಕ್ತಿಯೂ, ಅಸಾಂಗತ್ಯವೂ, ಅಪಶಬ್ದಗಳೂ ಬಹಳವಾಗಿರುವುವು. ಆದರೆ ಮಹಾರಾಷ್ಟ್ರಭಾಷೆಯಲ್ಲಿ ನಾನು ಪುಸ್ತಕವನ್ನು ರಚಿಸಿದುದು ಇದೇ ಮೊದಲಾದುದರಿಂದ ಅಭಿಜ್ಞರಾದವರು ದೋಷವನ್ನೆಣಿಸಲಾರರು. ಮುಖ್ಯವಾಗಿ ಪರೀಕ್ಷಕರಾದವರು ಪಕ್ಷಪಾತವಿಲ್ಲದೆ ಇದರಲ್ಲಿರುವ ಗುಣ

ದೋಷಗಳನ್ನು ವಿವರಿಸಬೇಕೆಂದು ನನ್ನ ಪ್ರಾರ್ಥನೆಯು. ಏತಕ್ಕೆಂದರೆ ಮುಂದೆ ನಾನು ಯಾವಾಗಲಾದರೂ ಇಂಥ ಪುಸ್ತಕವನ್ನು ಬರೆಯಬೇಕಾದಲ್ಲಿ ನನ್ನ ಶಕ್ತ್ಯನುಸಾರವಾಗಿ ಶೋಧನೆಯಲ್ಲಿ ನನಗೆ ಲಕ್ಷ್ಯವುಂಟಾಗುತ್ತದೆ.

ಸ್ವಾನುಭವದಿಂದಲೂ ವಿದ್ವತ್ಸಂಭಾಷಣೆಯಿಂದಲೂ ಅನೇಕ ನೀತಿಗ್ರಂಥಗಳನ್ನು ಓದಿದುದರಿಂದಲೂ ಒಳ್ಳೆಯದೆಂದು ತೋರಿದ ವಿಷಯವನ್ನು ಸಂಗ್ರಹಿಸಿ ಈ ಗ್ರಂಥದಲ್ಲಿ ಬರೆದಿದ್ದೇನೆ. ಈ ಪುಸ್ತಕವನ್ನು ಮುದ್ರಿಸುವಾಗ ಇಲ್ಲಿನ ಫೀಮೇಲ್ ಟ್ರೇನಿಂಗ್ ಕಾಲೇಜಿನ ಮರಾಟಿಭಾಷೆಯ ಶಿಕ್ಷಕರಾದ ಮ॥ ರಾ॥ ರಾ॥ ಗಣೇಶದಾಜಿ ವಗ್ರೆಯವರು ಕೊನೆಯವರೆಗೂ ತಮ್ಮ ಅಮೂಲ್ಯವಾದ ಹೊತ್ತನ್ನು ವಿನಿಯೋಗಿಸಿ ಪ್ರೂಫನ್ನು ಶೋಧಿಸಿದರು. ಅವರ ಪರಾರ್ಥವಾದ ಉಪಕಾರಕ್ಕಾಗಿ ಯಾವಜ್ಜೀವವೂ ಕೃತಜ್ಞತೆಯಿಂದಿರುವೆನು. ಮುಖ್ಯವಾಗಿ ನನ್ನ ಪ್ರಯತ್ನವು ಸ್ತ್ರೀಯರಿಗೋಸ್ಕರವಾಗಿಯೇ ಇರುವುದರಿಂದ ಅವರು ದಯವಿಟ್ಟು ಇದರಲ್ಲಿ ಲಕ್ಷ್ಯವಿಡಬೇಕು. ಕಾದಂಬರಿಯಲ್ಲಿ ವರ್ಣಿಸಿರುವಂತೆ ನಾಯಿಕಾ ನಾಯಕ ವರ್ಣನೆಯೇ ಮೊದಲಾದ ರಸಭರಿತವಾದ ಆಖ್ಯಾನವು ಈ ಗ್ರಂಥದಲ್ಲಿ ಇಲ್ಲದೆ ಇರುವಕಾರಣ ರಸಿಕಜನರು ಇದನ್ನು ತಿರಸ್ಕರಿಸದೆ ಕಾದಂಬರೀ ಕಾವ್ಯದ ಮಧುರ ರಸ ಸೇವನೆಯಿಂದ ಉಂಟಾದ ಬೆಗಡನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಈ ಗ್ರಂಥವನ್ನು ವ್ಯಂಜನದಂತೆ ಭಾವಿಸಬೇಕೆಂದು ವಿನಯಪೂರ್ವಕವಾಗಿ ವಿಜ್ಞಾಪಿಸುತ್ತೇನೆ.

ಗ್ರಂಥಕರ್ತ್ರೀ.

ಶ್ರೀರಸ್ತು.

# ಸ್ತ್ರೀಧರ್ಮನೀತಿ.

## ೧ನೆಯ ಪರಿಚ್ಛೇದ.

### ಪೀಠಿಕೆ.

ಚೆನ್ನಾಗಿ ಅಸ್ತಿಭಾರವನ್ನು ಹಾಕದೆ ಮನೆಯನ್ನು ಕಟ್ಟಿದರೆ ಅದು ಬಹುದಿವಸ ನಿಲ್ಲುವುದಿಲ್ಲ; ಇದಲ್ಲದೆ ಆ ಪ್ರಕಾರ ಮನೆಯನ್ನು ಕಟ್ಟುವವನಿಗೆ ಎರಡರಷ್ಟು ವ್ರಯವೂ ದೇಹಾಯಾಸವೂ ಉಂಟಾಗಿ ಅವನು ಇತರರ ಹಾಸ್ಯಕ್ಕೂ ಆಸ್ಪದನಾಗುತ್ತಾನೆ. ಆದುದರಿಂದ ಯಾವಕೆಲಸ ಮಾಡಬೇಕಾದರೂ ಚೆನ್ನಾಗಿ ವಿಚಾರಮಾಡಿ ಮೊದಲು ದೃಢವಾಗಿ ಆ ಕೆಲಸಕ್ಕೆ ತಕ್ಕ ಅಸ್ತಿಭಾರವನ್ನು ಹಾಕಬೇಕು; ಹಾಗೆ ಮಾಡದೆ ಹೋದರೆ ಆರಂಭಿಸಿದ ಕೆಲಸವು ಚಿಕ್ಕದಾದರೂ ಸಿದ್ಧಿಸುವುದಿಲ್ಲ.

ನಮ್ಮ ಸ್ತ್ರೀಜನರಿಗೆ ಪಶುಗಳಂತೆ ಅಜ್ಞಾನದಿಂದುಂಟಾಗಿರುವ ದುರ್ದಶೆ ಎಲ್ಲರಿಗೂ ತಿಳಿದೇ ಇದೆ. ಇದರ ನಿವಾರಣೆಗೆ ಉಪಾಯವೇನು? ಮತ್ತು ಆ ಉಪಾಯಕ್ಕೆ ಹೇಗೆ ಅಸ್ತಿಭಾರವನ್ನು ಹಾಕಬೇಕೆಂಬುದನ್ನು ವಿಚಾರಮಾಡೋಣ.

ಪ್ರಪಂಚದಲ್ಲಿ ಅಭ್ಯುದಯವನ್ನು ಪಡೆಯಬೇಕೆಂಬ ಅಪೇಕ್ಷೆಯು ಎಲ್ಲರ ಮನಸ್ಸಿನಲ್ಲಿಯೂ ಜಾಗರೂಕವಾಗಿರುತ್ತದೆ. ಇದು ಸ್ವಾಭಾವಿಕವೇ ಸರಿ. ಇತರ ವಿಷಯಗಳಲ್ಲಿ ತಮ್ಮ ತಮ್ಮ ಪ್ರಕೃತಸ್ಥಿತಿಯನ್ನು

ಅನುಸರಿಸಿ ಸಂತೋಷಪಟ್ಟುಕೊಂಡಿರುವುದು ಮನುಷ್ಯರಲ್ಲಿ ಶ್ಲಾಘ್ಯವಾದುದೇ; ಆದರೆ ವಿದ್ಯೆ, ಜ್ಞಾನ, ಅಭ್ಯುದಯ ಈ ಮೂರು ವಿಷಯದಲ್ಲಿ ತಮಗೆ ಇರುವಷ್ಟೇ ಸಾಕೆಂದು ಸುಮ್ಮನೆ ಕುಳಿತಿರುವುದು ಯುಕ್ತವಲ್ಲ. ದೇವರು ಮನುಷ್ಯನಿಗೆ ಕೊಟ್ಟಿರುವ ವೃತ್ತಿಗಳಲ್ಲಿ ತನ್ನ ಅಭ್ಯುದಯವನ್ನು ಮಾಡಿಕೊಳ್ಳಬೇಕೆಂಬ ಇಚ್ಛೆಯು ದೊಡ್ಡದಾದುದು. ಆದುದರಿಂದಲೇ ಮನುಷ್ಯನು ಎಷ್ಟು ದೊಡ್ಡ ಪದವಿಯನ್ನು ಪಡೆದಿದ್ದರೂ ಅದಕ್ಕಿಂತಲೂ ಹೆಚ್ಚಾದ ಪದವಿಯನ್ನು ಪಡೆಯಬೇಕೆಂಬ ಅಪೇಕ್ಷೆ ಹುಟ್ಟುತ್ತಲೇ ಇರುವುದು. ಈ ಅಪೇಕ್ಷೆಯನ್ನು ದೇವರು ಮನುಷ್ಯರ ಹಿತಕ್ಕೋಸ್ಕರವೆ ಕೊಟ್ಟು ಇದಾನೆಂದು ತಿಳಿಯಬೇಕು. ಏತಕ್ಕೆಂದರೆ ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೂ ಈ ಅಪೇಕ್ಷೆ ನೆಲೆಗೊಂಡಿದ್ದರೆ ತನ್ನತನ್ನ ಅಭಿವೃದ್ಧಿಗಾಗಿ ಪ್ರತಿಯೊಬ್ಬನೂ ಪ್ರಯತ್ನಪಡುವನು; ಹೀಗೆ ಎಲ್ಲರೂ ಪ್ರಯತ್ನಮಾಡುವುದರಿಂದ ದೇಶವೆಲ್ಲಾ ಅಭಿವೃದ್ಧಿಯನ್ನು ಹೊಂದಬಹುದು.

ಮೇಲೆ ಹೇಳಿದ ವೃತ್ತಿಯು ಯಾವ ಮನುಷ್ಯನಲ್ಲಿ ಹೆಚ್ಚು ವುದೊ ಆ ಮನುಷ್ಯನು ಒಳ್ಳೆಯದಾರಿಯನ್ನು ಹಿಡಿದರೆ ಎಲ್ಲಾ ವಿಧವಾದ ಹಿತಕ್ಕೂ ಕೆಟ್ಟದಾರಿಯನ್ನು ಹಿಡಿದರೆ ನಾನಾವಿಧವಾದ ಅನರ್ಥಗಳಿಗೂ ಕಾರಣವಾಗುತ್ತದೆ. ಆದುದರಿಂದ ಈ ವೃತ್ತಿಯು ಬೆಳೆದ ಹಾಗೆಲ್ಲಾ ಸನ್ಮಾರ್ಗವನ್ನು ಹಿಡಿಯಬೇಕು. ಅದರಿಂದ ಎಲ್ಲರಿಗೂ ಒಳ್ಳೆಯದಾಗುತ್ತದೆ. ಈ ಅಭ್ಯುದಯವನ್ನು ಪಡೆಯಬೇಕೆಂಬ ಇಚ್ಛೆಯು ಸ್ತ್ರೀಯರಿಗೂ ಇರುತ್ತದೆ. ಪರಂತು ನಮ್ಮ ದೇಶದ ಸ್ತ್ರೀಯರನ್ನು ಉತ್ತಮಸ್ಥಿತಿಗೆ ತರುವ ಮಾರ್ಗವು ಸಂಪೂರ್ಣವಾಗಿ ಮುಚ್ಚಿ ಹೋಗಿರುವಂತೆ ಕಾಣಬರುವುದರಿಂದ ಅದನ್ನು ತೆರೆವ ಮಾರ್ಗವು ಯಾವದು ಎಂಬುದನ್ನು ಈಗ ಆಲೋಚನೆ ಮಾಡಬೇಕಾಗಿದೆ.

ಹೆಂಗಸರು ಮೊದಲೇ ಅಜ್ಞಾನಿಗಳಾಗಿಯೂ ಬಲವಿಲ್ಲದವರಾಗಿಯೂ ಇರುತ್ತಾರೆ, ಇದಲ್ಲದೆ ಪರಾಧೀನರು. ಜ್ಞಾನಿಗಳಾಗಿ ಉತ್ತಮಸ್ಥಿತಿಗೆ ಬರುವ ಮಾರ್ಗವು ಅವರಿಗೆ ತಿಳಿವುದಿಲ್ಲ, ಹೀಗೆ ಇರುವಾಗ ಅವರು ಏನು ಮಾಡಬಲ್ಲರು? ಎಂದು ಕೆಲವರು ಹೇಳುತ್ತಾರೆ. ಪರಂತು ವಿಚಾರಮಾಡಿದಲ್ಲಿ ಈ ರೀತಿಯಾಗಿ ನಿರುಪಾಯವಾಗಿ ಕೂಡುವುದಕ್ಕೆ

ಕಾರಣವಿಲ್ಲವೆಂದು ಕಾಣುತ್ತದೆ. ಪರಮೇಶ್ವರನು ಪಶುಪಕ್ಷಿಗಳೇ ಮೊದಲಾದ ಅಜ್ಞಾನ ಜಂತುಗಳಿಗೂ ಸ್ವತಃ ತಮ್ಮ ತಮ್ಮ ಹಿತವನ್ನು ಮಾಡಿಕೊಳ್ಳತಕ್ಕ ಶಕ್ತಿಯನ್ನು ಕೊಟ್ಟು ಇದ್ದಾನೆ. ಆದುದರಿಂದ ಎಲ್ಲಕ್ಕಿಂತಲೂ ಶ್ರೇಷ್ಠವಾದ ಮನುಷ್ಯಜಾತಿಗೆ ಆತನು ಅಂಥ ಶಕ್ತಿಯನ್ನು ಕೊಟ್ಟಿಲ್ಲವೆಂಬುದು ಅಸಂಭಾವಿತವೆಂದು ಹೇಳಬೇಕಾಗಿದೆ. ಸಂಸಾರದಲ್ಲಿ ಮತ್ತೊಬ್ಬನ ಸಹಾಯವಿಲ್ಲದೆ ಯಾರಿಗೂ ನಡೆವುದಿಲ್ಲ. ಈ ಸ್ಥಿತಿಗೆ ಪರಾಪೇಕ್ಷೆಯೆಂದು ಹೆಸರು. ಇದು ಸರ್ವಪ್ರಾಣಿಗಳಿಗೂ ಇರುವಂತೆ ಸ್ತ್ರೀಯರಿಗೂ ಇದೆ. ಆದರೆ ಸ್ತ್ರೀಯರಿಗೆ ಎಲ್ಲಾ ಭಾಗದಲ್ಲಿಯೂ ಪರಾಧೀನತೆ ಉಂಟೆಂದು ಹೇಳುವುದಕ್ಕಾಗುವುದಿಲ್ಲ.

ನಾವು ಉನ್ನತಸ್ಥಿತಿಯನ್ನು ಪಡೆಯಬೇಕೆಂದು ನಮಗೆ ಅಪೇಕ್ಷೆಯುಂಟು; ಆದರೆ ಆ ಪ್ರಕಾರ ಪಡೆವಂತೆ ಯಾವ ಪ್ರಯತ್ನವನ್ನು ಮಾಡುವುದಕ್ಕೂ ನಮಗೆ ಮಾರ್ಗವಿಲ್ಲವೆಂದು ಅನೇಕ ಹೆಂಗಸರು ಹೇಳುತ್ತಾರೆ. ಏಕೆಂದರೆ ಅವರು ಯಾವಾಗಲೂ ಇತರರನ್ನು ಅವಲಂಬಿಸಿಕೊಂಡಿರಬೇಕಾಗಿದೆ. ಇದರಲ್ಲಿ ಕೆಲವಂಶವು ನಿಜವಾಗಿದೆ; ಆದರೆ ತಮ್ಮ ಉನ್ನತಸ್ಥಿತಿಯು ತಮ್ಮ ಪ್ರಯತ್ನದಿಂದಲೇ ಸಾಧ್ಯವಾಗಿದೆ. ಈಶ್ವರನು ಮನುಷ್ಯರಿಗೆ ತಾವು ದೊಡ್ಡವರಾಗಬೇಕೆಂಬ ಕೋರಿಕೆಯನ್ನು ಕೊಟ್ಟಿರುವಂತೆಯೆ ಆ ಕೋರಿಕೆಯನ್ನು ಪೂರ್ಣಮಾಡಿಕೊಳ್ಳತಕ್ಕ ಶಕ್ತಿಯನ್ನೂ ಕೊಟ್ಟಿದ್ದಾನೆ. ತಮ್ಮ ಉನ್ನತ ಸ್ಥಿತಿಯನ್ನು ಅಭಿವೃದ್ಧಿಮಾಡಿಕೊಳ್ಳುವ ಉಪಾಯವು ಎಲ್ಲಾ ಮನುಷ್ಯರಿಗೂ ಪ್ರಯತ್ನಸಾಧ್ಯವಾಗಿದೆ. ಇದಕ್ಕಾಗಿ ಇತರರನ್ನು ಅವಲಂಬಿಸುವುದು ಅನವಶ್ಯವು. ಮನುಷ್ಯರು ಏಕಾಗ್ರಚಿತ್ತರಾಗಿ ಆಲಸ್ಯವನ್ನು ಬಿಟ್ಟು ಪ್ರಯತ್ನಮಾಡಬೇಕು. ಹಾಗೆ ಪ್ರಯತ್ನಮಾಡಿದರೆ ಸ್ತ್ರೀಯರು ಕೂಡ ಸ್ವಲ್ಪ ಕಾಲದಲ್ಲಿಯೇ ಉನ್ನತಸ್ಥಿತಿಗೆ ಬರುವ ವಿಷಯದಲ್ಲಿ ಸಂಶಯವಿಲ್ಲ.

ಲೋಕದಲ್ಲಿ ಜನರು ತಮಗೆ ಮಾರ್ಗತಿಳಿಯದೆ ಇದ್ದರೆ ಇತರರು ನಡೆವ ಮಾರ್ಗವನ್ನು ಕೇಳಿ ತಿಳಿದು ತಾವು ಕೂಡ ಆ ಮಾರ್ಗವನ್ನು ಹಿಡಿದು ಹೋಗುತ್ತಾರೆ. ಇದರಂತೆ ಉನ್ನತರಾಗುವ ಉಪಾಯವು ನಮಗೆ ತಿಳಿಯದಿದ್ದರೆ ಆಗ ದೊಡ್ಡವರು ಯಾವ ಉಪಾಯದಿಂದ ಹೇಗೆ

ಉನ್ನತರಾದರೆಂಬುದನ್ನು ನೋಡಿ, ಕೇಳಿ, ತಿಳಿದುಕೊಂಡು, ಅವರಂತೆ ನಡೆಯಬೇಕು. ಉನ್ನತಪದವಿಯನ್ನು ಪಡೆವುದಕ್ಕೆ ಇದೊಂದು ಮಾರ್ಗವು.

ಆತ್ಮಾವಲಂಬನವೆಂದರೆ ತನ್ನನ್ನು ತಾನು ಅವಲಂಬಿಸಿಕೊಂಡಿರೋಣವು; ಇದು ಉನ್ನತರಾಗುವುದಕ್ಕೆ ಅನುಪಮವಾದ ಒಂದು ಉಪಾಯವಾಗಿದೆ. ಈ ಪ್ರಪಂಚದಲ್ಲಿ ಈಗ ಯಾರು ಯಾರು ದೊಡ್ಡವರೆಂದೂ ಯಶಸ್ವಿಗಳೆಂದೂ ಪ್ರಸಿದ್ಧರಾಗಿದ್ದಾರೋ ಅವರೆಲ್ಲರೂ ಆತ್ಮಾವಲಂಬಿಗಳಾಗಿ ದೊಡ್ಡ ಪದವಿಯನ್ನು ಪಡೆದವರಾಗಿದ್ದಾರೆ. ಇದೊಂದು ಗುಣವು ಮನುಷ್ಯನಲ್ಲಿ ಇದ್ದರೆ ಪರಿಶ್ರಮ, ಉತ್ಸಾಹ, ಸ್ಥೈರ್ಯ, ಸತ್ಯಪ್ರತಿಜ್ಞತೆ ಮುಂತಾದುವುಗಳೆಲ್ಲವೂ ತಮ್ಮಿಷ್ಟಕ್ಕೆ ತಾವೇ ಅವನನ್ನು ಅನುಸರಿಸಿಕೊಂಡು ಬರುತ್ತವೆ. ಮೇಘಗಳನ್ನಗಲಿ ಮಿಂಚುಗಳು ಹೇಗೆ ಇರುವುದಿಲ್ಲವೋ ಹಾಗೆಯೇ ಈ ಗುಣಗಳನ್ನು ಬಿಟ್ಟು ಉನ್ನತಿ ಇರುವುದಿಲ್ಲ.

ತನ್ನನ್ನು ತಾನು ಅವಲಂಬಿಸದೆ ಎಲ್ಲಾ ವಿಷಯಕ್ಕೂ ಇತರರನ್ನೇ ಅಪೇಕ್ಷಿಸುವ ಮನುಷ್ಯನಲ್ಲಿ ಮೇಲೆ ಹೇಳಿದ ಗುಣಗಳು ಸರ್ವಥಾ ಇರುವುದಿಲ್ಲವಾದುದರಿಂದ ಅವನು ಎಂದಿಗೂ ಅಭಿವೃದ್ಧಿಗೆ ಬರುವುದಿಲ್ಲ.

"ಯಾವನು ತನ್ನ ಸಹಾಯವನ್ನು ತಾನೇ ಮಾಡಿಕೊಳ್ಳುತ್ತಾನೋ ಅವನಿಗೆ ದೇವರು ಸಹಾಯಮಾಡುತ್ತಾನೆ." ಎಂದು ಒಂದು ಗಾದೆ ಇದೆ. ಈ ಗಾದೆಯು ನಿಜಸ್ಥಿತಿಯನ್ನು ಹೇಳುವ ಪ್ರಮಾಣಗಳು ಪ್ರಪಂಚದಲ್ಲಿ ಪ್ರಾಯೇಣ ಎಲ್ಲಾ ಕಡೆಯಲ್ಲಿಯೂ ಉಂಟು. ದೇವರು ಮನುಷ್ಯನಿಗೆ ಬುದ್ಧಿಯನ್ನೂ ವಿಚಾರಶಕ್ತಿಯನ್ನೂ ಕೊಟ್ಟಿರುವುದರಿಂದ ಇವುಗಳು ಕ್ರಮೇಣ ಪರಿಪಕ್ವವಾಗುವುವು. ಇವುಗಳ ಸಹಾಯದಿಂದ ಮನುಷ್ಯನು ಆತ್ಮಾವಲಂಬಿಯಾಗಿ ತನ್ಮೂಲಕ ಕ್ರಮೇಣ ಉನ್ನತಿಯನ್ನು ಪಡೆವುದು ಸಹ ಸಹಜಧರ್ಮವೆಂದು ಎಣಿಸತಕ್ಕುದು.

ಪಶು ಪಕ್ಷಿ ಮೊದಲಾದ ಪ್ರಾಣಿಗಳಲ್ಲಿರುವಂತೆಯೇ ಮನುಷ್ಯರಲ್ಲಿಯೂ ಪರಾಪೇಕ್ಷೆ ಇರುವುದೆಂದೂ, ಇಷ್ಟುಮಾತ್ರಕ್ಕೇ ಮನುಷ್ಯರಿಗೆ ಸರ್ವಾಂಶದಲ್ಲಿಯೂ ಪರಾಧೀನತೆಯಿದೆ ಎಂದು ಹೇಳಬಾರದೆಂದೂ

ಹಿಂದೆ ಹೇಳಲ್ಪಟ್ಟೇ ಇದೆ. ಒಬ್ಬ ಮನುಷ್ಯನು ಶ್ರಮಪಟ್ಟು ಮತ್ತೊಬ್ಬನ ಕೆಲಸವನ್ನು ಮಾಡಿದರೆ ಅವನು ಇವನಿಗೆ ಆ ಕೆಲಸಕ್ಕೋಸ್ಕರ ಹಣವನ್ನು ಕೊಟ್ಟಾಗಲಿ ಅಥವಾ ಇತರ ವಿಧವಾಗಿಯಾಗಲಿ ಸಂತೋಷ ಪಡಿಸಿದಲ್ಲಿ ಇವರಲ್ಲಿ ಯಾರನ್ನು ಪರಾಧೀನರೆಂದೆನ್ನಬೇಕು? ಪ್ರಪಂಚ ದಲ್ಲಿ ಸಂಸಾರ ನಡೆಯಿಸಿಕೊಳ್ಳಬೇಕಾದರೆ ಎಲ್ಲರಿಗೂ ಎಲ್ಲರ ಸಹಾಯವೂ ಬೇಕಾಗುತ್ತದೆ. ಎಲ್ಲರೂ ಒಂದಲ್ಲದಿದ್ದರೆ ಇನ್ನೊಂದು ರೀತಿಯಲ್ಲಿ ಇತರರ ಅಧೀನದಲ್ಲಿ ಇರಬೇಕಾಗಿ ಇದೆ. ಹೀಗಲ್ಲದಿದ್ದರೆ ಜನ ಸಮುದಾಯವು ಹಗ್ಗವಿಲ್ಲದೆ ಉನ್ಮತ್ತವಾದ ಕುರುಡ ಕುದುರೆಯಂತೆ ವಿಚಾರಶೂನ್ಯವಾಗಿ ಮನಸ್ಸಿಗೆ ಬಂದರೀತಿಯಲ್ಲಿ ತಿರುಗಿ ಕೊನೆಗೆ ವಿಪತ್ತನ್ನು ಹೊಂದುವುದು. ಈ ಸ್ಥಿತಿಯನ್ನು ಸ್ವಾಧೀನತೆಯೆನ್ನಬಾರದು. ಇದನ್ನು ಸ್ವೇಚ್ಛಾಚರಣೆಯೆನ್ನಬೇಕು.

ಒಬ್ಬ ಮನುಷ್ಯನು ಮತ್ತೊಬ್ಬನಿಗೆ ಉಪಕಾರವನ್ನು ಮಾಡಿ ಅವನಿಂದ ಪ್ರತ್ಯುಪಕಾರವನ್ನು ಮಾಡಿಸಿಕೊಳ್ಳುವುದರಿಂದ ಆತನ ಸ್ವಾಧೀನತೆಗೆ ಎಷ್ಟುಮಾತ್ರವೂ ನ್ಯೂನತೆ ಇಲ್ಲ. ತಮ್ಮ ಮನಸ್ಸನ್ನೂ ಬುದ್ಧಿಯನ್ನೂ ತಮಗೆ ಒಳ್ಳೆಯದೆಂದು ಕಾಣಬರುವಕಡೆಗೆ ವಿನಿಯೋಗಿಸಿ ಹಿತವನ್ನು ಪಡೆಯಲಿಕ್ಕೆ ಎಲ್ಲರೂ ಸ್ವತಂತ್ರರಾಗಿದ್ದಾರೆ. ಆದುದರಿಂದ ಸ್ವಾತಂತ್ರ್ಯದಿಂದ ತಮ್ಮನ್ನು ತಾವೇ ಅವಲಂಬಿಸಿಕೊಂಡು ತಮ್ಮ ಸ್ಥಿತಿಯನ್ನು ಅಭಿವೃದ್ಧಿಪಡಿಸಿಕೊಳ್ಳುವ ಶಕ್ತಿ ಎಲ್ಲಾ ಮನುಷ್ಯರಲ್ಲಿಯೂ ಇದೆ ಎಂಬುವದು ಇದರಿಂದ ಸಿದ್ಧವಾಗಿದೆ.

ಆತ್ಮಾವಲಂಬನವು ಉನ್ನತಿಯನ್ನು ಪಡೆಯಲಿಕ್ಕೆ ಉತ್ತಮವಾದ ಉಪಾಯವೆಂದು ಮೇಲೆ ಹೇಳಲ್ಪಟ್ಟದೆಯಷ್ಟೆ; ಆ ಪ್ರಕಾರ ಮನುಷ್ಯರು ಆತ್ಮಾವಲಂಬನದಿಂದ ಯಾವುದಾದರೂ ಕೆಲಸವನ್ನು ಮಾಡಿದರೆ ಅದರ ಫಲವು ಸ್ವಲ್ಪವಾದರೂ ಅವರಿಗೆ ಸುಖದಾಯಕವಾಗುತ್ತದೆ. ಇತರರ ಅವಲಂಬನದಿಂದ ಮಾಡಿದ ಕೆಲಸದ ಫಲವು ಅದಕ್ಕಿಂತಲೂ ದೊಡ್ಡದಾದರೂ ಅಷ್ಟು ಸುಖಪ್ರದವಾಗುವುದಿಲ್ಲ. ಆತ್ಮಾವಲಂಬಿಗಳಾಗಿರುವವರು ದಿನೇದಿನೇ ಹೇಗೆ ಉತ್ಸಾಹಿಗಳೂ ಸುಖಿಗಳೂ ಆಗುತ್ತಾ ಬರುವರೋ ಹಾಗೆಯೇ ಪರಾವಲಂಬಿಗಳು ನಿರುತ್ಸಾಹಿಗಳೂ, ತೇಜೋವಿಹೀನರೂ, ಸುಖವಿಲ್ಲದವರೂ, ದೀನರೂ ಆಗುತ್ತಾ ಬರುತ್ತಾರೆ. ನಾವು ಎಷ್ಟೆಷ್ಟು

ಮಟ್ಟಿಗೆ ಜನರ ಸಹಾಯವನ್ನು ಅಪೇಕ್ಷಿಸುತ್ತಾ ಹೋಗುತ್ತೇವೋ ಅಷ್ಟಷ್ಟುಮಟ್ಟಿಗೆ ದಿನಕ್ರಮದಲ್ಲಿ ನಮ್ಮ ಬಲವು ಕಡಮೆಯಾಗುತ್ತಾ ಬರುವುದು ; ಬುದ್ಧಿಯೂ ನಿಸ್ತೇಜಸ್ಕವಾಗುವುದು ; ಕೊನೆಗೆ ನಾವು ಕೇವಲ ದೀನರಾಗಿ ಎಲ್ಲಾ ವಿಷಯಕ್ಕೂ ಇತರರ ಮುಖವನ್ನೇ ನೋಡ ಬೇಕಾಗುವುದು. ಅನಂತರ ನಾವು ಕೇವಲ ನಿರಾಶ್ರಿತರಾಗಿ ಸುಖಪ ಡುವ ಆಶೆಯನ್ನೇ ಬಿಡಬೇಕಾಗುವುದು. ನಮ್ಮಿಂದ ಏನೂ ಸಾಗದು, ಇತರರು ಯಾವ ಸಹಾಯವನ್ನೂ ಮಾಡರು. ಹೀಗಾದಮೇಲೆ ನಮಗೆ ಸುಖದ ಆಶೆಯೇತಕ್ಕೆ? ಯಾರಿಗೆ ಆತ್ಮಾವಲಂಬನವಿಲ್ಲವೋ ಅವರಿಗೆ ಸ್ವಾತಂತ್ರ್ಯವೂ ಇಲ್ಲ. ಮನುಷ್ಯನು ಬದುಕಿದ್ದರೂ ಅನ್ನ ದಂಡ. ಭೂಮಿಗೆ ಭಾರವೆನಿಸಿಕೊಳ್ಳುವ ಸ್ಥಿತಿಯಲ್ಲಿ ಇರುವುದಕ್ಕಿಂತ ಜನ್ಮ ವೆತ್ತದೆ ಇರುವುದಾದರೂ ಮೇಲು; ಹುಟ್ಟುತ್ತಲೇ ಸಾಯುವುದಾದರೂ ಒಳ್ಳೆಯದು.

ಸುಖಕ್ಕೆ ಮುಖ್ಯ ಕಾರಣವಾದ ಆತ್ಮಾವಲಂಬನವು ಈ ಕಾಲದ ಸ್ತ್ರೀಯರಲ್ಲಿ ಬಬ್ಬಿಬ್ಬರಲ್ಲಿ ಇದ್ದಾಗ್ಗೂ ಅವರಿಂದ ಸ್ತ್ರೀಸಮುದಾಯಕ್ಕೆ ವಿಶೇಷ ಪ್ರಯೋಜನವಾಗುವ ಸಂಭವವಿಲ್ಲವು.

ದುಃಖದ ದಶೆಯಲ್ಲಿ ಬಿದ್ದು ಇರುವ ನಮ್ಮ ದೇಶದ ಸ್ತ್ರೀಜನರು ತಮ್ಮ ಉತ್ಕರ್ಷಕ್ಕಾಗಿ ಏನಾದರೂ ಉಪಾಯ ಮಾಡಬೇಕಾಗಿ ಇದ್ದರೆ ಅದರ ಅಸ್ತಿಭಾರವೇ ಆತ್ಮಾವಲಂಬನವಾಗಿರಬೇಕು. ಎಲ್ಲರೂ ಇದನ್ನು ತಮ್ಮ ಕೇವಲ ಕರುಳಿನಂತೆ ಎಣಿಸಿ ಪ್ರತಿಕ್ಷಣದಲ್ಲಿಯೂ ವೃದ್ಧಿಗೊಳಿ ಸಬೇಕು. ಅನಂತರ ತಮ್ಮ ಉನ್ನತಿಗೆ ಯಾವ ವಿಷಯದಿಂದ ಅಡ್ಡಿ ಯಾಗಿದೆ? ಅದರ ನಿವಾರಣೆ ಯೇತರಿಂದ ಆದೀತು? ಎಂಬುದನ್ನೆಲ್ಲಾ ವಿವೇಚನಮಾಡಿ ಪ್ರತಿದಿನವೂ ಸಾಹಸದಿಂದ ಎಲ್ಲಾ ಸ್ತ್ರೀಯರೂ ಈ ಕಾರ್ಯದಲ್ಲಿ ಪ್ರವೃತ್ತರಾದರೆ ಅವರಿಗೆ ಸ್ವಲ್ಪದಿವಸದಲ್ಲಿಯೇ ಲೋಕವ್ಯವ ಹಾರದಲ್ಲಿ ಸತ್ಪುರುಷರಿಗೆ ಈಗ ಇರುವಷ್ಟು ಅಥವಾ ಅದಕ್ಕಿಂತಲೂ ಹೆಚ್ಚಾದ ಗೌರವವುಂಟಾಗುವುದೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಉದ್ಯೋಗವೆಂಬ ಶ್ರೇಷ್ಠವಾದ ಹಿತಪ್ರದವಾದ ಗುಣವನ್ನು ಈಶ್ವರನು ಮನುಷ್ಯನಿಗೆ ಕೊಟ್ಟು ಇದ್ದಾನೆ. ಇದರ ಸಹಾಯದಿಂದ ಮನುಷ್ಯನು ಅಸಾಧ್ಯವಾದ ವಿಷಯವನ್ನಾದರೂ ಸಾಧಿಸಿಕೊಂಡು,

ಅಲಭ್ಯವಾದುದನ್ನಾದರೂ ಪಡೆದುಕೊಂಡು, ಅಮಿತವಾದ ಸುಖವನ್ನೂ ಸನ್ಮಾನವನ್ನೂ ಹೊಂದುತ್ತಾನೆ. ಭೂತಳದಲ್ಲಿ ಜನರು ಇದುವರೆಗೆ ಬಳ್ಳಯ ಕೆಲಸಗಳನ್ನೂ ಅಸಾಧ್ಯಸಾಧನೆಗಳನ್ನೂ ಮಾಡಿ ತಮ್ಮ ಸ್ಥಿರವಾದ ಕೀರ್ತಿಯನ್ನು ನೆಲೆಗೊಳಿಸಿ ಹೋಗಿರುವರು. ಅದೆಲ್ಲಾ ಕೇವಲ ಉದ್ಯೋಗಬಲದಿಂದಲೇ ಹೊರತು ಬೇರೆ ಇಲ್ಲವೆಂಬುದಾಗಿ ನಂಬತಕ್ಕ ಹೊಸಹೊಸದಾದ ದೃಷ್ಟಾಂತವು ನಮ್ಮ ಎದುರಿಗೆ ಇರುವಾಗ, ಸ್ತ್ರೀಜನರು ಉದ್ಯೋಗಮಾಡಿದರೆ ಅವರು ಉನ್ನತಿಯನ್ನು ಪಡೆವು ದಿಲ್ಲವೆಂಬ ಊಹೆಗೂ ಕೂಡ ಮನಸ್ಸಿನಲ್ಲಿ ಅವಕಾಶವನ್ನು ಕೊಡುವುದು ಮೂಢತನವಲ್ಲವೇ ?

ನಮ್ಮ ಸ್ತ್ರೀ ಸಮುದಾಯವೇ ಈ ವಿಷಯದಲ್ಲಿ ದೃಷ್ಟಿ ಇಡು ವುದಿಲ್ಲವಾವುದರಿಂದ ನಾನು ಒಬ್ಬಳು ಇದರಲ್ಲಿ ಏನುಮಾಡಬಲ್ಲೆನು ? ಮತ್ತು ನನ್ನ ಕೆಲಸದಿಂದ ಏನು ಫಲವಾಗಬಹುದು ? ಎಂದು ಹೇಳು ವುದು ಯುಕ್ತವಲ್ಲ. ಈ ಕಾರಣಗಳೆಲ್ಲಾ ಸ್ತ್ರೀಯರ ಕಲ್ಪನೆಗಳೇ ಆಗಿರುವುದರಿಂದ ಅವರೆಲ್ಲರೂ ಹೀಗೆ ಹೇಳುತ್ತಾ ಇದ್ದಾರೆ. ಎಲ್ಲರೂ ಇದೇರೀತಿ ಭಾವಿಸಿ ಇದೇರೀತಿ ಕೆಲಸನಾಡದೆ ಇರುತ್ತಾರೆ. ಪರಂತು ಇದನ್ನು ಬಿಟ್ಟು ತಿಳಿವಳಿಕೆಯಲ್ಲಿ ಉತ್ತಮಳಾದ ಪ್ರತಿಯೊಬ್ಬ ಸ್ತ್ರೀ ಯೂ ನಾನು ಹೇಳುವ ನಾಲ್ಕು ಮಾತುಗಳಮೇಲೆ ದೃಷ್ಟಿಯಿಟ್ಟು ಇತ ರರು ಏನಾದರೂ ಮಾಡಲಿ ಬಿಡಲಿ ನನ್ನ ಮತ್ತು ನನ್ನ ಪರಿವಾರದ ಸ್ತ್ರೀಯರ ಉನ್ನತಿಗೋಸ್ಕರ ನಾನು ಪ್ರಯತ್ನಮಾಡುವುದೇ ಸರಿ ಎಂದು ಹೇಳಿ, ಆ ಕೆಲಸದಲ್ಲಿ ಉದ್ಯುಕ್ತಳಾದರೆ ಕೆಳಗೆ ಬಿದ್ದಿರುವ ನಮ್ಮ ಸ್ತ್ರೀಜಾತಿಗೂ ದೇಶಕ್ಕೂ ಎಷ್ಟು ಔನ್ನತ್ಯವುಂಟಾದೀತು? ಹುಣಿಸೆಯ ಬೀಜಗಳನ್ನು ಅಥವಾ ಅವಕ್ಕಿಂತಲೂ ಸಣ್ಣವುಗಳಾದ ಬೀಜಗಳನ್ನು ನೆಲದಲ್ಲಿ ನೆಟ್ಟರೆ ಕಾಲಕ್ರಮದಲ್ಲಿ ಅವು ದೊಡ್ಡ ವೃಕ್ಷಗಳಾಗಿ ದೇಶದ ಜನರಿಗೆ ಮಹೋಪಕಾರಿಗಳಾಗುವಂತೆ ಪ್ರತಿಯೊಬ್ಬ ಸ್ತ್ರೀಯೂ ತನ್ನ ಉದ್ಯೋಗವೆಂಬ ಸಣ್ಣ ಬೀಜವನ್ನು ನಟ್ಟು ವ್ಯವಸಾಯ ಮಾಡು ತ್ತಾಬಂದರೆ ಕಾಲಕ್ರಮದಿಂದ ಇದರಿಂದಲೂ ನಮ್ಮ ಸ್ತ್ರೀಜಾತಿಗೆ ದೊಡ್ಡ ಉಪಕಾರವಾಗುವುದು.

ಪ್ರತಿಯೊಬ್ಬ ಮನುಷ್ಯನೂ ಸ್ವಲ್ಪಸ್ವಲ್ಪ ಉದ್ಯೋಗಮಾ

ಡುತ್ತಾ ಬಂದರೆ ಎಲ್ಲರಿಗೂ ಉನ್ನತಿಯುಂಟಾಗುವ ವಿಷಯದಲ್ಲಿಯೂ, ಹಾಗೆ ಮಾಡದೆ ಪ್ರತಿಯೊಬ್ಬನೂ ಸೋಮಾರಿಕೆಯಿಂದ ನಾನೇನು ಮಾಡೇನು? ಎಂದು ಸರ್ವದಾ ಯೋಚನೆಯನ್ನೇ ಮಾಡುತ್ತಾ ಕುಳಿತಿದ್ದರೆ ಎಲ್ಲರ ಸ್ಥಿತಿಗೂ ತೊಂದರೆ ಬರುವ ವಿಷಯದಲ್ಲಿಯೂ, ದೃಷ್ಟಾಂತಗಳು ಬೇಕಾದರೆ ಬಹಳದೂರ ಹೋಗಬೇಕಾದ ಅವಶ್ಯಕವಿಲ್ಲ. ನಮ್ಮ ದೇಶದಲ್ಲಿಯೇ ಈ ದೃಷ್ಟಾಂತಗಳು ಸಿಕ್ಕುತ್ತವೆ. ಯೂರೋಪ್‌ಖಂಡದ ಜನರು ನಮ್ಮ ದೇಶದಮೇಲೆ ರಾಜತ್ವವನ್ನು ನಡೆಸುತ್ತಾ ನಮ್ಮ ದೇಶದ ೨೯ ಕೋಟಿ ಪ್ರಜೆಯ ಧನಪ್ರಾಣಮಾನಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡು ನಮ್ಮ ಭರತಖಂಡದಲ್ಲಿಯ ರಾಜರು ಮೊದಲುಗೊಂಡು ರೈತರವರೆಗಿನ ಸಮಸ್ತ ಜನಗಳನ್ನೂ ಸೂತ್ರದ ಕಟ್ಟಿಗೆ ಬೊಂಬೆಗಳಂತೆ ತಮ್ಮ ಅಂಗುಳ್ಯಗ್ರದಲ್ಲಿ ಕುಣಿಸುತ್ತಾ ಇದ್ದಾರೆ. ಈ ಜನರು ನಮ್ಮ ದೇಶದವರಲ್ಲಿ ನಾಲ್ಕರಲ್ಲಿ ಒಂದು ಭಾಗಕ್ಕೂ ಸಾಲದೆ ಇದ್ದರೂ, ಈ ಜನಸಮುದಾಯಕ್ಕೆ ಇಷ್ಟು ಮಹತ್ತ್ವವೇತರಿಂದ ಬಂದಿತು? ಇವರ ಅಲೌಕಿಕಗಳಾದ ಅಸಾಧ್ಯ ಕಲ್ಪನೆಗಳನ್ನೂ ಸಾಹಸದ ಕಾರ್ಯಗಳನ್ನೂ ಪರಾಕ್ರಮವನ್ನೂ ನೋಡಿ, ನಮ್ಮ ದೇಶದ ಆಬಾಲವೃದ್ಧರೂ ಆಶ್ಚರ್ಯದಿಂದ ಸ್ತಬ್ಧರಾಗಿ, ತಮ್ಮ ಮನಸ್ಸಿನಲ್ಲಿ ಇವರ ವಿಷಯವಾಗಿ ನಾನಾ ವಿಧವಾದ ಊಹೆಗಳನ್ನು ಮಾಡುತ್ತಾರೆ. ಇವರಲ್ಲಿ ಕೇವಲ ಮೂಢರಾದವರು ಈ ಯೂರೋಪಿಯನ್ ಜನರನ್ನು ಈಶ್ವರಾಂಶದವರೆಂದೂ, ಇವರಲ್ಲಿ ಮಂತ್ರ ತಂತ್ರದ ಅದ್ಭುತಶಕ್ತಿ ಇರುವುದಾಗಿಯೂ, ಬೇತಾಳಪಂಚವಿಂಶತಿಯಲ್ಲಿ ಹೇಳಲ್ಪಟ್ಟ ಬೇತಾಳದ ದಂಡೇ ಇವರ ಆಜ್ಞಾನುವರ್ತಿಯಾಗಿರುವುದಾಗಿಯೂ, ಇರುವುದರಿಂದ ಈ ಜನರು ಇಷ್ಟು ದುರ್ಘಟವಾದ ಕೆಲಸಗಳನ್ನು ಮಾಡುವರೆಂದೂ ಹೇಳಿಕೊಳ್ಳುತ್ತಾರೆ.

ವಿಚಾರಮಾಡಿ ನೋಡಿದರೆ ಇವರು ಒಂದು ದೊಡ್ಡ ಮಂತ್ರಸಾಧನಬಲದಿಂದ ದುರ್ಘಟವಾದ ಎಲ್ಲಾ ಕೆಲಸಗಳನ್ನೂ ಸ್ವಲ್ಪ ಶ್ರಮದಿಂದಲೇ ಸಾಧಿಸಿಕೊಂಡು ತಮ್ಮ ಸಮುದಾಯವನ್ನು ಉನ್ನತಿಗೆ ತರುತ್ತಾರೆಂದು ಕಾಣುತ್ತದೆ. ಈ ಜನರಲ್ಲಿ ಪ್ರತಿ ಮನುಷ್ಯನೂ ಮಾಡುವ ಸಂಗತನಾದ ಉದ್ಯೋಗವೇ ಈ ಮಂತ್ರವಾಗಿದೆ. ಇವರು ಹಿಡಿವ ಕೆಲ

ಸವು ಸಣ್ಣದಾಗಲಿ ದೊಡ್ಡದಾಗಲಿ ಒಳ್ಳೆಯದಾಗಲಿ ಕೆಟ್ಟುದಾಗಲಿ ಅದು ಕೊನೆಮುಟ್ಟುವವರೆಗೂ ಅದನ್ನು ಬಿಡದೆ ಇರುವುದು ಇವರಿಗೆ ಸ್ವಾಭಾವಿಕವಾಗಿದೆ. ಈ ಗುಣವು ಇವರಲ್ಲಿ ದೊಡ್ಡವರಿಂದ ಸಣ್ಣವರವರೆಗೆ ಸರ್ವರಲ್ಲಿಯೂ ಇರುವುದರಿಂದ ಇವರ ಶಕ್ತಿ ಇಷ್ಟು ಬಲೀಯವಾಗಿದೆ. ಇವರು ಮಣ್ಣು ಹಿಡಿದರೆ ಹೊನ್ನಾಗುತ್ತದೆ. ಪಾಲುಮಾರಿಕೆ ಎಂಬುದು ಇವರಲ್ಲಿ ಪ್ರವೇಶ ಮಾಡುವುದಕ್ಕೆ ಆಸ್ಪದವಿಲ್ಲವಾದುದರಿಂದ, ಐಕಮತ್ಯದ ಸುಖವೂ ಅದರಿಂದ ದೊರಕುವ ಅಲಭ್ಯಲಾಭಗಳೂ ಇವರಿಗೆ ಸ್ವಾಧೀನವಾಗಿ ಇವೆ. ನಾನು ಇಂಗ್ಲೀಷಿನವರ ಉನ್ನತಿಯ ವಿಷಯದಲ್ಲಿ ಮೇಲೆ ಹೇಳಿರುವುದು ಸಂಪೂರ್ಣವರ್ಣನೆಯೆಂದು ಭಾವಿಸಲಾಗದು. ಇವರ ಉನ್ನತಿಯ ಕಾರಣಗಳನ್ನೂ ಅದರಿಂದ ಉಂಟಾದ ಫಲಗಳನ್ನೂ ಕುರಿತು ಬರೆಯುತ್ತಾ ಬಂದರೆ ವೇದವ್ಯಾಸರ ಮಹಾಭಾರತದಂಥ ಮಹಾಭಾರತಗಳು ಅನೇಕವಾಗುತ್ತವೆ. ಇದರಿಂದ ನಾನು ಇಂಗ್ಲೀಷಿನವರ ಸ್ತೋತ್ರವನ್ನು ನಿರರ್ಥಕವಾಗಿ ಮಾಡಿದೇನೆಂದು ಎಣಿಸಬಾರದು. “ಊರು ಇದ್ದಲ್ಲಿ ಹೊಲಗೇರಿ” ಎಂಬ ಗಾದೆಯಂತೆ ಇಂಗ್ಲೀಷಿನವರಲ್ಲಿಯೂ ಕೆಲವು ದೊಡ್ಡದೊಡ್ಡ ದೋಷಗಳು ಇವೆ ಎಂಬುದು ನನಗೆ ಚೆನ್ನಾಗಿ ಗೊತ್ತಿದೆ. ಪರಂತು ಚಂದ್ರನ ಶಾಂತವಾದ ಮತ್ತು ಕೋಮಲವಾದ ಕಿರಣಗಳ ಸಮುದಾಯದಲ್ಲಿ ಆತನ ಕಳಂಕವು ಮುಳುಗಿಹೋಗುತ್ತದೆ ಎಂದು ಕಾಳಿದಾಸನು ಹೇಳಿದ ಪ್ರಕಾರ ಇವರ ಸ್ವದೇಶ ಪ್ರೀತಿ, ಐಕಮತ್ಯ, ಉದ್ಯೋಗಶೀಲತೆಯೆಂಬ ಗುಣಗಳ ಮುಂದೆ ಇವರ ದೋಷಗಳು ಮುಚ್ಚಿಕೊಂಡು ಹೋಗುತ್ತವೆ. ಆದುದರಿಂದ ಅವು ಪ್ರಕಾಶಕ್ಕೆ ಬರಲು ಅವಕಾಶ ದೊರೆವುದಿಲ್ಲ.

ಈಗ ಹೀಗಿರುವ ಇವರ ಉನ್ನತಿಯು ಒಬ್ಬ ಮನುಷ್ಯನು ಉದ್ಯೋಗ ಮಾಡಿದುದರಿಂದಲಾಗಲಿ ಅಥವಾ ಎಲ್ಲರೂ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಿದುದರಿಂದಲಾಗಲಿ ಪ್ರಾಪ್ತವಾಗಲಿಲ್ಲ. ಆ ಜಾತಿಯವರಲ್ಲಿ ಪ್ರತಿ ಮನುಷ್ಯನೂ ಸ್ವಲ್ಪ ಸ್ವಲ್ಪ ಸಾಹಸಮಾಡಿದನು ; ಕೆಲವರು ದೊಡ್ಡದೊಡ್ಡ ಕೆಲಸಗಳನ್ನು ಮಾಡಿದರು ; ಇವರೆಲ್ಲರ ಉದ್ಯೋಗವೂ ಸೇರಿ ಬಂದು ದೊಡ್ಡ ಸಮುದ್ರವಾಗಿದೆ.

ಈಗ ಪಶ್ಚಿಮದಿಂದ ಪೂರ್ವಕ್ಕೆ ನಮ್ಮ ದೃಷ್ಟಿಯನ್ನು ಬಿಟ್ಟು

ನೋಡಿದರೆ ಭರತವರ್ಷದ ೨೮ ಕೋಟಿ ಪ್ರಜೆಗಳೂ ಅವರ ಅವಸ್ಥೆ
ಯೂ ನಮ್ಮ ಕಣ್ಣಿಗೆ ಬೀಳುತ್ತವೆ. ಈ ದೇಶದಲ್ಲಿ ಉದ್ಯೋಗವನ್ನು
ಹೇಗೆ ಮಾಡಬೇಕು? ಅದರಿಂದ ಸುಫಲವನ್ನು ಹೇಗೆ ಪಡೆಯಬೇಕು?
ಎಂಬುದು ಬಹಳ ಜನರಿಗೆ ಗೊತ್ತೇ ಇಲ್ಲ; ಇದು ಅತಿಶಯೋಕ್ತಿಯಾ
ಗುವುದಿಲ್ಲ; ಇದಕ್ಕೆ ಇವರ ಈಗಿನ ಸ್ಥಿತಿಯೇ ನಿದರ್ಶನವಾಗಿದೆ.

ಈ ಜನರಲ್ಲಿ ಸಾಹಸ, ಸಾಮರ್ಥ್ಯ, ಉತ್ಸಾಹ, ಸ್ವಾಧೀನತೆ, ಇವು
ಯಾವುವೂ ಇಲ್ಲ. ಮುಖ್ಯವಾಗಿ ಇವರಲ್ಲಿರತಕ್ಕ ಒಳ್ಳೆಯಗುಣಗಳು
ಸ್ವಲ್ಪವೇ; ಪರಂತು ಇವರಲ್ಲಿ ಸಂಗೀತನಾಟಕಗಳೂ ಹೊಟ್ಟೆತುಂಬ
ತಿನ್ನದೆ ಕೂಡಹಾಕಿದ ಹಣವನ್ನು ನಾಟ್ಯ ಮೊದಲಾದ ವಿನೋದಕ್ಕಾಗಿ
ಖರ್ಚುಮಾಡುವ ಗುಣವೂ ಇವೆ. ತಮ್ಮ ಗುಂಪಿನಲ್ಲಿ ಯಾವನಾದರೂ
ಒಬ್ಬನು ದೇಶಹಿತಕ್ಕಾಗಿ ಒಳ್ಳೆಯ ಕೆಲಸವನ್ನು ಮಾಡಲಿಕ್ಕೆ ತೊಡಗಿ
ದರೆ ಅವನನ್ನು ಯಾವುದಾದರೂ ಒಂದು ಉಪಾಯದಿಂದ ನಿಂದೆಗೆ ಗುರಿ
ಮಾಡಿ, ಅವನಿಗೆ ವಿರುದ್ಧವಾಗಿರುವ ಜನರನ್ನು ಎತ್ತಿಕಟ್ಟಿ, ಅವನ ಉ
ದ್ಯೋಗವು ಫಲಿಸದಂತೆ ಮಾಡುವ ಬುದ್ಧಿಯೂ ಚಾಂಚಲ್ಯವೂ ಇವೆ.
ಈ ವಿಧವಾದ ಗುಣಗಳು ಇನ್ನೂ ಬೇಕಾದಷ್ಟು ಇವೆ. ಇದರಿಂದುಂ
ಟಾಗಿರುವ ನಮ್ಮ ದೌರ್ಭಾಗ್ಯಸಮುದ್ರದ ಹೆಚ್ಚಿಗೆಯು ಯಾವಾಗ
ತಗ್ಗುವುದಕ್ಕೆ ಪ್ರಾರಂಭಿಸುವದೋ ದೇವರೊಬ್ಬನೇ ಬಲ್ಲನು.

ನಮ್ಮ ಈ ದೌರ್ಭಾಗ್ಯಕ್ಕೆ ನಮ್ಮ ಜನರ ಪಾಲುಮಾರಿಕೆಯೂ
ಉದ್ಯೋಗಹೀನತೆಯೂ ಮುಖ್ಯಕಾರಣಗಳಾಗಿವೆ. ಶುದ್ಧಾಂಗವಾಗಿ
ಉದ್ಯೋಗವನ್ನೇ ಮಾಡದೆ ಇದ್ದರೆ ನಮ್ಮ ದೇಶದ ೨೮ ಕೋಟಿ ಪ್ರ
ಜೆಗಳಲ್ಲಿ ನೆಲೆಗೊಂಡಿರುವ ಪಾಲುಮಾರಿಕೆ ಹೇಗೆತಾನೆ ಹೋದೀತು?
ಒಂದು ದಿನದಲ್ಲಿ ೬೦ ಗಳಿಗೆಯೂ ಆಲಸ್ಯದಿಂದ ಹೊರಳಾಡುತ್ತಿರುವ
ಪ್ರತಿ ಮನುಷ್ಯನೂ ಎರಡೆರಡು ಗಳಿಗೆ ಹೊತ್ತು ತನ್ನತನ್ನ ಉನ್ನತಿ
ಗಾಗಿ ತನ್ನ ಕೈಯಲ್ಲಾದಷ್ಟು ಕೆಲಸ ಮಾಡುತ್ತಾ ಬಂದರೆ ಈ ದೇಶದ
ಉನ್ನತಿಗಾಗಿ ಒಂದು ದಿವಸ ಕಡೆಗೆ ಇಪ್ಪತ್ತಾರುಕೋಟಿ ಕಾಸಿನ ಕೆಲ
ಸವಾದರೂ ನೆರವೇರಿದಂತೆ ಆಗುತ್ತದೆ. ದೇಶದ ಉನ್ನತಿಯೆಂದರೂ
ದೇಶದ ಜನರ ಉನ್ನತಿಯೆಂದರೂ ಒಂದೇ ಆಗಿದೆ. ಈ ಪ್ರಕಾರ ಪ್ರತಿ
ದಿವಸದಲ್ಲಿಯೂ ಕೆಲಸ ನಡೆಯುತ್ತಾ ಬಂದರೆ ಈಗ ಅಸ್ತವಾಗಿರುವ

ಈ ದೇಶದ ಸೌಭಾಗ್ಯವು ಪುನಃ ಉದಯಿಸಲಾರದೆಂದು ಯಾರು ಹೇಳಿಯಾರು ?

ಈ ದೇಶದ ಮನುಷ್ಯರಲ್ಲಿ ಪುರುಷರು ನಿತ್ಯವೂ ಯಾವುದಾದರೂ ಒಂದು ಕೆಲಸ ಮಾಡುತ್ತಾ ಇರುತ್ತಾರೆ. ಹಾಗೆ ಮಾಡದಿದ್ದರೆ ಜನರು ಅವರನ್ನು ನಿಂದಿಸುವರು. (ಉಳಿದ ಸ್ತ್ರೀಜಾತಿಯ ಸ್ಥಿತಿಯು ಹೇಗಿದೆ ಎಂದರೆ–) ಕೊಡವೆಂದರೆ ನೀರು ತರಲಿಕ್ಕೆ ಉಪಯೋಗಿಸುವ ದೊಡ್ಡ ಪಾತ್ರೆಯೆಂದು ಋಜುತಿಯಾಗಿ ಅರ್ಥವಾಗುವಂತೆ ಸ್ತ್ರೀಸಮುದಾಯವೆಂದರೆ ಹಟವಾದಿಗಳಾಗಿಯೂ ಮೂರ್ಖರಾಗಿಯೂ ಇರುವ ಜನರೆಂದು ಸಾಧಾರಣವಾಗಿ ಅರ್ಥಬೋಧೆಯಾಗುತ್ತದೆ. ಗಂಡಸರು ಹೆಂಗಸರನ್ನು ಕುರಿತು–“ನಿಮ್ಮ ಗಂಟು ಏನು ಹೋಗುತ್ತದೆ? ನೀವು ನಮ್ಮ ಗಂಟಲಗಾಣವಾಗಿ ಸ್ವಸ್ಥವಾಗಿ ಕುಳಿತಿರುತ್ತೀರಿ. ಕೆಲಸ ಮಾಡುವ ಅಗತ್ಯ ನಿಮಗೆಲ್ಲಿಯದು ? ಆದ ಅಡಿಗೆಯನ್ನು ದಿವಸಕ್ಕೆ ಮೂರುನಾಲ್ಕುಸಾರಿ ಲೊಟ್ಟೆ ಹಾಕುತ್ತಾ ಭೋಜನಮಾಡುವುದು ಹೊರತು ಮಿಕ್ಕ ಕೆಲಸದ ಯೋಚನೆ ನಿಮಗೆ ಎಲ್ಲಿ ಇರುತ್ತದೆ ?” ಎಂದು ಸ್ಪಷ್ಟವಾಗಿ ಆಡುತ್ತಾರೆ. ಇಲ್ಲಿ ನಾನು ಕೆಲವು ಮಾತುಗಳನ್ನು ಮಾತ್ರ ಉದಾಹರಣೆಗಾಗಿ ಬರೆದಿರುತ್ತೇನೆ. ಇಂಥ ಮಾತುಗಳನ್ನು ಕೇಳಿದ ಕೂಡಲೆ ನಾಚಿಕೆಯುಂಟಾಗಿ ಪ್ರಪಂಚದಲ್ಲಿ ಮುಖವನ್ನು ತೋರಿಸುವುದಕ್ಕಿಂತ ಭೂಮಿಯಾದರೂ ಬಾಯಿ ತೆರೆದರೆ ಅದರಲ್ಲಿ ಹೊಕ್ಕುಕೊಳ್ಳಬೇಕು ಎನ್ನಿಸುತ್ತದೆ. ಇಂಥ ಸಾವಿರಾರು ಮಾತುಗಳನ್ನಾದರೂ ಕೇಳಿ ಬಾಯಿಮುಚ್ಚಿಕೊಂಡು ಇರಬೇಕಾಗುತ್ತದೆ.

ಇಷ್ಟು ಹೀಯಾಳಿಸುವುದಕ್ಕೆ ಸ್ತ್ರೀಯರು ಪಾಲುಮಾರಿಕೆಯವರೆಂಬುದೇ ಕಾರಣವಲ್ಲವೇ ? ಸ್ತ್ರೀಯರು ಪುರುಷರಂತೆಯೇ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಕೆಂಬುದು ನನ್ನ ತಾತ್ಪರ್ಯವಲ್ಲ; ಪುರುಷರ ಪ್ರಕೃತಿಯು ಕಠೋರವಾಗಿಯೂ ಬಲಿಷ್ಠವಾಗಿಯೂ ಕಷ್ಟವನ್ನು ಸಹಿಸುವಂಥದಾಗಿಯೂ ಇದೆ. ಸ್ತ್ರೀಯರ ಪ್ರಕೃತಿಯು ಕೋಮಲವಾಗಿಯೂ ಸ್ವಲ್ಪ ದುರ್ಬಲವಾಗಿಯೂ ಇದೆ. ಪುರುಷರು ತಮ್ಮ ಪ್ರಕೃತಿಗನುಸಾರವಾದ ಕೆಲಸಗಳನ್ನು ಮಾಡದಿದ್ದರೆ ನಿಂದೆಗೊಳಗಾಗುವಂತೆ ಸ್ತ್ರೀಯರು ತಮ್ಮ ಪ್ರಕೃತಿಗನುಸಾರವಾದ ಕೆಲಸವನ್ನು

ಮಾಡದಿದ್ದರೆ ನಿಂದಾಸ್ಪದರಾಗುತ್ತಾರೆ. "ನಮ್ಮ ಕೆಲಸವೆಂದರೆ-ಕಸ, ಮುಸರೆ, ಅಡಿಗೆ, ನೀರು ಮುಂತಾದುದು. ಈ ಕೆಲಸಗಳನ್ನೆಲ್ಲಾ ನಾವು ಮಾಡುತ್ತೇವೆ. ನಮಗೆ ಯಾವ ಕೆಲಸ ಕಡಿಮೆಯಾಗಿದೆ" ಎಂದು ಕೆಲವು ಸ್ತ್ರೀಯರು ಹೇಳುತ್ತಾರೆ. ಆದರೆ ಅಡಿಗೆ ಮುಂತಾದ ಕೆಲಸ ಗಳನ್ನು ಮಾತ್ರ ಮಾಡಲಿಕ್ಕೆ ಇವರನ್ನು ದೇವರು ಸೃಷ್ಟಿಸಲಿಲ್ಲ. ಈ ಪ್ರಪಂಚದಲ್ಲಿ ಲೆಕ್ಕಮಾಡುವುದಕ್ಕೆ ಆಗದಷ್ಟು ಕೆಲಸಗಳು ಇವೆ. ವಿಚಾ ರಮಾಡಿದಲ್ಲಿ ವಿಶಾಲವಾದ ಸಂಸಾರವೆಂಬ ವಿರಾಟ್ಪುರುಷನ ಶರೀರಕ್ಕೆ ಎಡಗಡೆ ಬಲಗಡೆ ಎಂಬ ಎರಡು ಭಾಗಗಳುಂಟು. ಅವುಗಳಲ್ಲಿ ಎಡ ಭಾಗವೇ ಸ್ತ್ರೀಯೆಂದೂ ಬಲಭಾಗವೇ ಪುರುಷನೆಂದೂ ತಿಳಿಯಬಹು ದು. ನಮ್ಮ ಶರೀರದ ಉಭಯಪಾರ್ಶ್ವವೂ ಸರಿಯಾಗಿ ನಡೆಯುತ್ತಿ ದ್ದರೆ ನಾವು ಸುಖಪಡುವಂತೆ ಸಂಸಾರದ ಉಭಯ ಭಾಗವಾದ ಸ್ತ್ರೀ ಪುರುಷರು ತಮ್ಮತಮ್ಮ ಕೆಲಸವನ್ನು ಚೆನ್ನಾಗಿ ಮಾಡುತ್ತಾ ಇದ್ದರೆ ಸಂಸಾರವು ಸುಖಪ್ರದವಾಗಿಯೂ ನೋಡುವವರಿಗೆ ಮನೋಹರವಾಗಿ ಯೂ ಇರುತ್ತದೆ. ನಮ್ಮ ಶರೀರದ ಬಲಭಾಗವು ಕೆಲವಂಶಗಳಲ್ಲಿ ಬಲಿ ಷ್ಠವಾಗಿದೆ. ಸಾಧಾರಣವಾಗಿ ಎಡಗೈಗಿಂತ ಬಲಗೈಯಿಂದ ಹೆಚ್ಚು ಕೆಲಸವನ್ನು ಮಾಡಲಾಗುತ್ತದೆ. ಹೀಗೆಯೇ ಸಂಸಾರದಲ್ಲಿ ಹೆಂಗಸಿ ಗಿಂತ ಗಂಡಸು ಹೆಚ್ಚು ಬಲಿಷ್ಠನಾಗಿ ಹೆಚ್ಚು ಕೆಲಸವನ್ನು ಮಾಡು ತ್ತಾನೆ. ಪಾರ್ಶ್ವವಾಯುವಿನಿಂದ ನಮ್ಮ ಎಡಭಾಗವು ಸ್ವಾಧೀನವಿಲ್ಲದಿ ರುವಾಗ ಬರಿಯ ಬಲಭಾಗದಿಂದಲೇ ಯಾವ ಕೆಲಸವನ್ನೂ ಹೇಗೆ ಚೆ ನ್ನಾಗಿ ಮಾಡಲಾರೆವೋ ಹಾಗೆಯೇ ಹೆಂಗಸರು ಸಂಸಾರದಲ್ಲಿ ಸುಮ್ಮನೆ ಕುಳಿತಿದ್ದರೆ ಗಂಡಸೊಬ್ಬನಿಂದಲೇ ಯಾವ ಕೆಲಸವೂ ಚೆನ್ನಾಗಿ ನಡೆವು ದಿಲ್ಲ. ಬರೆವುದು ವಸ್ತುಗತ್ಯಾ ಬಲಗೈಯ ಕೆಲಸವೇ ಸರಿ ; ಆದರೆ ಕಾ ಗದವನ್ನು ಎಡಗೈಯಿಂದ ಸರಿಯಾಗಿ ಹಿಡಿಯದಿದ್ದರೆ ಚೆನ್ನಾಗಿ ಬರೆವು ದಕ್ಕಾಗುವುದಿಲ್ಲ. ಎಡಗೈಯಿಂದ ಹಿಡಿಯದಿದ್ದರೂ ಮೇಜನಮೇಲಾ ಗಲಿ ಬೇರೆ ಯಾತರಮೇಲಾಗಲಿ ಕಾಗದವನ್ನಿಟ್ಟು ಅದರ ಮೇಲೆ ಯಾ ವುದಾದರೂ ಭಾರ ವಸ್ತುವನ್ನು ಹೇರಿ, ಬರೆಯುತ್ತಾ ಹೋದರೆ ಕಾ ಗದ ಸರಿದಾಡುವುದಿಲ್ಲವೆಂದು ಯಾರಾದರೂ ಹೇಳಾರು. ಪರಂತು ಈ ಪ್ರಕಾರ ದ್ರಾವಿಡ ಪ್ರಾಣಾಯಾಮದಂತೆ ಮಾಡುವ ಕೆಲಸದಿಂದ ಕಳವ

ಹೊತ್ತಿನಲ್ಲಿ ಎಡಗೈಯ ಸಹಾಯವಿದ್ದರೆ ಇನ್ನೂ ಎರಡು ಪಙ್ತಿ ಹೆಚ್ಚಾಗಿ ಬರೆಯಬಹುದು; ಅಥವಾ ಇನ್ನಾವುದಾದರೂ ಒಂದು ಕೆಲಸ ಮಾಡಬಹುದು. ಇಲ್ಲವಾದರೆ ವ್ಯರ್ಥವಾಗಿ ಎರಡರಷ್ಟು ಹೊತ್ತು ಕಳೆದುಹೋಗುತ್ತದೆ; ಇತರ ಯಾವ ಕೆಲಸವೂ ನಡೆವುದಿಲ್ಲ.

ಇದೇ ರೀತಿಯಾಗಿ ಸಂಸಾರದಲ್ಲಿ ಬೇರೆ ಕೆಲಸಗಳಲ್ಲಿಯೂ ಹೆಂಗಸಿನ ಸಹಾಯವು ಗಂಡಸಿಗೆ ಅವಶ್ಯಕವಾಗಿದೆ. ಹೆಂಗಸರು ಶಿಕ್ಷಿತರಾಗಿಯೂ ತಿಳಿವಳಿಕೆಯುಳ್ಳವರಾಗಿಯೂ ಇದ್ದರೆ ಮಾಡಬಹುದಾದ ಅನೇಕ ಕೆಲಸಗಳುಂಟು. ಕಳೆದು ಹೋಗುವ ಹೊತ್ತಿನಲ್ಲಿ ಪುರುಷರು ಮಾಡಬಹುದಾದ ದೊಡ್ಡ ಕೆಲಸಗಳು ಅನೇಕವಾಗಿರುತ್ತವೆ. ಪರಂತು ಆ ಕೆಲಸಗಳನ್ನು ಸ್ತ್ರೀಯರಿಗೆ ಕೊಡದೆ ಇರುವುದರಿಂದ ಅವರು ಅವುಗಳನ್ನು ಮಾಡುವದಿಲ್ಲ. ಸ್ತ್ರೀಯರಿಗೆ ಇರುವ ಹೊತ್ತೆಲ್ಲಾ ಕುಕ್ಷಿದೇವತಾಪೂಜೆಗೆ ಸಿದ್ಧಪಡಿಸುವುದರಲ್ಲಿ ಹೋಗುತ್ತದೆ. ಈ ರೀತಿಯಾಗಿ ದೊಡ್ಡ ಕೆಲಸವನ್ನು ದೇಶದಲ್ಲಿ ಯಾರೂ ಮಾಡಲಿಕ್ಕೆ ಅವಕಾಶವಿಲ್ಲದೆ ಹೋಗುವುದರಿಂದ ದೇಶವು ಉನ್ನತಿಗೆ ಬರುವುದಿಲ್ಲ.

ಈಗ ಅನೇಕ ಕೆಲಸಗಳನ್ನು ಪುರುಷರೇ ಮಾಡುತ್ತಾ ಇರುವುದರಿಂದ ಅವರ ಕಾಲವು ವ್ಯರ್ಥವಾಗಿ ಕಳೆದುಹೋಗುತ್ತದೆ. ಪ್ರಪಂಚದಲ್ಲಿ ಎಲ್ಲಾ ಗುಣಗಳೂ ಅಥವಾ ಎಲ್ಲಾ ವಸ್ತುಗಳೂ ಒಂದು ಸ್ಥಳದಲ್ಲಿಯೇ ಇರುವುದಿಲ್ಲ. ಆದುದರಿಂದಲೇ ಸರ್ವಾಂಶದಲ್ಲಿಯೂ ಉತ್ತಮವಾದುದು ಯಾವುದೂ ಕಾಣಬರುವುದಿಲ್ಲ. ಒಂದು ವಸ್ತುವಿನಲ್ಲಿ ಏನಾದರೂ ಕಡಿಮೆಯಾಗಿದ್ದರೆ ಅದನ್ನು ಇನ್ನೊಂದರಿಂದ ಪೂರ್ಣಮಾಡಿಕೊಳ್ಳಲೇಬೇಕು. ಈ ಮೇರೆಗೆ ಮಾಡುವುದಕ್ಕೆ ಅಪೂರ್ಣಪೂರಣವೆನ್ನುತ್ತಾರೆ. ಪ್ರಪಂಚದ ವಸ್ತುಗಳಲ್ಲಿ ಈ ಅಪೂರ್ಣತೆಯು ಈಶ್ವರನ ಕೆಲಸಕ್ಕೆ ದೋಷವನ್ನುಂಟುಮಾಡುವುದೆಂದು ಸರ್ವಥಾ ತಿಳಿಯಕೂಡದು. ಪರಮೇಶ್ವರನು ಜ್ಞಾನಸ್ವರೂಪನಾಗಿದ್ದು ಬುದ್ಧಿಪೂರ್ವಕವಾಗಿಯೇ ಈ ಅಪೂರ್ಣತೆಯನ್ನು ಎಲ್ಲಾ ಕಡೆಯಲ್ಲಿಯೂ ಇಟ್ಟಿದ್ದಾನೆ. ಕಾರಣವಿಲ್ಲದೆ ಈ ಪ್ರಕಾರ ಮಾಡಿಲ್ಲ. ಪರಮೇಶ್ವರನು ಪರಮಾಣುವಿನಂಥ ಸಣ್ಣ ಪ್ರಾಣಿಗಳು ಮೊದಲ್ಗೊಂಡು ಸರ್ವೋತ್ತಮನಾದ ಮನುಷ್ಯನ ಪರ್ಯಂತವೂ ಸೃಷ್ಟಿಸಿರುತ್ತಾನೆ. ಹತ್ತು ಮಕ್ಕಳನ್ನು ಹಡೆದ ತಂದೆಯು

ತನ್ನ ಮಕ್ಕಳೆಲ್ಲರೂ ವಿರೋಧವಿಲ್ಲದೆ ಪರಸ್ಪರ ಅನುರಾಗದಿಂದಿರಬೇಕೆಂದು ಅಪೇಕ್ಷಿಸುತ್ತಲೂ ಆ ಪ್ರಕಾರವೇ ಅವರು ನಡೆಯುತ್ತಿದ್ದರೆ ಅಪಾರ ಸಂತೋಷಪಡುತ್ತಲೂ, ಅವರು ಪರಸ್ಪರ ವಿರುದ್ಧ ಭಾವದಿಂದಿದ್ದರೆ ಅಪರಿಮಿತ ವ್ಯಸನಪಡುತ್ತಲೂ, ಇರುವಂತೆ ದೇವರು ಜಗತ್ತೆಂಬ ತನ್ನ ಸಂಸಾರದಲ್ಲಿ ಎಲ್ಲರೂ ಪರಸ್ಪರ ವೈರಭಾವವಿಲ್ಲದೆ ನಡೆದುಕೊಳ್ಳಬೇಕೆಂದು ಅಪೇಕ್ಷಿಸುತ್ತಾನೆ. ಆತನ ಇಚ್ಛೆಗೆ ವಿರುದ್ಧವಾಗಿ ನಡೆವವನು ಈ ಸಂಸಾರದಲ್ಲಿ ನಿರ್ವಹಿಸುವುದಿಲ್ಲ. ತನಗೆ ಪ್ರಯೋಜನವಿಲ್ಲದ ಕಡೆಗೆ ಯಾವ ಪ್ರಾಣಿಯೂ ತಲೆಯೆತ್ತಿ ನೋಡದಿರುವುದು ಸ್ವಾಭಾವಿಕವಾಗಿದೆ. ಯಾರೇ ಆಗಲಿ ತಮಗೆ ಪ್ರಯೋಜನಕಾರಿಯಾದ ಮನುಷ್ಯನಲ್ಲಿಯೇ ಸ್ನೇಹವನ್ನು ಬೆಳೆಯಿಸುತ್ತಾರೆ. ಇಂಥ ಸ್ವಾರ್ಥಪರರಾವ ಪ್ರಾಣಿಗಳಲ್ಲಿ ದೇವರು ಕೊರತೆಯನ್ನುಂಟುಮಾಡದೆ ಇದ್ದಲ್ಲಿ ಎಲ್ಲರಿಗೂ ತಾವುತಾವು ಕುಳಿತಿದ್ದ ಸ್ಥಳದಲ್ಲಿಯೇ ಆವಶ್ಯಕವಾದ ಯಾವದ್ವಸ್ತುವೂ ಪ್ರಾಪ್ತವಾಗಿ ಒಬ್ಬನು ಮತ್ತೊಬ್ಬನ ಕಡೆಗೆ ತಿರುಗಿಕೂಡ ನೋಡುತ್ತಿರಲಿಲ್ಲ. ಒಬ್ಬರಿಗೊಬ್ಬರು ಹೊಂದದೆ ಎಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿದ್ದುಕೊಂಡು ಇತರರ ಸುಖದುಃಖಗಳಲ್ಲಿ ಭಾಗಿಗಳಾಗದೆ ಉದಾಸೀನರಾಗಿರುತ್ತಿದ್ದರು. ಆಗ್ಗೆ, ಸ್ವರ್ಗಸಮಸುಖಕ್ಕೆ ನೆಲೆಯಾದ ಭೂಮಂಡಲವು ಪ್ರಾಣಿಗಳಿಗೆ ನರಕಕ್ಕೆ ಸಮಾನವಾಗಿರುತ್ತಿದ್ದಿತು. ಇದಲ್ಲದೆ ಸಂಸಾರವು ಇಷ್ಟು ಸುಂದರವಾಗಿಯೂ ಕಾಣುತ್ತಿರಲಿಲ್ಲ. ಆದುದರಿಂದ ತಮ್ಮ ತಮ್ಮ ಕೊರತೆಯನ್ನು ಪೂರಣ ಮಾಡಿಕೊಳ್ಳಲಿಕ್ಕೆ ಮನುಷ್ಯನಿಗೆ ಪಶುಗಳ ಸಹಾಯ ; ಪಶುಗಳಿಗೆ ಮನುಷ್ಯನದು ; ಗಾಣಿಗನಿಗೆ ಕಂಚಗಾರನದು ; ಕಂಚಗಾರನಿಗೆ ಪಸಾರೆಯುವನದು ; ಬಲ್ಲಿದನಿಗೆ ಬಡವನದು ; ಬಡವನಿಗೆ ಬಲ್ಲಿದನದು ; ಹೀಗೆ ಎಲ್ಲರಿಗೂ ಎಲ್ಲರ ಅವಶ್ಯಕತೆಯೂ ಇದೆಯೆಂದು ಸಿದ್ಧವಾಗುತ್ತದೆ. ಪರಸ್ಪರ ಸಹಾಯವಿಲ್ಲದೆ ಪ್ರಪಂಚದಲ್ಲಿ ಸುಖವೆಂಬುದು ಇಲ್ಲವಾದಮೇಲೆ ಹೆಂಗಸರ ಸಹಾಯವಿಲ್ಲದೆ ಗಂಡಸರಿಗೂ ಗಂಡಸರ ಸಹಾಯವಿಲ್ಲದೆ ಹೆಂಗಸರಿಗೂ ಸುಖವು ಹೇಗೆ ಉಂಟಾದೀತು ?

ಸ್ತ್ರೀಯರು—"ನಮಗೂ ಗಂಡಸರಿಗೂ ಸಹ ಈಗ ಸುಖವು ಇದ್ದೇ ಇದೆ. ಇದು ಹೊರತು ಇನ್ನಾವ ಸುಖವು ಬೇಕು ?" ಎಂದು

ಹೇಳಬಹುದು ; ಪರಂತು ನಮ್ಮ ಪ್ರಿಯಸಹೋದರಿಗಳಿರಾ! ಸುಖವೆಂದರೆ ಕೇವಲ ಅನ್ನನೀರಿನ ಸುಖ ಮಾತ್ರವೇ ಅಲ್ಲ; ವಿಶುದ್ಧ ಸ್ವಾಧೀನತೆಯು ಸುಖದ ಮುಖ್ಯಸಾಧನವಾಗಿದೆ. ಈ ಸುಖವು ನಿಮಗೂ ನಿಮ್ಮ ಆಲಸ್ಯದಿಂದ ಬೇರೆ ಕೆಲಸಮಾಡುವುದಕ್ಕ ಅವಕಾಶವಿಲ್ಲದ ಗಂಡಸರಿಗೂ ಇಲ್ಲದಮೇಲೆ ಇನ್ನಾವುದರಿಂದ ನೀವು ಸುಖಿಗಳೆನ್ನಬೇಕು? ಒಬ್ಬ ಕವಿಯು "ಸರ್ವಂಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ" ಎಂದು ಹೇಳಿ ಇದ್ದಾನೆ. ಹೇಗೆಂದರೆ ; ಪರಾಧೀನತೆಯು ಸರ್ವಭಾವದಿಂದಲೂ ದುಃಖಕರವೆಂದೂ ಸ್ವಾಧೀನತೆಯೇ ಸುಖಕರವೆಂದೂ ಅಭಿಪ್ರಾಯು. ನಮ್ಮ ಜನರಲ್ಲಿ ಸ್ವಾಧೀನತೆ ಎಲ್ಲಿದೆ? ಮೊದಲು ಸ್ತ್ರೀಯರಲ್ಲಿ ನೋಡಿರಿ; ಬಟ್ಟೆಹರಿದರೆ ಎರಡುತೇಪೆ ಹೇಗೆ ಹಾಕಬೇಕು ? ನೂರು ಮಾವಿನಕಾಯಿಗಳನ್ನು ಉಪ್ಪಿನಕಾಯಿ ಹಾಕಬೇಕಾದರೆ ಎಷ್ಟು ಉಪ್ಪು ಹಾಕಬೇಕು? ಚಿಲ್ಲರೇ ಸಾಮಾನುಗಳನ್ನು ಮನೆಯು ಬಾಗಿಲಿಗೆ ತಂದು ಮಾರುವವರು ಯಾರಾದರೂ ಬಂದರೆ ಯಾವ ಯಾವ ಪದಾರ್ಥಕ್ಕೆ ಎಷ್ಟು ಎಷ್ಟು ಕ್ರಯ ಕೊಡಬೇಕು ?–ಇವೇ ಮೊದಲಾದ ಸಣ್ಣ ವಿಷಯುಗಳಲ್ಲಿ ಸಹ ನಮ್ಮ ಸ್ತ್ರೀಜನರು ಮನೆಮನೆಗೆ ಹೋಗಿ ಬಲ್ಲವರನ್ನು ಕೇಳಿ ತಿಳಿದುಕೊಳ್ಳಬೇಕು. ಇಲ್ಲವೇ ಕೆಲಸಗಳನ್ನೆಲ್ಲಾ ಕೆಡಿಸಿ ಸುಮ್ಮನೆ ಕುಳಿತಿರಬೇಕು. ಇವೆರಡು ಹೊರತು ಬೇರೆ ಮಾರ್ಗವಿರುವುದಿಲ್ಲ. ಮನೆಯು ಯಜಮಾನರು ಹೊರಗೆ ಹೋಗಿದ್ದಾಗ ಯಾವನಾದರೂ ಒಬ್ಬ ಮನುಷ್ಯನು ಒಬ್ಬ ಗೃಹಸ್ಥನ ಕಡೆಯಿಂದ ಏನಾದರೂ ಒಂದು ವರ್ತಮಾನವನ್ನು ತಂದಿದ್ದು ಅದಕ್ಕೆ ಕೂಡಲೇ ಉತ್ತರವನ್ನು ಕೊಡದಿದ್ದರೆ ಕೆಲಸ ಕೆಡುವ ಸಂದರ್ಭ ಬೀಳಬಹುದು. ಇಂಥ ಸಂಗತಿಯಲ್ಲಿ ನಮ್ಮ ಅಮ್ಮನವರ ಚಟವಟಿಕೆ ಎಷ್ಟುಮಟ್ಟಿಗೆ ಇರುತ್ತದೆ ಎಂದರೆ,–ಬಂದ ಮನುಷ್ಯನನ್ನು ಸಮಾಧಾನಮಾಡಿ ಕಳುಹಿಸುವುದು ಹಾಗಿರಲಿ, ಯಜಮಾನರು ಮನೆಗೆ ಬಂದರೆ ಇಂಥವರು ಇಂಥವರ ಕಡೆಯಿಂದ ಬಂದು ಇದ್ದರೆಂಬುದನ್ನು ಸುದಾ ಹೇಳುವುದಕ್ಕೆ ಜ್ಞಾಪಕಶಕ್ತಿಯೂ ಬುದ್ಧಿಯೂ ಇರುವುದಿಲ್ಲ. ನೆನಪಿಗಾಗಿ ಬರೆದು ಇಡಬೇಕೆಂದರೆ ಹಣೆಯಲ್ಲಿ ಬ್ರಹ್ಮನು ಬರೆದಿರುವ ಅಕ್ಷರಗಳೇ ಹೊರತು ಮಿಕ್ಕ ಅಕ್ಷರಗಳು ಕರಿಯುವೋ ಬಿಳಿಯುವೋ ಅವರಿಗೆ ಗೊತ್ತಿರುವುದಿಲ್ಲ. ಹೀಗೆ ಸಮಯುವ

ರಿತು ಕೆಲಸನಡೆಯಿಸದೆ ಹೋಗುವುದರಿಂದ ಕೆಲಸವೆಲ್ಲಾ ಕೆಟ್ಟುಹೋಗು ತ್ತದೆ ಇದೇ ಪ್ರಕಾರ ಪ್ರತಿ ದಿವಸವೂ ಸಾವಿರಾರು ಸಂಗತಿಗಳು ಘಟಿ ಸುತ್ತಾ ಇರುತ್ತವೆ. ಈ ತೊಂದರೆಗಳನ್ನೆಲ್ಲಾ ನಿರ್ವಹಿಸಿಕೊಂಡು ದೊರಕಿದ ಹೊತ್ತಿನಲ್ಲಿ ಕೆಲಸಮಾಡಿ ಹೊಟ್ಟೆತುಂಬಿಕೊಳ್ಳುವ ನಮ್ಮ ದೇಶದ ಗಂಡಸರಿಗೆ ತಮ್ಮ ಮನೆಗೆ ಬೇಕಾದ ಎಲ್ಲಾ ಸಾಮಗ್ರಿಗಳನ್ನೂ ತಮ್ಮ ಕೈಯಿಂದಲೇ ಮಾಡಿಕೊಳ್ಳಬಹುದಾದಾಗ್ಯೂ ಕೂಡದೆ ಇರುವು ದರಿಂದ ಅವಶ್ಯವಿರುವ ಎಲ್ಲಾ ಪದಾರ್ಥಗಳನ್ನೂ ಅನ್ಯದೇಶದವರ ಕಡೆ ಯಿಂದ ತೆಗೆದುಕೊಳ್ಳಬೇಕಾಗುತ್ತದೆ. ಈ ಕಾರಣದಿಂದ ಕೋಟ್ಯಂ ತರ ರೂಪಾಯಿಗಳು ನಮ್ಮದೇಶದಿಂದ ಹೊರಗೆಹೋಗಿ ನಮ್ಮ ದೇಶಕ್ಕೆ ದಾರಿದ್ರ್ಯವು ಬಂದು ಇದೆ. ಈ ದಾರಿದ್ರ್ಯವು ನಮ್ಮ ದೇಶದಲ್ಲಿ ನೆಲೆ ಗೊಂಡಿರುವುದರಿಂದ ಪದೇಪದೇ ಕ್ಷಾಮ ಬಂದು, ಜನರ ಸಾಮರ್ಥ್ಯವ ನ್ನು ಕಡಮೆಮಾಡುತ್ತಿದೆ. ಹೀಗೆ ಸಾಮರ್ಥ್ಯಹೀನರಾದವರು ಎಷ್ಟು ಕೆಲಸವನ್ನು ಮಾಡಾರು ? ಅವರು ಪ್ರತಿ ದಿವಸವೂ ನವೆಯುತ್ತಾ ಕೊನೆಗೆ ಏಳಲಾರದವರಾಗಿ ತಮ್ಮ ಕೈಕಾಲು ಸ್ವಾಧೀನವಿಲ್ಲದೆ ಮತ್ತೊ ಬ್ಬರ ಆಶ್ರಯವಿಲ್ಲದಿದ್ದರೆ ತಲೆ ಯೆತ್ತಲಿಕ್ಕೆ ಕೂಡ ಆಗದೆ ಯಾರಿಂದ ತ ಮ್ಮ ಕಾಲಕ್ಷೇಪ ನಡೆಯುತ್ತದೋ ಅವರು ಹೇಳಿದುದನ್ನೆಲ್ಲಾ ಕೇಳಿ ಕೊಂಡು ಬಾಯಿ ಮುಚ್ಚಿಕೊಂಡು, ಅವರ ಮನೋವೃತ್ತಿಯಂತೆ ಇರಬೇಕಾಗುತ್ತದೆ. ಇಷ್ಟಕ್ಕೇ ಇದರ ಪರ್ಯವಸಾನವಾಗುವುದಿಲ್ಲ. ಆ ಜನರು ಇವರನ್ನು–ಕೈಯಲ್ಲಿ ಏನೂ ಸಾಗದವರು ; ಅತ್ಯಲ್ಪವಿಷ ಯಗಳಿಗೂ ಕೂಡ ಇನ್ನೊಬ್ಬರನ್ನು ದೈನ್ಯವೃತ್ತಿಯಿಂದ ಕೇಳುತ್ತಾ ರೆ–ಎಂದು ಹಾಸ್ಯ ಮಾಡುವುದಲ್ಲದೆ ಸಮಯಬಂದಲ್ಲಿ ತಲೆಯಮೇಲೆ ಬದೆವುದಕ್ಕೆ ಕೂಡ ಅನುಮಾನಿಸುವುದಿಲ್ಲ.

ಈ ವಿಷಯವನ್ನು ಸಂಕ್ಷೇಪವಾಗಿ ಬರೆಯಬೇಕಾಗಿ ಇರುವು ದರಿಂದ ಇನ್ನು ವಿಸ್ತರಿಸುವುದಿಲ್ಲ. ಮೇಲೆ ಹೇಳಿರುವುದರಿಂದಲೆ ನಮ್ಮ ದೇಶದ ಸ್ತ್ರೀ ಪುರುಷರು ಎಷ್ಟುಮಟ್ಟಿಗೆ ಪರಾಧೀನರಾಗಿ ಇದ್ದಾರೆಂ ಬುದು ಗೊತ್ತಾಗುತ್ತದೆ. ಈ ಪರಾಧೀನತೆಯು ಶಾಶ್ವತವಾಗಿ ನಮ್ಮ ವರಲ್ಲಿ ಇರುವುದರಿಂದ ನಮ್ಮವರಿಗೆ ಸುಖವಿಲ್ಲವೆಂಬುದು ಸ್ಪಷ್ಟವಾಗಿದೆ. ಸ್ತ್ರೀಯರಲ್ಲಿ ಪಾಲುಮೋರಿಕೆ ಬಹಳವಾಗಿರುವುದರಿಂದ ಇವರು ಪುರು

ಷರಿಗೆ ಮಾಡಬೇಕಾದಷ್ಟು ಸಹಾಯ ಮಾಡದೆ ಇರುವುದೇ ಈ ವಿಧ ವಾದ ದುಃಖಕ್ಕೆ ಮುಖ್ಯಕಾರಣವಾಗಿದೆ. ಹೀಗಿರುವುದರಿಂದ ಹಿಂದೆ ಬರೆದಿರುವ ಪ್ರಕಾರ ತಮ್ಮ ಸ್ವಾರ್ಥಕ್ಕೆ ಯಾವ ವಿಧವಾಗಿಯೂ ಅನು ಕೂಲರಾಗದ ಸ್ತ್ರೀಯರ ವಿಷಯದಲ್ಲಿ ಪುರುಷರು ಕಠೋರವಾದ ಮ ತ್ತು ನಾಚಿಕೆಯನ್ನುಂಟುಮಾಡುವ ಮಾತುಗಳನ್ನಾಡುವುದರಲ್ಲಿ ಅಸಹಜ ವಾದುದು ಆವುದು? ನಮ್ಮ ಸ್ತ್ರೀಜಾತಿಯಲ್ಲಿ ಈ ದುರ್ಗುಣವಿರುವ ಪರ್ಯಂತ ಇದಕ್ಕಿಂತ ಹೆಚ್ಚಾಗಿ ಪುರುಷರು ನಮ್ಮನ್ನು ಆಡಿದಾಗ್ಯೂ ನಾವು ಅವರಲ್ಲಿ ದೋಷವೆಣಿಸಕೂಡದು. ಈ ಅವಮಾನಕ್ಕೆ ನಾವೇಕಾರಣ ರಾಗಿದ್ದೇವೆ. ನಮ್ಮಲ್ಲಿ ವಿವೇಕ ಉದ್ಯೋಗ ಇವೇ ಮುಂತಾದ ದೊಡ್ಡ ಗುಣಗಳಿಲ್ಲ. ಆದುದರಿಂದ ಪುರುಷರಿಗೆ ನಮ್ಮ ವಿಷಯದಲ್ಲಿ ಗೌರವವಿಲ್ಲ. ಆದಕಾರಣ ಅವರು ನಮ್ಮನ್ನು ಲಕ್ಷಿಸದೆ ನಾವು ಕಾಣುವಹಾಗೆ ತಮ್ಮ ಮನಸ್ಸಿಗೆ ಬಂದಂತೆ ನಡೆಯುತ್ತಾರೆ. ಇದೆಲ್ಲ ನಿಜವೇ ಸರಿ. ಆದಾಗ್ಯೂ ಇಂಥ ಸಹಿಸಲಶಕ್ಯವಾದ ಅಪಮಾನವನ್ನು ಲಕ್ಷೀಕರಿಸದೆ ಇರುವುದು ನಮಗೆ ಭೂಷಣವಲ್ಲ. ಈಶ್ವರಸೃಷ್ಟಿಯಲ್ಲಿ ನಾವು ಮನುಷ್ಯಜನ್ಮ ವನ್ನು ಎತ್ತಿರುವುದರಿಂದ ಅದಕ್ಕನುಸಾರವಾಗಿ ಆಚರಿಸಬೇಕು.

ಆದುದರಿಂದ ನನ್ನ ಪ್ರಿಯಸಹೋದರಿಗಳಿರಾ! ನಾವೆಲ್ಲರೂ ಕೂಡಿ ನಮ್ಮ ಶರೀರದಲ್ಲಿ ಅಜ್ಞಾನದ ದೆಸೆಯಿಂದ ಹೊಕ್ಕಿರುವ ಪಶುತ್ವ ರೂಪವಾದ ಪಿಶಾಚವನ್ನು ಉದ್ಯೋಗವೆಂಬ ಮಹಾಮಂತ್ರದಿಂದ ಹೊ ರಡಿಸುವುದಕ್ಕೆ ಪ್ರಯತ್ನ ಮಾಡೋಣ; ಮತ್ತು ಜ್ಞಾನವನ್ನು ಸಂಪಾ ದಿಸುವುದರಿಂದ ನಮಗೆ ಬರುವ ಉತ್ತಮ ಗುಣಗಳಿಗಾಗಿ ಸಾಹಸಮಾ ಡೋಣ. ಹೀಗೆ ಮಾಡಿದಲ್ಲಿ ಸ್ವಲ್ಪ ದಿವಸದಲ್ಲಿಯೇ ಈದುರ್ದಶೆಹೋಗಿ ಒಳ್ಳೆಯ ದಶೆ ಬಂದೀತು. ಈ ಹೀನ ಸ್ಥಿತಿಯಲ್ಲಿ ಇರುವುದರಿಂದ ನಿಮಗೆ ನಾಚಿಕೆ ಯಾಗುವುದಿಲ್ಲವೇ? ನಿಮ್ಮ ಸುಂದರವಾದ ಕೋಮಲ ಹೃದಯಕ್ಕೆ ಈ ಅತ್ಯಂತವಾದ ದುಃಖವು ಹೇಗೆ ಸಹ್ಯವಾಗುತ್ತದೆ? ಒಂದು ಪಶುವು ಬಾವಿಯಲ್ಲಿ ಬಿದ್ದರೆ ತನ್ನ ರಕ್ಷಣೆಗಾಗಿ ಕಾಲುಗಳನ್ನು ಅಲ್ಲಾಡಿಸುತ್ತದೆ. ನೀವು ಮನುಷ್ಯ ಜನ್ಮವೆತ್ತಿ ಈ ಅಜ್ಞಾನವೆಂಬ ಕೂಪದಲ್ಲಿ ಬಿದ್ದುಕೊಂಡು, ಮೇಲಕ್ಕೆ ಬರುವುದಕ್ಕೆ ಏಕೆ ಪ್ರಯತ್ನ ಮಾಡುವುದಿಲ್ಲ?

ನೀವೆಲ್ಲರೂ ಒಂದೇ ಮನಸ್ಸಿನಿಂದ ಈಗಲೇ ಇನ್ನೂ ಸಮಯ ವಿರುವಾಗಲೆ ಉದ್ಯೋಗ ಮಾಡಿರಿ. ಉದ್ಯೋಗ ಮಾಡುವವರಿಗೆ ಅವುದೂ ಅಸಾಧ್ಯವಲ್ಲ. ಉದ್ಯೋಗ ಮಾಡಿರೆಂಬುದೇ ನಾನು ಪದೇ ಪದೇ ನಿಮಗೆ ಹೇಳತಕ್ಕ ಮಾತಾಗಿದೆ. ನಿಮ್ಮ ಶರೀರದ ರಕ್ತವು ಉತ್ಸಾಹದಿಂದ ಬಿಸಿಯಾಗಿ ಪ್ರತಿ ನರದಲ್ಲಿಯೂ ವೇಗದಿಂದ ಸಂಚರಿಸಿ, ನಿಮ್ಮ ಸಜೀವತ್ವವನ್ನು ಜನರಿಗೆ ಕಾಣಿಸಲಿ. ನಿಮ್ಮ ಉದ್ಯೋಗ, ತಿಳಿವಳಿಕೆ, ತೇಜಸ್ಸು, ಸತ್ಯವ್ರತ, ಈಶ್ವರ ಪರಾಯಣತೆ, ಪಾತಿವ್ರತ್ಯ ಇವೇ ಮುಂತಾದ ಧರ್ಮಗಳು ಜನರ ಕಣ್ಣಿಗೆ ಬಿದ್ದು ಅವರ ಮನಸ್ಸನ್ನು ಸ್ತಬ್ಧಮಾಡಲಿ. ನಮ್ಮ ಭರತವರ್ಷದ ಪೂರ್ವಕಾಲದ ಉತ್ತಮಸ್ತ್ರೀಯರ ಮಹಿಮೆಯನ್ನು ಜೀರ್ಣೋದ್ಧಾರ ಮಾಡಿರಿ. ನೀವು ಯುದ್ಧರಂಗಕ್ಕೆ ಹೋಗಿ ಯುದ್ಧಮಾಡಬೇಕಾದುದಿಲ್ಲ. ನಿಮ್ಮ ಆಲಸ್ಯವೆಂಬ ಶತ್ರುವಿನ ಸಂಗಡ ಯುದ್ಧಮಾಡಿ ಅವನ್ನು ಗೆದ್ದರೆ ಮೂರುಲೋಕಗಳನ್ನೇ ಗೆದ್ದಹಾಗಾಯಿತು. ಈ ನಿಮ್ಮ ಪರಾಕ್ರಮವನ್ನು ಜಗತ್ತೆಲ್ಲಾ ನೋಡಿ ನಿಮ್ಮನ್ನು ಕೊಂಡಾಡಲಿ.

ನಿಮ್ಮ ಸುಖವೆಂಬ ಮನೆಯ ಅಸ್ತಿಭಾರವನ್ನು ಜ್ಞಾನವೆಂಬ ಎತ್ತರವಾದ ಪರ್ವತದಮೇಲೆ ಬಹಳ ಬಲವಾಗಿ ಹಾಕಿದರೆ ನಿಮ್ಮ ಸುಖವೆಂಬ ಮನೆಯು ಶಾಶ್ವತವಾಗಿ ನಿಲ್ಲುತ್ತದೆ. ಈ ಅಸ್ತಿಭಾರದ ಹೆಸರು ಆತ್ಮಾವಲಂಬನವು. ನಿಮ್ಮ ಉನ್ನತಿಗಾಗಿ ನೀವು ಇನ್ನೊಬ್ಬರನ್ನು ಆಶ್ರಯಿಸುವ ಅವಶ್ಯವಿಲ್ಲ. ಎಲ್ಲಾ ಸ್ತ್ರೀಯರೂ ತಮ್ಮ ಉನ್ನತಿಗಾಗಿ ತಮ್ಮಷ್ಟಕ್ಕೆ ತಾವೇ ಆದಷ್ಟು ಕೆಲಸವನ್ನು ಸ್ಥೈರ್ಯದಿಂದ ಮಾಡುತ್ತಿರಬೇಕು. ಈ ಕೆಲಸಕ್ಕೆ ತಕ್ಕ ಯಶಸ್ಸನ್ನು ಕೊಡಲು ಸಮರ್ಥನಾಗಿರುವ ದೇವರು ನಿಮಗೆ ಬೆನ್ನು ಕಾವಲಾಗಿ ಇದ್ದಾನೆ.

---

## 2ನೆಯ ಪರಿಚ್ಛೇದ.

---

### ವಿದ್ಯೆ.

ಯಾವನಲ್ಲಿ ಧನವಿರುವುದಿಲ್ಲವೋ ಅವನಿಗೆ ಸುಖವಿಲ್ಲ. ಧನವಿಲ್ಲದವನು ಒಂದು ದಿವಸ ಕೂಡ ನಿರ್ವಹಿಸುವುದು ಶ್ರಮವಾಗುತ್ತದೆ. ಆದುದರಿಂದ ಪಂಡಿತರು ಧನಕ್ಕೆ ಬಹಿಃಪ್ರಾಣ—ಎಂದರೆ ಹೊರಗಿನ ಪ್ರಾಣ—ಎಂದು ಹೆಸರಿಟ್ಟಿದ್ದಾರೆ. ಧನವಿಲ್ಲದವನು ಜೀವನ್ಮೃತನಂತೆ ಕಾಣುತ್ತಾನೆ. ದೊಡ್ಡವರಲ್ಲಿ ಹೋಗಿ ಅವರನ್ನು ಕಾಣುವುದಕ್ಕೂ ಅವನಿಗೆ ನಾಚಿಕೆಯುಂಟಾಗುತ್ತದೆ. ಅವನ ಶರೀರವೂ ವಸ್ತ್ರವೂ ಕೊಳೆಯಿಂದಲೂ, ಮನಸ್ಸು ನಾನಾವಿಧ ಚಿಂತೆಯಿಂದಲೂ, ಮಲಿನವಾಗಿ ಅವನ ಮುಖವು ತೇಜೋಹೀನವಾಗಿ ಇರುತ್ತದೆ. ಜನರು ಅವನನ್ನು ಪದೇ ಪದೇ ಹಾಸ್ಯಮಾಡುತ್ತಲೂ ತಿರಸ್ಕರಿಸುತ್ತಲೂ ಇರುತ್ತಾರೆ. ಆದುದರಿಂದ ಅವನಿಗೆ ತನ್ನ ಬಾಳೇ ಅಸಹ್ಯವಾಗಿರುತ್ತದೆ. ಅವನು ಈ ಲೋಕದ ಬಾಳಿಕೆಯನ್ನು ನರಕಯಾತನೆಯಂತೆ ಎಣಿಸುತ್ತಾನೆ. ಮುಖ್ಯವಾಗಿ ಧನವಿಲ್ಲದವನಿಗೆ ಸಂಸಾರದಲ್ಲಿ ಸುಖವಿಲ್ಲ. ಆದುದರಿಂದ ಸಂಸಾರದಲ್ಲಿ ತಮ್ಮ ಯೋಗ್ಯತಾನುಸಾರವಾಗಿ ಸೌಖ್ಯದಿಂದಲೂ ಮರ್ಯಾದೆಯಿಂದಲೂ ಇರಬೇಕೆಂದು ಅಪೇಕ್ಷಿಸುವ ಪ್ರತಿ ಮನುಷ್ಯನೂ ತಕ್ಕಮಟ್ಟಿಗೆ ಧನವನ್ನು ಸಂಪಾದಿಸಿ ಕಾಪಾಡಿಕೊಂಡಿರಬೇಕು.

ಭೂಮಿ, ಧಾನ್ಯ, ದನ, ಕರು, ಚಿನ್ನ, ಬೆಳ್ಳಿ, ಮುತ್ತು, ಮಾಣಿಕ ಮುಂತಾದ ಸ್ಥಾವರಜಂಗಮ ಸ್ವತ್ತುಗಳಿಗೆ ಧನವೆನ್ನುತ್ತಾರೆ. ಅದು ಅನೇಕ ವಿಧವಾಗಿದೆ. ಈ ಧನವುಳ್ಳ ಮನುಷ್ಯನಿಗೆ ನಾನಾ ಪ್ರಕಾರವಾದ ಲಾಭವೂ ಸುಖವೂ ದೊರಕುತ್ತದೆ ಆದಾಗ್ಗೂ ಈ ಧನವು ಸ್ಥಿರವಾಗಿ ನಿಲ್ಲತಕ್ಕುದಲ್ಲ. ಭೂಮಂಡಲದಲ್ಲಿರುವ ಸರ್ವವಸ್ತುಗಳೂ ನಶ್ವರವಾಗಿಯೂ ಅವುಗಳಿಂದ ಉಂಟಾಗುವ ಸುಖವು ಕ್ಷಣಿಕವಾಗಿಯೂ ಇರುತ್ತವೆ. ಆದುದರಿಂದ ಬುದ್ಧಿವಂತರಾಗಿ ವಿಚಾರಪರರಾದವರು ನಾಶವಾಗದೆ ಇರುವ ಮತ್ತು ಅಪಾರವಾದ ಸುಖವನ್ನು

ಕೊಡುವ ಧನವನ್ನು ಸಂಪಾದಿಸುವ ಉದ್ಯೋಗವನ್ನು ಮಾಡಬೇಕು. ಇಂಥ ಧನವು ಪ್ರಪಂಚದಲ್ಲಿ ಯಾವುದೆಂದರೆ ವಿದ್ಯೆಯೇ.

ವಿದ್ಯೆಯೆಂಬ ಧನವು ಲೋಕದಲ್ಲಿ ನಾಶರಹಿತವಾದುದು. ಇದನ್ನು ಸಂಪಾದಿಸಿದವನು ಜಗತ್ತಿನಲ್ಲಿ ಎಲ್ಲರಿಗಿಂತಲೂ ಸುಖಿಯಾಗಿರುತ್ತಾನೆ. ಅಜ್ಞಾನವೆಂಬ ಘೋರವಾದ ಕತ್ತಲೆಯಲ್ಲಿ ಸಿಕ್ಕಿ ದುಃಖಪಡುತ್ತಿರುವವನಿಗೆ ವಿದ್ಯೆಯು ಸೂರ್ಯನಂತೆ ಪ್ರಕಾಶವನ್ನು ಕೊಡುತ್ತದೆ. "ನಮಗೆ ಕಣ್ಣುಗಳಿವೆ; ಹಗಲಲ್ಲಿ ಸೂರ್ಯನ ಬೆಳಕಿನಿಂದಲೂ ರಾತ್ರಿಯಲ್ಲಿ ಚಂದ್ರನಕ್ಷತ್ರದೀಪಗಳ ಬೆಳಕಿನಿಂದಲೂ ನಾವು ಪದಾರ್ಥಗಳನ್ನು ಕಾಣುತ್ತೇವೆ" ಎಂದು ಹೇಳುತ್ತೀರಿ. ನಿಮಗೆ ವಿದ್ಯೆಯಿಲ್ಲದಿದ್ದರೆ ಸಾವಿರ ಕಣ್ಣುಗಳಿದ್ದಾಗ್ಗೂ ನೀವು ಕುರುಡರೇ ಸರಿ. ಗೋಡೆಯಿಂದೀಚೆ ನಿಮ್ಮ ಕಣ್ಣೆದುರಿಗಿರುವ ವಸ್ತುಗಳನ್ನು ಸಾಧಾರಣವಾಗಿ ನೀವು ನೋಡಬಹುದು. ಪರಂತು ನಿಮಗೆ ಹೊರಗಿನ ಕಣ್ಣುಗಳು ಮಾತ್ರವಿದ್ದು ಒಳಗಿನ ಕಣ್ಣು ಇಲ್ಲದಿದ್ದರೆ ಗೋಡೆಯಿಂದಾಚೆ ಬಹಳ ದೂರದಲ್ಲಿರುವ ಪದಾರ್ಥಗಳನ್ನು ನೋಡುವುದಕ್ಕೆ ನಿಮ್ಮಿಂದಾಗದು. ವಿದ್ಯೆಯಿಂದ ಒಳಗಿನ ದೃಷ್ಟಿ ನಿರ್ಮಲವಾದರೆ ಅದರ ಪ್ರಕಾಶದಿಂದ ಯಾವ ವಸ್ತು ಎಷ್ಟು ದೂರದಲ್ಲಿದ್ದಾಗ್ಗೂ ನೋಡಬಹುದು. ವಿದ್ಯಾವಂತರು ಹುಟ್ಟುಕುರುಡರಾದಾಗ್ಗೂ ತಮ್ಮ ಒಳಗಿನ ಕಣ್ಣುಗಳಿಂದ ಪ್ರಪಂಚವನ್ನೆಲ್ಲಾ ನೋಡಿ ಆನಂದಪಡುತ್ತಾರೆ.

ಎಲ್ಲಾ ಇಂದ್ರಿಯಗಳಲ್ಲಿಯೂ ನೇತ್ರೇಂದ್ರಿಯವು ಶ್ರೇಷ್ಠವಾದುದು. ಶರೀರವೆಲ್ಲಾ ಬಹಳ ಸುಂದರವಾಗಿದ್ದರೂ ಕಣ್ಣುಗಳಿಲ್ಲದವನು ಚೆನ್ನಾಗಿ ಕಾಣಿಸುವುದಿಲ್ಲ.

ಸಾಧಾರಣವಾಗಿ ಹೊರಗಿನ ವಸ್ತುಗಳನ್ನು ನೋಡುವುದಕ್ಕೆ ಉಪಯೋಗವಾಗಿರುವ ಹೊರಗಿನಕಣ್ಣು ಯಾರಿಗಾದರೂ ಹೋಗಿದ್ದು ಅದನ್ನು ಸಂಪಾದಿಸಿಕೊಳ್ಳುವುದಕ್ಕೇನಾದರೂ ಉಪಾಯವಿದ್ದರೆ, ಆ ಮನುಷ್ಯನು ತನ್ನ ಇತರ ಎಲ್ಲಾ ಪವ್ಯಾಸವನ್ನೂ ಬಿಟ್ಟು, ಆ ಕಣ್ಣನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಮಾಡುತ್ತಿದ್ದನು. ಪರಂತು ಮೊದಲಿನಿಂದಲೂ ಇಲ್ಲದೆ ಇರುವ ಕಣ್ಣುಗಳನ್ನು ಸಂಪಾದಿಸಿಕೊಳ್ಳುವ ಉಪಾಯವು ಪ್ರಪಂಚದಲ್ಲಿ ಇನ್ನೂ ಯಾರಿಗೂ ತಿಳಿದಿಲ್ಲ. ವಿದ್ಯಾಭ್ಯಾ

ಸವನ್ನು ಮಾಡಿದರೆ ತಾನು ಕುಳಿತಿರುವ ಸ್ಥಳದಿಂದಲೇ ಬಹಳ ದೂರದವರೆಗೂ ಚರ್ಮಚಕ್ಷುಸ್ಸಿಗೆ ಅಗೋಚರವಾದುದನ್ನೆಲ್ಲಾ ನೋಡುವುದಕ್ಕೆ ಸಾಧನವಾಗಿರುವ ಒಳಗಿನ ಕಣ್ಣು ಸಿಕ್ಕುತ್ತವೆ. ಇಂಥ ಬೆಲೆಯಿಲ್ಲದ ಲಾಭಕ್ಕೋಸ್ಕರ ನೀವು ಏತಕ್ಕೆ ಪ್ರಯತ್ನ ಮಾಡಬಾರದು?

ಒಳಗಿನ ಕಣ್ಣೆಂದರೆ ಜ್ಞಾನವು. ಜ್ಞಾನಕ್ಕೆ ವಿದ್ಯೆಯು ತಾಯಿಯಾಗಿದೆ. ತಾಯಿಯಿಲ್ಲದೆ ಕೂಸು ಹೇಗೆ ಹುಟ್ಟುವುದಿಲ್ಲವೋ ಹಾಗೇ ವಿದ್ಯೆಯಿಲ್ಲದೆ ಜ್ಞಾನವು ಹುಟ್ಟುವುದಿಲ್ಲ. ಆದುದರಿಂದ ನಿಮಗೆ ಜ್ಞಾನವು ಬೇಕಾಗಿದ್ದರೆ ವಿದ್ಯಾಭ್ಯಾಸವನ್ನು ಮಾಡಿರಿ. ಅದಕ್ಕಾಗಿ ಕೆಲವು ನಿಬಂಧನೆಗಳನ್ನು ಹೇಳುತ್ತೇನೆ.

ಸಣ್ಣ ಕೂಸಿಗೆ ದೊಡ್ಡವರು ಹೇಗೆ ಮಾತನಾಡುವುದಕ್ಕೆ ಕಲಿಸುತ್ತಾರೋ ಅದು ಹಾಗೆ ಮಾತನಾಡುತ್ತದೆ. ಅದಕ್ಕೆ ಮಾತನಾಡುವುದಕ್ಕಾಗಲೀ ಇನ್ನಾವ ಕೆಲಸವನ್ನು ಮಾಡುವುದಕ್ಕಾಗಲಿ ಹೇಳಿಕೊಡದೆ ಬರುವುದೇ ಇಲ್ಲ. ಹಾಗೆಯೇ ಹೇಳಿಕೊಡುವವರು ಇಲ್ಲದಿದ್ದರೆ ಪ್ರಾಯೇಣ ವಿದ್ಯೆಯೂ ಬರುವುದಿಲ್ಲ. ಒಬ್ಬ ಹೊಸಬನಾದ ಪರಸ್ಥಳದವನು ತಾನು ಕಾಣದೆಯಿದ್ದ ಪಟ್ಟಣಕ್ಕೆ ಹೋಗಿ ಅಲ್ಲಿ ಒಬ್ಬರನ್ನೂ ಕೇಳದೆ ತನ್ನ ಮನಸ್ಸು ಬಂದಕಡೆ ತಿರುಗುತ್ತಾ ಇದ್ದರೆ ಅವನು ಅನೇಕ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಅವನು ತಾನು ಹೋಗಬೇಕಾದ ದಾರಿಯು ಆವುದೆಂಬುದನ್ನು ಬಲ್ಲವರಿಂದ ಕೇಳಿ ತಿಳಿದುಕೊಳ್ಳಬೇಕು. ಹಾಗೆಯೇ ವಿದ್ಯಾಭ್ಯಾಸ ಮಾಡುವವರು ಅದರ ಮಾರ್ಗವನ್ನು ಕೇಳಿ ತಿಳಿದುಕೊಳ್ಳಬೇಕು. ವಿದ್ಯೆಯನ್ನು ಕಲಿಸಿ ಅದರ ದಾರಿಯನ್ನು ತೋರಿಸುವವನನ್ನು ಉಪಾಧ್ಯಾಯನೆಂದೂ ಗುರುವೆಂದೂ ಎನ್ನುತ್ತಾರೆ.

ಸಣ್ಣ ಹುಡುಗರಿಗೂ ಮುಖ್ಯವಾಗಿ ಹುಡುಗಿಯರಿಗೂ ಪ್ರೌಢಸ್ತ್ರೀಯರಿಗೂ ವಿದ್ಯಾಭ್ಯಾಸ ಮಾಡಿಸಬೇಕೆಂಬ ಅಪೇಕ್ಷೆಯುಳ್ಳ ಅವರ ಸಂರಕ್ಷಕರು ವಿದ್ಯೆಯನ್ನು ಕಲಿಸತಕ್ಕ ಗುರುವನ್ನು ಚೆನ್ನಾಗಿ ಪರೀಕ್ಷಿಸಿ ನೇಮಿಸಬೇಕು. ಏತಕ್ಕೆಂದರೆ, ಮನುಷ್ಯನಿಗೆ ಸಹವಾಸಕ್ಕೆ ತಕ್ಕ ಗುಣಗಳು ಬರುತ್ತವೆ.

ನೀರನ್ನು ಹಾಲಿನಲ್ಲಿ ಬೆರಸಿದರೆ ನೀರಿಗೆ ಹಾಲಿನ ಗುಣಗಳು ಬರು

ತ್ತವೆ; ಮತ್ತು ನೀರನ್ನು ಕೆಸರಿನೊಡನೆ ಬೆರಸಿದರೆ ಕೆಸರಿನ ಗುಣಗಳು ಬರುತ್ತವೆ. ಹಾಗೆಯೇ ಮನುಷ್ಯನಿಗೆ ಸಹವಾಸಕ್ಕೆ ಅನುಸಾರವಾಗಿ ಒಳ್ಳೆಯ ಗುಣವಾಗಲಿ ಕೆಟ್ಟಗುಣವಾಗಲಿ ಬರುತ್ತದೆ. ವಿಶೇಷವಾಗಿ ಹುಡುಗರ ಮತ್ತು ಹೆಂಗಸರ ಮನಸ್ಸು ಶುಭ್ರವಸ್ತ್ರದಂತೆ ಸ್ವಚ್ಛವಾಗಿಯೂ ಎಳೆಯ ಬಿದಿರಿನಂತೆ ಮೃದುವಾಗಿಯೂ ಇರುತ್ತದೆ. ಶುಭ್ರವಸ್ತ್ರದಮೇಲೆ ಯಾವ ಬಣ್ಣವನ್ನು ಹಾಕಿದರೂ ಚೆನ್ನಾಗಿ ಅಂಟುತ್ತದೆ; ಎಳೆಯ ಬಿದಿರನ್ನು ಹೇಗೆ ಬಗ್ಗಿಸಿದರೂ ಬಗ್ಗುತ್ತದೆ. ಬಹಳ ದಿವಸವಾದಮೇಲೆ ಆ ವಸ್ತ್ರದಮೇಲೆ ಬೇರೆ ಬಣ್ಣ ಹಾಕುವುದಕ್ಕೂ ಆ ಬಿದಿರನ್ನು ಬೇರೆ ರೀತಿಯಾಗಿ ಬಗ್ಗಿಸುವುದಕ್ಕೂ ಪ್ರಯಾಸವಾಗುತ್ತದೆ. ಇದರಂತೆಯೇ ಆರಂಭದಲ್ಲಿ ಹತ್ತಿದ ಅಭ್ಯಾಸವು ಒಳ್ಳೆಯದಾಗಲಿ ಕೆಟ್ಟದಾಗಲಿ ಜನ್ಮವಿರುವವರಿಗೂ ಅವರನ್ನು ಬಿಡುವುದಿಲ್ಲ.

ವಿದ್ಯಾಭ್ಯಾಸ ಮಾಡುವವರು ತಮ್ಮ ಗುರುಗಳಲ್ಲಿ ಬಹಳ ಮರ್‍ಯಾದೆಯಿಂದಿರಬೇಕು. ಅವರ ಮುಂದೆ ನಿಷ್ಕಾರಣವಾಗಿಯಾಗಲಿ ಹೆಚ್ಚಾಗಿಯಾಗಲಿ ನಗಕೂಡದು. ಅವರ ವಿಷಯದಲ್ಲಿ ಅವರ ಮುಂದಾಗಲಿ ಹಿಂದಾಗಲಿ ಹಾಸ್ಯಮಾಡಬಾರದು. ಅವರ ಎದುರಿಗೆ ಅಮರ್‍ಯಾದೆಯಾಗಿಯೂ ಬಹಳ ಗಟ್ಟಿಯಾಗಿಯೂ ಮಾತನಾಡಬಾರದು. ಕಾಲು ಚಾಚಿಕೊಂಡು ಕುಳಿತುಕೊಳ್ಳಬಾರದು, ಉಗುಳಬಾರದು, ಆಕಳಿಸಬಾರದು, ಬಾಯಿಗೆಬಂದಂತೆ ಅವರಿಗೆ ಉತ್ತರಕೊಡಬಾರದು ಅವರನ್ನು ಕುರಿತು 'ನೀನು ತಾನು' ಎಂದು ಏಕವಚನದಲ್ಲಿ ಮಾತನಾಡಬಾರದು. ಅವರ ಸಂಗಡ ಮಾತನಾಡುವಾಗ ಬಹಳ ನಮ್ರತೆಯಿಂದ ಪ್ರಸನ್ನಮುಖರಾಗಿ ಮಧುರಸ್ವರದಿಂದ ಮಾತನಾಡಬೇಕು. ಕರ್ಕಶವಾಗಿಯೂ ಸುಳ್ಳಾಗಿಯೂ ಕಪಟವಾಗಿಯೂ ಇರುವ ಮಾತುಗಳನ್ನು ಆಡಬಾರದು. ಅವರು ಪ್ರಶ್ನೆ ಮಾಡದಿದ್ದರೆ ಆವ ವಿಷಯವನ್ನೂ ಅವರ ಸಂಗಡ ಹೇಳಬಾರದು. ಪರಂತು ಕುಶಲಪ್ರಶ್ನೆಯೇ ಮುಂತಾದ ಉಪಚಾರದ ಮಾತುಗಳನ್ನು ತಾವಾಗಿಯೇ ಆಡಬಹುದು. ಸಂಶಯ ಬಂದುದನ್ನು ಕೇಳಬೇಕಾದರೂ, ಅವುದಾದರೂ ಕೆಲಸ ನಿಂತು ಹೋಗಿದ್ದರೂ, ಅವರ ಸಮಯ ನೋಡಿ ಕೇಳಬೇಕು. ಗುರುಗಳ ಎದುರಿಗೆ ಒರಟುತನವನ್ನು ಮಾಡಬಾರದು. ಏನಾದರೂ ಅಪರಾಧಮಾಡಿದುದ

ಕ್ಕಾಗಿ ಉಪಾಧ್ಯಾಯನು ಹೊಡೆದರೆ ಅಥವಾ ಸಿಟ್ಟುಮಾಡಿದರೆ ಅದಕ್ಕೆ ತಿರುಗಿ ಸಿಟ್ಟುಮಾಡಬಾರದು. ತಮ್ಮ ದೋಷಗಳನ್ನು ತಿದ್ದುವ ಗುರುವು ಮಾಡಿದ ಸಿಟ್ಟಿಗೆ ತಿರುಗಿ ಸಿಟ್ಟುಮಾಡದೆ ತಮ್ಮ ದೋಷವನ್ನು ಬಿಡುವುದಕ್ಕೆ ಪ್ರಯತ್ನಪಡುವವರು ಎಲ್ಲರಲ್ಲಿಯೂ ದೊಡ್ಡವರೆನ್ನಿಸಿಕೊಳ್ಳುತ್ತಾರೆ ; ಹಾಗೆ ಮಾಡದೆ ಇರುವವರಿಗೆ ಪ್ರತಿಷ್ಠೆ ಬರುವುದಿಲ್ಲ.

ಯಾರಮೇಲೆಯಾಗಲಿ ನಿಂದೆಯನ್ನಾಗಲಿ ಚಾಡಿಮಾತುಗಳನ್ನಾಗಲಿ ಹೇಳಬಾರದು. ತನ್ನಲ್ಲಿ ತಪ್ಪಿಲ್ಲದೆ ಗುರುವು ಸಿಟ್ಟುಮಾಡಿದರೆ ನಮ್ರತೆಯಿಂದ ತಾನು ನಿರಪರಾಧಿಯೆಂದು ತಿಳಿಸಬೇಕು. ಉದ್ಧತತನವನ್ನಾಗಲಿ ಕೋಪವನ್ನಾಗಲಿ ಮಾಡಬಾರದು. ಸುಳ್ಳುಕಲ್ಪಿಸಿಕೊಂಡು ತಾನು ನಿರಪರಾಧಿಯೆಂದು ತೋರಿಸಿಕೊಳ್ಳಬಾರದು. ತನ್ನ ತಪ್ಪನ್ನು ಇನ್ನೊಬ್ಬರ ಮೇಲೆ ಹಾಕಬಾರದು. ಗುರುವು ಹೇಳಿದುದನ್ನು ಮನಸ್ಸಿಟ್ಟು ಕೇಳಬೇಕು. ಮಧ್ಯದಲ್ಲಿ ಗದ್ದಲವನ್ನು ಮಾಡಬಾರದು. ಒಂದುಸಲ ಹೇಳಿದುದು ತಿಳಿಯದೆ ಇದ್ದರೆ ಇನ್ನೊಂದುಸಲ ಕೇಳಿ ತಿಳಿದುಕೊಳ್ಳಬೇಕು.

ವಿದ್ಯಾಭ್ಯಾಸವನ್ನು ಮಾಡುವಾಗ ಮನಸ್ಸನ್ನು ಬೇರೆಕಡೆಗೆ ಹೋಗಗೊಡಿಸಬಾರದು. ಚೆನ್ನಾಗಿ ಮನಸ್ಸಿಟ್ಟು ಪಾಠಗಳನ್ನು ಕಲಿತರೆ ಬೇಗನೆ ದೃಢವಾಗುತ್ತದೆ ಕಲಿವುದರಲ್ಲಿ ಪಾಲುಮಾರಿಕೆ ಇರಬಾರದು. ಅಭ್ಯಾಸವಿಲ್ಲದವನಿಗೆ, ಮೊದಲು ಕೆಲವು ದಿವಸ, ಆಲಸ್ಯಮಾಡದೆ ಏಕಾಗ್ರಚಿತ್ತದಿಂದ ವ್ಯಾಸಂಗಮಾಡುವುದು ಶ್ರಮವಾಗುತ್ತದೆ. ಪರಂತು ಅಭ್ಯಾಸಬಿದ್ದಮೇಲೆ ನಿತ್ಯವೂ ಮಾಡಬೇಕಾದ ಕೆಲಸವನ್ನು ಮಾಡದಿದ್ದರೆ ಮನಸ್ಸಿಗೆ ಸಮಾಧಾನವೇ ಆಗುವುದಿಲ್ಲ. ಈ ದಿವಸದ ಪಾಠವನ್ನು ನಾಳೆಯ ದಿವಸ ಅಥವಾ ಹಿಂದಣಿಂದ ಕಲಿಯಬಹುದು ಎಂದು ಪಾಲುಮಾರಿಕೆಯನ್ನು ಮಾಡಬಾರದು. ಕಳೆದು ಹೋದ ಹೊತ್ತು ತಿರುಗಿ ಸರ್ವಥಾ ಬರುವುದಿಲ್ಲ. ಪಾಲುಮಾರಿಕೆಯಿಂದ ಒಂದು ಗಳಿಗೆ ಹೊರಳಾಡುವುದಕ್ಕೆ ತೊಡಗಿದರೆ ತಿರುಗಿ ಏಳುವುದಕ್ಕೆ ಮನಸ್ಸಾಗದೆ ಹಿಡಿದ ಕೆಲಸವೊಂದೂ ನೆರವೇರುವುದಿಲ್ಲ. ಬಾಲ್ಯದಲ್ಲಿ ಜನರಿಗೆ ಸಂಸಾರವೇ ಮುಂತಾದ ಯಾವ ತಾಪತ್ರಯವೂ ಇರುವುದಿಲ್ಲ. ಆಗ ಅವರ ಮನಸ್ಸು ಶಾಂತವಾಗಿ ಏಕಾಗ್ರವಾಗಿರುತ್ತದೆ ; ಯಾವ ವಿಷಯದಲ್ಲಿ

ಟ್ಟರೂ ಅದರಲ್ಲಿ ಸೇರಿ ಹೋಗುತ್ತದೆ. ಇಂಥಾ ಅಮೂಲ್ಯವಾದ ಅವಸ್ಥೆಯಲ್ಲಿ, ಪುನಃ ಸಿಕ್ಕದೆ ಇರುವಂಥ ಹೊತ್ತನ್ನು ಹುಡುಗರು ವ್ಯರ್ಥವಾಗಿ ಕಳೆಯಬಾರದು. ಸಾಧ್ಯವಾದಷ್ಟು ಬೇಗ ಜ್ಞಾನವನ್ನು ಸಂಪಾದಿಸಬೇಕು. ಹೀಗೆ ಮಾಡಿದರೆ ದೇಹವಿರುವವರೆಗೂ ಆವ ದುಃಖವನ್ನೂ ಅನುಭವಿಸಬೇಕಾಗುವದಿಲ್ಲ. ಹೀಗೆ ಮಾಡದೆ ಹೊತ್ತನ್ನು ವ್ಯರ್ಥವಾಗಿ ಕಳೆದುಬಿಟ್ಟರೆ ಅದು ತಿರುಗಿ ದೊರೆವುದಿಲ್ಲ. ನಾನಾವಿಧವಾದ ಸಂಸಾರದ ತೊಂದರೆಗಳು ಪ್ರಾಪ್ತವಾದ ಬಳಿಕ ವಿದ್ಯೆ ಎಲ್ಲಿಯದು ? ಜ್ಞಾನವೆಲ್ಲಿಯದು ? ಮೊದಲು ವ್ಯರ್ಥವಾಗಿ ಕಾಲವನ್ನು ಕಳೆದೆವೆಂದು ಪಶ್ಚಾತ್ತಾಪಮಾತ್ರ ಉಂಟಾಗುತ್ತದೆ.

ಸಾವಿರಾರು ಜನರು ಬಾಲ್ಯದಲ್ಲಿ ಈ ಮೇರೆ ಹಾಲುಮಾರಿಕೆಯಿಂದ ನಷ್ಟವನ್ನು ಹೊಂದಿ ಆಮೇಲೆ ಅತಿಶಯವಾದ ದುಃಖಸಂಕಟಗಳನ್ನು ಅನುಭವಿಸುತ್ತಾರೆ. "ಜ್ಞಾನವಿದ್ದವರಿಗೂ ಕೂಡ ದುಃಖಗಳು ಬಿಟ್ಟುವಲ್ಲವಾದುದರಿಂದ ಸುಮ್ಮನೆ ಸುಖಪಡುವ ಕಾಲದಲ್ಲಿ ವಿದ್ಯಾಭ್ಯಾಸದಲ್ಲಿ ವ್ಯರ್ಥವಾಗಿ ಕಾಲಹರಣ ಮಾಡುವುದರಲ್ಲಿ ಫಲವೇನು"—ಎಂದು ಕೆಲವರು ಹೇಳುತ್ತಾರೆ. ವಿದ್ಯಾವಂತರಿಗೆ ಸಂಕಟಗಳು ತಪ್ಪಿದುವಲ್ಲವೆಂಬುದು ನಿಜವಾಗಿದ್ದರು, ಅವರು ಸಂಕಟ ಬಂದವೇಳೆಯಲ್ಲಿ ಮೂಢರಂತೆ ಕಳವಳಪಟ್ಟು ನಿರಾಶೆಯಿಂದ ನಿರಾಧಾರವಾಗಿ ಸುಮ್ಮನೆ ಕುಳಿತಿರುವುದಿಲ್ಲ. ಅವರಲ್ಲಿ ಬಹಳ ಧೈರ್ಯವಿರುವುದು. ಸಂಕಟದಿಂದ ತಪ್ಪಿಸಿಕೊಳ್ಳುವ ಉಪಾಯವು ಅವರಿಗೆ ಆ ಸಮಯದಲ್ಲಿ ತೋರುತ್ತದೆ.

ವಿದ್ಯಾವಂತರ ಮನಸ್ಸು ಯಾವಾಗಲೂ ಶಾಂತವಾಗಿರುವುದರಿಂದ ಅವರು ಸರ್ವದಾ ಸುಖಿಗಳಾಗಿರುತ್ತಾರೆ; ಎಂಥ ಸಂಕಟಗಳು ಬಂದಾಗ್ಯೂ ಅವರ ಮನಸ್ಸಿಗೆ ವಿಶೇಷ ಸಂತಾಪವಾಗುವದಿಲ್ಲ. ಯಾರು ತಮ್ಮ ಮನಸ್ಸನ್ನು ಸ್ವಸ್ಥವಾಗಿ ಇಟ್ಟುಕೊಂಡಿರುತ್ತಾರೋ ಅವರೇ ಪ್ರಪಂಚದಲ್ಲಿ ಸುಖಿಗಳು. ಹೊರಗಿನ ಸುಖಗಳು ಸಾವಿರವಿದ್ದಾಗ್ಯೂ ಮನಸ್ಸು ಸ್ವಸ್ಥವಾಗಿರದಿದ್ದರೆ ಸುಖವೆಲ್ಲಿಂದ ಬರುತ್ತದೆ? ಕಾಲಿನಲ್ಲಿ ಜೋಡು ಹಾಕಿಕೊಂಡು ಮುಳ್ಳಿನ ಮೇಲೆ ನಡೆದರೂ ತೊಂದರೆಯಾಗುವುದಿಲ್ಲ. ಪರಂತು ಕಾಲಿನಲ್ಲಿ ಮುಳ್ಳುನೆಟ್ಟದ್ದಾಗ ಮಖಮಲ್ಲಿನ ಹಾಸಿಗೆಯಮೇಲೆ ನಡೆದಾಗಲೂ ಕಾಲು ನೋಯುತ್ತದೆ. ಮನಸ್ಸು ಸುಖದಿಂ

ದಿರುವ ವಿಷಯದಲ್ಲಿ ಜ್ಞಾನಕ್ಕೆ ಸಮಾನವಾದ ಸಾಧನವಿಲ್ಲ. ವಿದ್ಯೆಯೆಂಬ ಅಕ್ಷಯವಾದ ಧನವನ್ನು ಚೆನ್ನಾಗಿ ಉಪಯೋಗಿಸಿದರೆ ಅದು ನಾಶವಾಗುವದಿಲ್ಲ. ಮತ್ತು ಅದರಿಂದ ಸಾಧಿಸಿಕೊಳ್ಳಬಹುದಾದ ಲಾಭಗಳು ಇತರ ವಿಧವಾದ ಧನದಿಂದ ಸಾಧ್ಯವಾಗುವದಿಲ್ಲ. ವಿದ್ಯಾಭ್ಯಾಸವನ್ನು ಚೆನ್ನಾಗಿ ಮಾಡಿದರೆ ಜ್ಞಾನವುಂಟಾಗಿ ಆ ಜ್ಞಾನದಿಂದ ಜಗತ್ಪಿತನಾದ ದೀನಬಂಧುವಾದ ಪರಮೇಶ್ವರನ ದಾರಿ ಗೊತ್ತಾಗುತ್ತದೆ. ಈಶ್ವರನ ಭಕ್ತಿಯಿಂದ ಉಂಟಾಗುವ ಆನಂದದ ಮುಂದೆ ಇತರ ಎಲ್ಲಾ ಸುಖಗಳೂ ತುಚ್ಛಗಳಾಗಿವೆ. ದೊಡ್ಡದೊಡ್ಡ ಸಾಧುಗಳು ಎಲ್ಲಾ ವಿಧವಾದ ಈ ಲೋಕದ ಸುಖಗಳನ್ನೂ ಕಾಲಿನಿಂದ ಒದೆದು, ಈಶ್ವರನ ಭಕ್ತಿಯ ಆನಂದದಲ್ಲಿ ಮುಳುಗಿ, ಉದಾಸೀನಕ್ಕೆ ಯೋಗ್ಯವಾದ, ಭಯಂಕರವಾದ ಶ್ಮಶಾನವೇ ಮುಂತಾದ ಸ್ಥಳಗಳಲ್ಲಿ ಸುಖವಾಗಿ ಕಾಲಕ್ಷೇಪವನ್ನು ಮಾಡಿದ್ದಾರೆ. ಇದಕ್ಕೆ ನಿದರ್ಶನಗಳು ಅನೇಕವಾಗಿವೆ. ಈಶ್ವರನ ಭಕ್ತಿಯಲ್ಲಿ ಇಷ್ಟು ಸುಖವಿಲ್ಲದಿದ್ದರೆ ಮೇಲೆ ಹೇಳಿದಂತೆ ಎಲ್ಲಾ ಸುಖಗಳನ್ನೂ ಬಿಟ್ಟು ದುರ್ದಶೆಯುಲ್ಲಿರುವುದಕ್ಕೆ ಅವರಿಗೆ ಹುಚ್ಚು ಹಿಡಿದಿತ್ತೆ? ಇಲ್ಲ! ಇವರು ಎಲ್ಲರಿಗಿಂತ ಹೆಚ್ಚು ತಿಳಿವಳಿಕೆಯುಳ್ಳವರಾದುದರಿಂದಲೇ ಅಲ್ಪ ಸುಖದ ದಾರಿಯನ್ನು ಬಿಟ್ಟು ದೊಡ್ಡ ಸುಖದ ದಾರಿಯನ್ನು ಹಿಡಿದರು.

ನಿಮ್ಮ ಎದುರಿಗೆ ಒಂದು ಬುಟ್ಟಿಯಲ್ಲಿ ಬೋರೆ ಹಣ್ಣುಗಳನ್ನೂ ಒಂದು ಬುಟ್ಟಿಯಲ್ಲಿ ಮುತ್ತುಗಳನ್ನೂ ಇಟ್ಟು, ನಿಮಗೆ ಬೇಕಾದುದನ್ನು ತೆಗೆದುಕೊಳ್ಳಿರಿ ಎಂದು ಹೇಳಿದರೆ, ಬೋರೇಹಣ್ಣನ್ನು ತಿನ್ನಬೇಕೆಂಬ ಅಪೇಕ್ಷೆ ಇದ್ದರೂ ಅದನ್ನು ಬಿಟ್ಟು ಮುತ್ತುಗಳನ್ನೇ ತೆಗೆದುಕೊಳ್ಳುವುದರಲ್ಲಿ ಸಂದೇಹವಿಲ್ಲ. ಬೋರೇಹಣ್ಣಿಗಿಂತ ಮುತ್ತಿನ ಬೆಲೆ ಬಹಳ ಹೆಚ್ಚೆಂದು ನಿಮಗೆ ಚೆನ್ನಾಗಿ ತಿಳಿದಿದೆ. ಹೀಗೆಯೇ ನೀವು ಜ್ಞಾನವಂತರಾದರೆ ಈಗಿನ ಕ್ಷಣಿಕ ಸುಖಕ್ಕಿಂತಲೂ ಈಶ್ವರಭಕ್ತಿಜನ್ಯವಾದ ಸುಖವು ಬಹಳ ಹೆಚ್ಚಾದುದೆಂದು ನಿಮಗೆ ಗೊತ್ತಾಗುತ್ತದೆ. ಆಮೇಲೆ ಇಲ್ಲಿನ ಯಾವ ಸುಖದಮೇಲೂ ನೀವು ದೃಷ್ಟಿಯಿಡಲಾರಿರಿ.

ನಿಮ್ಮ ಮನಸ್ಸು ಅಂಥ ಅನಂತವಾದ ಅನಿರ್ವಚನೀಯಸುಖದ ಕಡೆಗೆ ತಿರುಗಿದರೆ ಪ್ರಪಂಚದಲ್ಲಿ ಎಂಥ ದುಃಖವು ನಿಮಗೆ ಸಂಘಟಿಸಿದರೂ ಅದು ನಿಮಗೆ ಗೊತ್ತು ಕೂಡಾ ಆಗಲಾರದು.

ಜ್ಞಾನಹೀನರಾದವರಿಗೆ ಈ ಸುಖದ ಸ್ವರೂಪವೇ ತಿಳಿದಿರುವುದಿಲ್ಲವಾದುದರಿಂದ ಈ ಲೋಕದ ಕ್ಷಣಿಕಸುಖದ ಆಶೆಯಿಂದ ರಾತ್ರಿಯೂ ಹಗಲೂ ಅಲ್ಲಿಂದ ಇಲ್ಲಿಗೂ ಇಲ್ಲಿಂದ ಅಲ್ಲಿಗೂ ಎಡೆಯಾಡುತ್ತಿರುತ್ತಾರೆ. ಆ ಸುಖವು ದೊರಕುವ ಆಶೆ ತಪ್ಪಿದ ಕೂಡಲೆ ಮೃತಪ್ರಾಯರಾಗುತ್ತಾರೆ. ಸಣ್ಣ ಸಣ್ಣ ದುಃಖಗಳಿಂದಲೂ ಕೂಡ ಅವರಿಗೆ ಬಹಳ ಸಂಕಟವಾಗುತ್ತದೆ. ಹೀಗಾದ ಮೇಲೆ ಅವರಿಗೆ ಸಂಸಾರದಲ್ಲಿ ದುಃಖಕ್ಕೆ ಪಾರವುಂಟೆ? ಆದುದರಿಂದ ಜ್ಞಾನಿಯಾಗುವುದಕ್ಕೆ ಸರ್ವಕಾಲದಲ್ಲಿಯೂ ಪ್ರಯತ್ನಮಾಡುತ್ತಿರಬೇಕು.

ನಿಮ್ಮಲ್ಲಿ ವಿದ್ಯಾಧನವಿದ್ದರೆ ಇತರ ಧನದ ಅವಶ್ಯಕತೆ ಉಂಟಾಗುವುದಿಲ್ಲ. ಮನುಷ್ಯನಿಗೆ ಕಾಲವೆಲ್ಲಾ ಒಂದೇ ಸಮನಾಗಿರುತ್ತದೆಂದು ಹೇಳುವುದಕ್ಕಾಗುವುದಿಲ್ಲ. ನೀವು ಬಡವರಾಗಿದ್ದಲ್ಲಿ ಸುಖಕ್ಕೆ ಸಾಧನವಾದ ಧನವನ್ನು ಸಂಪಾದಿಸಿ ಸುಖಿಗಳಾಗುವುದಕ್ಕಾಗಿ ವಿದ್ಯೆಯನ್ನು ಕಲಿಯಬೇಕು.

ಈಶ್ವರಕೃಪೆಯಿಂದ ನೀವು ಒಳ್ಳೆಯ ಸ್ಥಿತಿಯಲ್ಲಿದ್ದರೆ ಈ ಸ್ಥಿತಿ ಶಾಶ್ವತವಲ್ಲ. ಮುಂದೆ ಆವುದಾದರೂ ಸಂಕಟಪ್ರಸಂಗ ಬಂದಲ್ಲಿ ಅದನ್ನು ಶಮನ ಮಾಡುವ ಆಶೆಯೂ ಕೂಡ ಇರತಕ್ಕುದಲ್ಲ. ಈ ಕಾರಣದಿಂದ ಈಗಿನಿಂದ ಎಚ್ಚತ್ತು ವಿದ್ಯೆಯನ್ನು ಸಂಪಾದಿಸುವ ಯತ್ನವನ್ನು ಚೆನ್ನಾಗಿಮಾಡಬೇಕು.

ಗುರುಗಳು ಹೇಳಿಕೊಡುವ ಪಾಠವನ್ನು ನೀವು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು. ಗಿಣಿಯಂತೆ ಬರಿಯ ಬಾಯಿಪಾಠ ಮಾಡಿ ಸುಮ್ಮನೆ ಕುಳಿತುಕೊಳ್ಳಬೇಡಿರಿ. ನಿಮ್ಮ ಪಾಠದ ಭಾವಾರ್ಥವನ್ನು ತಿಳಿವವರೆಗೆ ನಿಮ್ಮ ಮನಸ್ಸನ್ನು ಮತ್ತೊಂದು ಕಡೆಗೆ ಬಿಡಬೇಡಿರಿ. ನೀವು ಓದಿರುವುದರ ಭಾವಾರ್ಥವನ್ನು ತಿಳಿಯದಿದ್ದರೆ ಅದರಿಂದ ಉಪಯೋಗವೇನು? ಬರಿಯ ಬಾಯಿಪಾಠ ಮಾಡುವ ಶ್ರಮಮಾತ್ರ ಉಂಟಾಗುತ್ತದೆ. ಈ ಪ್ರಕಾರ ಒಂದು ಚಿಕ್ಕ ಮನೆಯ ತುಂಬ ಪುಸ್ತಕಗಳನ್ನು ನೀವು ಬಾಯಿಪಾಠ ಮಾಡಿದರೂ ಅದರಿಂದ ನಿಮಗೆ ಏನೂ ಉಪಯೋಗವಾಗಲಾರದು. ಎತ್ತಿನ ಬೆನ್ನಿನ ಮೇಲೆ ಒಂದು ಸಕ್ಕರೆಯ ಹೇರನ್ನು ಹೇರಿದರೂ ಅದಕ್ಕೆ ಅದರ ರುಚಿ

ತಿಳಿದೀತೆ ? ಅದಕ್ಕೆ ಆ ಭಾರವನ್ನು ಹೊತ್ತುಹೊತ್ತು ಶ್ರಮ ಮಾತ್ರ ಆಗುತ್ತದೆ. ಅದೇ ಪ್ರಕಾರ ಅರ್ಥವನ್ನು ತಿಳಿಯದೆ ಕಲಿವ ವಿದ್ಯೆಯು ಗಸೆಯಿಂದ ನಿಮಗೆ ಬೇಸರ ಉಂಟಾಗದೆ ಇರುವುದಕ್ಕಾಗಿ ನೀವು ಕಲಿವ ಪಾಠದಲ್ಲಿ ಏನಿದೆಯೆಂದು ವಿಚಾರಮಾಡಿರಿ. ನೀವು ವಿಚಾರಮಾಡಿದ ಹಾಗೆಲ್ಲಾ ನಿಮಗೆ ಅಧಿಕಪ್ರಯೋಜನವುಂಟಾಗುತ್ತದೆ. ಸಮುದ್ರದ ದಡದಲ್ಲಿ ಕುಳಿತುಕೊಂಡು ನೀರಿನ ಮೇಲ್ಭಾಗವನ್ನು ಮಾತ್ರ ನೋಡುತ್ತಿದ್ದರೆ ಮುತ್ತುಗಳು ನೀರಿನ ಮೇಲೆ ತೇಲಿ ಬರುವುದಿಲ್ಲ ; ಬರಿಯ ಕಸ, ಹುಲ್ಲಿನ ಕಡ್ಡಿ, ನೊರೆ ಇವು ಮಾತ್ರ ಕಾಣುತ್ತವೆ. ಇಷ್ಟುಮಾತ್ರದಿಂದ ಮುತ್ತುಗಳು ಸಮುದ್ರದಲ್ಲಿ ಇಲ್ಲವೇ ಇಲ್ಲವೆಂದು ಎಣಿಸದೆ ಮುತ್ತು ತೆಗೆವವರು ನೀರಿನಲ್ಲಿ ಬಹಳ ಹೊತ್ತು ಮುಳುಗಿ ನೋಡುತ್ತಾರಾದುದರಿಂದ ಅವರಿಗೆ ಮುತ್ತುಗಳು ಸಿಕ್ಕುತ್ತವೆ. ಹಾಗೆಯೇ ವಜ್ರವೇ ಮೊದಲಾದ ರತ್ನಗಳೂ ಸುಮ್ಮನೆ ನೆಲದಲ್ಲಿ ಬಿದ್ದು ಇರುವುದಿಲ್ಲ. ಗಣಿಗಳಲ್ಲಿ ನೋಡಿದರೆ ಮೊದಲು ಮಣ್ಣು, ಇದ್ದಲು, ಕಲ್ಲು ಇವೇ ಕಣ್ಣಿಗೆ ಬೀಳುತ್ತವೆ ; ಬಹಳ ಆಳವಾಗಿ ಅಗೆದು ಚೆನ್ನಾಗಿ ನೋಡಿದರೆ ರತ್ನಗಳು ದೊರಕುತ್ತವೆ.

ಹಾಗೆಯೇ ವಿದ್ಯಾಭ್ಯಾಸದಲ್ಲಿಯೂ ಕೂಡ ನೀವು ಮೇಲೆ ಮೇಲೆ ಹೋದರೆ ನಿಮಗೆ ಜ್ಞಾನವೆಂಬ ರತ್ನವು ಸಿಕ್ಕುವುದಿಲ್ಲ. ಅದಕ್ಕೆ ಪ್ರತಿಯಾಗಿ ನಿಮಗೆ ಕಸ ಕಡ್ಡಿ ದೊರಕಿ ಅದರಿಂದ ನಿಮಗೆ ನಷ್ಟವುಂಟಾಗುವುದೇ ಹೊರತು ಇನ್ನೇನು ಇಲ್ಲ. ಇಂಥ ಅನಿಷ್ಟದಾಯಕವಾದ ಕಸ ಕಡ್ಡಿ ನಿಮಗೆ ದೊರಕುವುದಕ್ಕಿಂತ ಏನೂ ಸಿಕ್ಕದೆ ಇರುವುದು ಉತ್ತಮ. ಏನೂ ತಿಳಿಯದವರಿಗಿಂತಲೂ ಸ್ವಲ್ಪ ತಿಳಿದವರು ಬಹಳ ಸಂಕಟಗಳನ್ನು ಅನುಭವಿಸುತ್ತಾರೆ. ಸ್ವಲ್ಪ ತಿಳಿದವರು ವಿಚಾರಹೀನರಾಗಿ ತಮಗೆ ಎಲ್ಲಾ ತಿಳಿವುದೆಂದು ಭಾವಿಸಿಕೊಳ್ಳುತ್ತಾರೆ. ಈ ಅಹಂಕಾರದ ದೆಸೆಯಿಂದ ಅವರು ತಾವು ಪ್ರವರ್ತಿಸುವ ಯಾವ ಕೆಲಸದಲ್ಲಿಯೂ ತಿಳಿವಳಿಕೆಯುಳ್ಳವರ ಆಲೋಚನೆಯನ್ನು ಕೇಳುವುದಿಲ್ಲ; ಒಳ್ಳೆಯದು ಕೆಟ್ಟದೆಂಬ ಆಲೋಚನೆಯೊಂದೂ ಇಲ್ಲದೆ ತಮ್ಮ ಮನಸ್ಸಿಗೆ ಬಂದುದನ್ನೆಲ್ಲಾ ಮಾಡುವುದಕ್ಕೆ ಆರಂಭಿಸುತ್ತಾರೆ. ಹೀಗೆ ಮಾಡುತ್ತಾ ಹೂವಿನ ಹಾರವೆಂದು ಹಾವನ್ನು ಕೊರಳಿಗೆ ಸುತ್ತಿಕೊಂಡಂತೆ ಬಂದಾ

ನೊಂದುವೇಳೆ ಒಳ್ಳೆಯದೆಂದು ಭ್ರಮಿಸಿ ಕೆಟ್ಟ ಕೆಲಸವನ್ನು ಆರಂಭಿಸುತ್ತಾರೆ. ಆದುದರಿಂದ ಅವರ ಸುಖವೂ ಆಶೆಯೂ ನಷ್ಟವಾಗಿ ಸಾಯುವವರೆಗೂ ಅವರು ದುಃಖದಿಂದ ತಪ್ತರಾಗಿರಬೇಕಾಗುತ್ತದೆ. ತಿಳಿದವನು ಸ್ವತಃ ವಿಚಾರವನ್ನು ಮಾಡುತ್ತಾನೆ; ಮತ್ತೊಬ್ಬರ ಆಲೋಚನೆಯನ್ನೂ ಅಲಕ್ಷ್ಯ ಮಾಡುವದಿಲ್ಲ. ಆತನಿಗೆ ಅಹಂಕಾರವಿಲ್ಲದಕಾರಣ ಅವನು ಎಲ್ಲರಿಗೂ ಬೇಕಾದವನಾಗಿರುತ್ತಾನೆ. ಆದುದರಿಂದ ಅವನಿಗೆ ವಿಪತ್ತು ಬರುವ ಸಂದರ್ಭವು ವಿಶೇಷವಾಗಿ ಇರುವುದಿಲ್ಲ. ಆದುದರಿಂದ ನೀವು ಪಶುಗಳಂತೆ ಅಜ್ಞಾನಿಗಳಾಗಿ ಇರಬಾರದು; ಚೆನ್ನಾಗಿ ವಿದ್ಯಾವಂತರಾಗುವದಕ್ಕೆ ಪ್ರಯತ್ನ ಮಾಡಬೇಕು. ಇಲ್ಲವಾದರೆ ನಿಮ್ಮ ದುರವಸ್ಥೆಗೆ ಪಾರವಿರುವುದಿಲ್ಲ.

ಬಹಳ ಪುಸ್ತಕಗಳನ್ನು ಓದಿದರೆ ಜ್ಞಾನವುಂಟಾಗುವದೆಂದು ಕೆಲವರು ತಿಳಿಯುತ್ತಾರೆ. ಇದು ನಿಜವಾದರೆ ಈ ಉಪಾಯವು ಬಹಳ ಸುಲಭವಾಗಿದೆ; ಆಗ ಪುಸ್ತಕಗಳನ್ನು ತುಂಬಿರುವ ಪೆಟ್ಟಿಗೆಗಳು ಮನೆಗಳು ಚೀಲಗಳು ಇವೆಲ್ಲಾ ಜ್ಞಾನಿಗಳಾಗಿರಬೇಕಾಗುತ್ತದೆ. ಸುಮ್ಮನೆ ಓದಿದ ಮಾತ್ರದಿಂದ ಜ್ಞಾನವಾಗುವುದಿಲ್ಲ. ಏಕಾಗ್ರಚಿತ್ತದಿಂದ ಸ್ವಲ್ಪವನ್ನು ಅಭ್ಯಾಸ ಮಾಡಿದರೂ ಬಹಳ ತಿಳುವಳಿಕೆ ಉಂಟಾಗುವದು. ಆಹಾರದ ವಿಷಯದಲ್ಲಿ ನಿಯಮವಿಲ್ಲದೆ ಇದ್ದರೆ ದರಿಂದ ಹೇಗೆ ಪುಷ್ಟಿಯುಂಟಾಗುವುದಿಲ್ಲವೋ ಹಾಗೆಯೇ ಏಕಾಗ್ರಚಿತ್ತವಿಲ್ಲದಿದ್ದರೆ ಬರಿಯ ಓದಿನಿಂದ ಜ್ಞಾನವುಂಟಾಗುವುದಿಲ್ಲ. ಚಿತ್ತವು ಏಕಾಗ್ರವಾಗುವದಕ್ಕೆ ಕೆಲವು ಉಪಾಯಗಳು ಇವೆ. ಅವು ಯಾವುವೆಂದರೆ:—

ಗುರುಗಳು ನೇಮಿಸಿಕೊಟ್ಟ ಪಾಠದಲ್ಲಿ ತಿಳಿಯದೆ ಇರುವ ಶಬ್ದಗಳ ಅರ್ಥವನ್ನು ಮಾತ್ರ ಕೇಳಿ ತಿಳಿದುಕೊಂಡು ಅವನ್ನು ನೀವೇ ಘಟ್ಟಿಮಾಡಬೇಕು. ಮತ್ತೊಬ್ಬರ ಕಯ್ಯಿಂದ ನೀವು ಬಾಯಿಪಾಠ ಮಾಡಿಸಿಕೊಳ್ಳಬಾರದು. ಆ ಪಾಠದಲ್ಲಿಯ ತಾತ್ಪರ್ಯವನ್ನು ತಿಳಿದುಕೊಳ್ಳುವದಕ್ಕೆ ನೀವೇ ಪದೇಪದೇ ವಿಚಾರಮಾಡಬೇಕು. ಈ ಪ್ರಕಾರ ಕೆಲವು ದಿವಸ ಪರಿಶ್ರಮ ಮಾಡಿದರೆ ಎಲ್ಲಾ ಅರ್ಥವೂ ತನ್ನಷ್ಟಕ್ಕೆ ತಾನೆ ತಿಳಿವುದಲ್ಲದೆ ಬಾಯಿಪಾಠ ಮಾಡುವುದೂ ಸುಲಭವಾಗುತ್ತದೆ. ಲೆಕ್ಕ ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನು ಕಂಡು ಹಿಡಿವುದು ಶ್ರಮ

ವಾದರೂ ನೀವೇ ಕಂಡುಹಿಡಿಯಲು ಪ್ರಯತ್ನ ಮಾಡಬೇಕು. ಮ ತ್ತೊಬ್ಬರನ್ನು ಕೇಳುವ ವಿಷಯದಲ್ಲಿ ಬಹಳ ಸಂಕೋಚಪ್ರಕೃತಿವರಾಗಿ ರಬೇಕು. ಆವ ಪಾಠವೇ ಆಗಲೀ ಕಠಿನವಾಗಿದ್ದರೆ ಅದನ್ನು ನಾವೇ ಓದಿಕೊಂಡರೆ ಬರುವದಿಲ್ಲವೆಂಬ ಆಲೋಚನೆಯನ್ನು ಸ್ವಪ್ನದಲ್ಲಿ ಕೂಡಾ ಮಾಡಬಾರದು. ಇತರರಿಂದ ಸಾಧ್ಯವಾದುದು ನಿಮ್ಮಿಂದಲೂ ಏಕೆ ಸಾಧ್ಯವಾಗಬಾರದು ? ಪ್ರಯತ್ನಮಾಡಿದರೆ ಅವಶ್ಯಕವಾಗಿ ಸಾಧ್ಯವಾ ಗುವ್ರದೆಂದು ನೀವು ನಿಶ್ಚಯಿಸಿಕೊಂಡಿರಬೇಕು. ಅನೇಕರು ಪಾಲು ಮಾರಿಕೆಯಿಂದ ಸ್ವಲ್ಪ ಶ್ರಮಸಾಧ್ಯವಾದ ಕೆಲಸವನ್ನು ಕೂಡ ತಾವು ಮಾಡದೆ ಇತರರು ಬಹು ಶ್ರಮಸಾಧ್ಯವಾದ ಕೆಲಸಗಳನ್ನು ಮಾಡಿದು ದನ್ನು ನೋಡಿ ಅಸೂಯೆ ಪಡುತ್ತಾರೆ. ಇಲ್ಲದಿದ್ದರೆ ಅವನು ಈಶ್ವರ ನಲ್ಲಿ ವರವನ್ನು ಪಡೆದಿದ್ದಾನೆ ; ಇಲ್ಲವೆ, ಅವನು ಅವತಾರ ಪುರುಷ ; ಆದುದರಿಂದ ಈರೀತಿಯಾದ ಕೆಲಸವು ಅವನಿಂದ ಆಗುತ್ತದೆ ; ನಮ್ಮ ಹಣೆಯಲ್ಲಿ ಅದು ಬರೆದಿಲ್ಲವೆಂದು ತಲೆಯ ಮೇಲೆ ಕೈಯಿಟ್ಟುಕೊಂಡು ಅಳುತ್ತಾ ಕುಳಿತುಕೊಳ್ಳುತ್ತಾರೆ. ಹಣೆಯ ಬರಹವೆಂಬುದು ದೇವ ರಲ್ಲ. ನಾವು ಹೇಗೆ ಮಾಡಬೇಕೆಂದರೆ ನಮ್ಮ ಅವಸ್ಥೆಯು ಹಾಗೆ ಆಗು ತ್ತದೆ. ನಾವು ಮನುಷ್ಯನ ಚಿತ್ರವನ್ನು ಬರೆಯಲುದ್ಯೋಗಿಸಿ, ಕೋತಿ ಯನ್ನು ಬರೆದರೆ ಆ ವ್ಯತ್ಯಾಸದ ದೋಷಕ್ಕೆ ನಾವು ಭಾಗಿಗಳೋ ? ಆ ಚಿತ್ರವೇ ಭಾಗಿಯೋ ? ಈ ಲೋಕದಲ್ಲಿ ಸಾವಿರಾರು ವರ್ಷಗಳಿಂ ದಲೂ ಆರ ಯಶಸ್ಸು ಮೆರೆಯುತ್ತದೋ, ಆರು ದೊಡ್ಡ ದೊಡ್ಡ ಜ್ಞಾನಿ ಗಳಾಗಿದ್ದರೋ ಅವರಿಗೆ ಪ್ರಾಪ್ತವಾದ ಅಮೂಲ್ಯವಾದ ಜ್ಞಾನವು ಅವರ ಚಿತ್ತದ ಏಕಾಗ್ರತೆಯಿಂದಲ್ಲದೆ ಇನ್ನೇತರಿಂದಲೂ ಬಂದುವಲ್ಲ. *

* * * *

ಆರಮೇಲೆ ನಮಗೆ ಪ್ರೀತಿಯಿರುತ್ತದೆಯೋ ಅವರಿಗೆ ನಮ್ಮ ಮೇಲೆ ಪ್ರೀತಿಯಿರುತ್ತದೆ. ಅವರ ಮೇಲೆಯೇ ಆವಾಗಲೂ ನಮ್ಮ ಮನಸ್ಸಿರುವುದು ಪ್ರಪಂಚದಲ್ಲಿ ವಾಡಿಕೆಯಾಗಿದೆ. ಆದುದರಿಂದ ನಿಮಗೆ ಜ್ಞಾನವು ಬೇಕಾಗಿದ್ದರೆ ವಿದ್ಯೆಯ ಮೇಲೆ ಎಲ್ಲದಕ್ಕಿಂತಲೂ ಹೆಚ್ಚಾಗಿ ನೀವು ಪ್ರೀತಿಯನ್ನಿಡಬೇಕು. ಹಾಗೆ ಮಾಡಿದಲ್ಲಿ ನಿಮ್ಮ ಮನಸ್ಸು ಆವಾಗಲೂ ಅದರಲ್ಲಿ ನಿಂತು ಅದು ನಿಮಗೆ ದೊರೆವುದು ; ಇಲ್ಲದೆ

ಇದ್ದರೆ ದೊರೆಯದು. ನಿಮ್ಮ ಮನಸ್ಸು ವಿದ್ಯೆಯನ್ನು ಬಿಟ್ಟು, ಬೇರೆ ಕಡೆಗೆ ಹೋದೀತು. ಅಂಥ ಸಂದರ್ಭವು ಎಂದಿಗೂ ಬಾರದಂತೆ ನೀವು ಬಹಳ ಜಾಗರೂಕರಾಗಿರಬೇಕು. ಊಟ ಉಪಚಾರಗಳಲ್ಲಿ ಕ್ಲಿಪ್ತ ವಾಗಿರಬೇಕು. ಹರಟೆಯಲ್ಲಿಯೂ ಆಟದಲ್ಲಿಯೂ ಮನಸ್ಸಿಡಬಾರದು. ನಿಮ್ಮ ಉಡಿಗೆ ಯೋಗ್ಯತಾನುಸಾರ ಸಾಧಾರಣವಾಗಿರಬೇಕು ಊಟ ಉಪಚಾರದಲ್ಲಿ ಕ್ಲಿಪ್ತವಿಲ್ಲದೆ ಉಡಿಗೆತೊಡಿಗೆಗಳಲ್ಲಿ ಸೊಗಸಿಗೆ ಬಿದ್ದಕೂ ಡಲೇ ವಿದ್ಯೆಯು ಆ ಸ್ಥಲವನ್ನೇ ಬಿಟ್ಟು ಹೋಗುತ್ತದೆ. ಅನಂತರ ನೀವು ಆವ ಕೆಲಸಕ್ಕೂ ಬರುವುದಿಲ್ಲ. ಇತರರು ಒಳ್ಳೆಯ ಬಟ್ಟೆಗ ಳನ್ನುಡುತ್ತಾರೆ; ದೊಡ್ಡ ದೊಡ್ಡ ಒಡವೆಗಳನ್ನು ಇಟ್ಟುಕೊಳ್ಳುತ್ತಾರೆ; ಮನಸ್ಸಿಗೆ ಬಂದಂತೆ ನಡೆಯುತ್ತಾರೆ; ನಾವೂ ಹಾಗೆ ಏತಕ್ಕೆ ಮಾಡ ಬಾರದೆಂದು ನೀವು ಆಲೋಚಿಸಿ ಆ ಪ್ರಕಾರ ಮಾಡಲಾರಂಭಿಸಬಾ ರದು. ವಿದ್ಯಾಭ್ಯಾಸಮಾಡತಕ್ಕ ವಯಸ್ಸಿನಲ್ಲಿ ವಿದ್ಯಾವ್ಯಾಸಂಗವನ್ನು ಬಿಟ್ಟು, ಒಳ್ಳೆಯ ಬಟ್ಟೆಗಳನ್ನುಡುವುದು, ಒಡವೆಗಳನ್ನು ತೊಡುವುದು, ಇವೇ ಮೊದಲಾದ ನಿರರ್ಥಕಕಾರ್ಯಗಳಲ್ಲಿ ಮನಸ್ಸಿಟ್ಟವರ ಪರಿಣಾ ಮವು ಆವಾಗಲೂ ಒಳ್ಳೆಯದಾಗುವುದಿಲ್ಲ. ಅವರ ಬಟ್ಟೆಗಳೂ ಒಡವೆ ಗಳೂ ಮತ್ತು ಅವರ ಸೌಂದರ್ಯವೂ ಕೂಡ ಶಾಶ್ವತವಾಗಿ ನಿಲ್ಲುವು ದಿಲ್ಲ. ನೀವು ಒಡವೆಗಳನ್ನಿಟ್ಟುಕೊಂಡು ಊರಲ್ಲೆಲ್ಲಾ ಮೆರೆದರೂ ನಿಮ್ಮಲ್ಲಿ ಗುಣವಿಲ್ಲದಿದ್ದರೆ, ಆರೂ ನಿಮ್ಮನ್ನು ತಲೆಯೆತ್ತಿ ನೋಡುವು ದಿಲ್ಲ. ನಿಮ್ಮಲ್ಲಿ ಗುಣವಿದ್ದರೆ, ನೀವು ಮೂಲೆಯಲ್ಲಿ ಕುಳಿತಿದ್ದರೂ ನಿಮ್ಮಲ್ಲಿ ಎಲ್ಲರಿಗೂ ಪ್ರೀತಿ ಹುಟ್ಟುತ್ತದೆ. ಮುತ್ತುಗದ ಹೂ ನೋಡು ವುದಕ್ಕೆ ಬಹಳ ಅಂದವಾಗಿರುತ್ತದೆ. ಅದನ್ನು ಸುವಾಸನೆಯುಳ್ಳ ಹೂ ವಿನ ತುರಾಯಿಯಲ್ಲಿ ಸೇರಿಸಿದುದನ್ನು ಆರಾದರೂ ಆವಾಗಲಾದರೂ ನೋಡಿದ್ದಾರೆಯೇ ; ಇಲ್ಲ; ಹಾಗಾದರೆ ಅದು ಕಣ್ಣಿಗೆ ಇಷ್ಟು ಅಂದ ವಾಗಿದ್ದರೂ ಅದಕ್ಕೆ ಏತಕ್ಕೆ ಪುರಸ್ಕಾರವಿಲ್ಲ? ಅದರಲ್ಲಿ ಸುಗಂಧವಿಲ್ಲವೆಂ ದಲ್ಲವೇ; ನಂಜದ ಹೂ (ಅಂದರೆ ಬಕುಳದ ಹೂ) ಬಹಳ ಸಣ್ಣದಾಗಿ ಯೂ ನೋಡುವುದಕ್ಕೆ ಅಂದವಿಲ್ಲದುದಾಗಿಯೂ ಇರುತ್ತದೆ. ಪರಂತು ಅದರಲ್ಲಿ ಸುವಾಸನೆಯಿರುವುದರಿಂದ ಅದು ಒಣಗಿದ್ದಾಗ್ಗೂ ಅದರಲ್ಲಿ ಜನ ರಿಗೆ ಪ್ರೀತಿಯಿರುತ್ತದೆ. ಒಡವೆಗಳನ್ನಿಟ್ಟುಕೊಂಡು ಒಳ್ಳೊಳ್ಳೆಯ

ಬಟ್ಟೆಗಳನ್ನಿಟ್ಟುಕೊಂಡು ಮೆರೆದರೆ ನಿಮಗೆ ಬಹಳ ಕಾಂತಿಯುಂಟಾ ಗುವುದೆಂದು ನೀವು ತಿಳಿದಿದ್ದರೆ ಅದು ಭ್ರಾಂತಿಯೇ ಸರಿ. ನಿಮ್ಮ ಸ್ವ ರೂಪವೂ ಗುಣಗಳೂ ಚೆನ್ನಾಗಿದ್ದರೆ ಒಡವೆಗಳಿಂದ ನಿಮಗೆ ಕಾಂತಿ ಬರುತ್ತದೆ; ಹಾಗಿಲ್ಲದಿದ್ದರೆ ನಿಮ್ಮ ಸಹವಾಸದಿಂದ ಆ ಒಡವೆಗಳಿಗೆ ಇ ದ್ದ ಕಾಂತಿಯೂ ಹೋಗುತ್ತದೆ. ಈ ಪ್ರಕಾರ ವೇಷಧಾರಿಗಳಂತೆ ನೀವು ಮಾಡಲುದ್ಯೋಗಿಸಿದರೆ ಲೋಕದಲ್ಲಿ ಅಪಹಾಸ್ಯಕ್ಕೆ ಕಾರಣವಲ್ಲದೆ ಇನ್ನೇನೂ ಫಲವಾಗುವುದಿಲ್ಲ. ಕೋತಿಗೆ ಒಳ್ಳೆಯ ಬಟ್ಟೆಗಳನ್ನು ಹಾಕಿ ಅಲಂಕಾರ ಮಾಡುವುದರಿಂದ ಅದರ ಸ್ವಭಾವಸಿದ್ಧವಾದ ಕುರೂ ಪವು ಹೋದುದನ್ನು ಆರಾದರೂ ನೋಡಿಯಾಗಲಿ ಕೇಳಿಯಾಗಲಿ ಇದ್ದಾರೋ?

ಮನುಷ್ಯನಿಗೆ ಒಡವೆಗಳನ್ನಿಟ್ಟುಕೊಂಡುದರಿಂದ ಸ್ವಲ್ಪಮಟ್ಟಿಗೆ ಕಾಂತಿ ಬರುವುದು ನಿಜ; ಆದರೆ ಅದು ಯೌವನವಿರುವಪರ್ಯಂತವೇ ಸರಿ. ಮುಪ್ಪಿನಲ್ಲಿ ಶರೀರದ ಸೌಂದರ್ಯವು ಹೋದನಂತರ ಚಿನ್ನದ ಮುತ್ತಿನ ಒಡವೆಗಳಿಂದ ಆವ ಕಾಂತಿಯೂ ಬರುವುದಿಲ್ಲ. ಮತ್ತು ಯೌವನವೂ, ಒಡವೆಗಳನ್ನು ಮಾಡಿಸುವುದಕ್ಕೆ ಅನುಕೂಲವಾದ ಹಣವೂ, ಕೂಡ ಸ್ಥಿರವಾಗಿ ನಿಲ್ಲುವುದಿಲ್ಲ. ಆದುದರಿಂದ ನೀವು ಬಹ ಳಕಾಲ ನಿಲ್ಲುವ ಅಕ್ಷಯವಾದ ವಿದ್ಯಾಧನವನ್ನು ಸಂಪಾದಿಸಿ ಸದ್ಗು ಣವೆಂಬ ಒಡವೆಗಳನ್ನು ಇಟ್ಟುಕೊಳ್ಳಿರಿ. ಇದರಿಂದ ಉಂಟಾಗುವ ಕಾಂತಿಯು ನೀವು ಕುರೂಪಿಗಳಾಗಿಯೂ ಬಡವರಾಗಿಯೂ ಮುದುಕಿ ಯರಾಗಿಯೂ ಇದ್ದಾಗ್ಯೂ ಕಡಿಮೆಯಾಗುವುದಿಲ್ಲ.

ವಿದ್ಯಾಭ್ಯಾಸಕ್ಕೆ ವಿಘ್ನವನ್ನುಂಟುಮಾಡುವ ವಿಷಯಗಳು ಅನೇ ಕವಾಗಿವೆ. ಅವುಗಳಲ್ಲಿ ಪಾಲುಮಾರಿಕೆಯು ಮುಖ್ಯವಾದುದು. ಆದು ದರಿಂದ ಅದನ್ನು ಶುದ್ಧಾಂಗವಾಗಿ ಬಿಟ್ಟುಬಿಡಬೇಕು. ಪಾಲುಮಾರಿ ಕೆಯನ್ನು ಹೋಗಲಾಡಿಸುವುದಕ್ಕೆ ಒಂದು ಉಪಾಯವುಂಟು. ನಾವು ಮಾಡತಕ್ಕ ಎಲ್ಲಾ ಕೆಲಸಗಳಿಗೂ ಒಂದೊಂದು ಹೊತ್ತನ್ನು ಗೊತ್ತು ಮಾಡಿಕೊಂಡು ಆಯಾ ಹೊತ್ತಿನಲ್ಲಿ ಆಯಾ ಕೆಲಸವನ್ನು ತಪ್ಪದೆ ಮಾ ಡಬೇಕು. ಮೊದಲು ಮಾಡತಕ್ಕ ಕೆಲಸವನ್ನು ಆಮೇಲೆ ಮಾಡಬಾ ರದು. ಗೊತ್ತು ಮಾಡಿರುವ ಹೊತ್ತನ್ನು ವ್ಯರ್ಥವಾಗಿ ಹೋಗುವಂತೆ

ಯೂ ಮಾಡಬಾರದು. ಪ್ರತಿನಿತ್ಯವೂ ರಾತ್ರಿ 9 ಘಂಟೆಗೆ ಮಲಗಿಕೊಂಡು, ಬೆಳಗ್ಗೆ 4 ಘಂಟೆಗೆ ಏಳಬೇಕು. 7 ತಾಸಿಗಿಂತ ಹೆಚ್ಚಾಗಿ ನಿದ್ರೆ ಮಾಡಬಾರದು. ಇದಕ್ಕಿಂತ ಕಡಮೆ ಹೊತ್ತು ಮಲಗಿದರೆ ಶರೀರಕ್ಕೆ ಆರೋಗ್ಯವಿರುವುದಿಲ್ಲ. 7 ತಾಸು ನಿದ್ರೆ ಮಾಡುವ ಕ್ರಮವನ್ನಿಟ್ಟುಕೊಂಡರೆ, ಶರೀರಸ್ಥಿತಿಯು ಚೆನ್ನಾಗಿರುವುದಲ್ಲದೆ ರೋಗಗಳಿಗೆ ಆಸ್ಪದವಾಗುವುದಿಲ್ಲ. ಕೆಲವರು ರಾತ್ರಿ ಬಹಳಹೊತ್ತು ಜಾಗರಣಮಾಡುತ್ತಾ ಕೆಲಸಗಳನ್ನು ಮಾಡುತ್ತಾರೆ; ಅದು ಯುಕ್ತವಲ್ಲ. ಶರೀರಸ್ಥಿತಿಯನ್ನು ಚೆನ್ನಾಗಿ ಇಟ್ಟುಕೊಂಡು ಅನಂತರ ಅನೇಕವಿಧವಾದ ಸ್ಥೀರವನ್ನಾಗಲಿ ಜ್ಞಾನವನ್ನಾಗಲಿ ಸಂಪಾದಿಸಿಕೊಳ್ಳುವುದು ಒಳ್ಳೆಯದು. ಶರೀರಸ್ಥಿತಿ ಚೆನ್ನಾಗಿಲ್ಲದ ಮೇಲೆ ಇವುಗಳಿಂದೇನೂ ಉಪಯೋಗವಿಲ್ಲ. ಗೊತ್ತು ಮಾಡಿದ ಹೊತ್ತಿನಲ್ಲಿ ಏಳುವುದಕ್ಕೆ ಎಚ್ಚರಿಕೆಯಾಗುವುದು ನಮ್ಮ ಸ್ವಾಧೀನದಲ್ಲಿ ಇರುವುದಿಲ್ಲ. ಆದರೆ ಮೊದಲು ಕೆಲವು ದಿವಸ ಗೊತ್ತು ಮಾಡಿದ ಹೊತ್ತಿನಲ್ಲಿ ಮಲಗಿ ಏಳುವುದಕ್ಕೆ ಪ್ರಯತ್ನ ಮಾಡಿದರೆ ಅನಂತರ ಅದೇ ಅಭ್ಯಾಸಬಿದ್ದು ಹೋಗುತ್ತದೆ. ನನಗೆ ಇದರ ಅನುಭವವು ಇದೆ. ಪ್ರಪಂಚದಲ್ಲಿ ಅನೇಕಸವೂ ಮನುಷ್ಯನಿಗೆ ಅಸಾಧ್ಯವಲ್ಲ. ಮನುಷ್ಯನು ಕೆಲವು ದಿವಸ ಪ್ರಯತ್ನಮಾಡಿ ಸಾಧಿಸುತ್ತಾ ಮಾತ್ರ ಬಂದರೆ, ಎಷ್ಟುಶ್ರಮದ ಕೆಲಸವಾದರೂ ಮಾಡುತ್ತಾ ಮಾಡುತ್ತಾ ಅಭ್ಯಾಸವಾಗಿ ಅದರ ಕಷ್ಟವೇ ತೋರುವುದಿಲ್ಲ. ಈ ಅಂಶವು ನಿಮಗೆ ಎಲ್ಲಾ ವಿಷಯದಲ್ಲಿಯೂ ಉಪಯೋಗಕರವಾದುದರಿಂದ ಇದನ್ನು ನೀವು ಚೆನ್ನಾಗಿ ನೆನಪಿನಲ್ಲಿ ಇಟ್ಟುಕೊಂಡಿರಬೇಕು.

ಹಾಸಿಗೆಯ ಮೇಲೆ ನಿಮಗೆ ಎಚ್ಚರವಾದ ಕೂಡಲೇ ಥಟ್ಟನೆ ಏಳಬೇಕು. ಎಚ್ಚರಿಕೆಯಾದಾಗ ಏಳದೆ, ಈಗ ಏಳೋಣ ಇನ್ನೊ ಅರ್ಧಗಳಿಗೆಯನ್ನು ಬಿಟ್ಟು ಏಳೋಣವೆಂದು ಆಲೋಚನೆ ಮಾಡುತ್ತಿರುವಷ್ಟರಲ್ಲಿಯೇ ನಿಮಗೆ ತಿಳಿಯದಂತೆ ತಿರುಗಿ ನಿದ್ರೆ ಹತ್ತಿಬಿಡುತ್ತದೆ. ಸೂರ್ಯೋದಯದವರೆಗೂ ಮಲಗುವದರಿಂದ ಶರೀರವು ಭಾರವಾಗುತ್ತದೆ. ನೀವೆಲ್ಲರೂ ಗಡಿಯಾರವನ್ನು ನೋಡಿರಬಹುದು. ಅದರಲ್ಲಿ ಘಂಟೆಯನ್ನು ತೋರಿಸುವ ಸಣ್ಣ ಮುಳ್ಳು ಒಂದು, ನಿಮಿಷವನ್ನು ತೋರಿಸುವ ದೊಡ್ಡ ಮುಳ್ಳು ಒಂದು, ಹೀಗೆ ಎರಡು ಮುಳ್ಳುಗಳಿವೆ. ಅದರ ಒಳಭಾ

ಗದಲ್ಲಿ ಕೆಲವು ಚಕ್ರಗಳಿವೆ. ಒಂದಕ್ಕೆ ಒಂದು ಉಕ್ಕಿನಪಟ್ಟಿ ಸುತ್ತಿರುತ್ತದೆ; ಈ ಪಟ್ಟಿಗೆ ಕಮಾನು ಅನ್ನುತ್ತಾರೆ. ಗಡಿಯಾರವನ್ನು ಹೊತ್ತಿಗೆ ಸರಿಯಾಗಿ ಬೀಗದಕೈಯಿಂದ ತಿರುಗಿಸುವುದರಿಂದ ಈ ಕಮಾನಿಗೆ ತಕ್ಕಮಟ್ಟಿಗೆ ಬಲ ಬಂದು ಅದರಿಂದ ಗಡಿಯಾರವು ಚೆನ್ನಾಗಿ ನಡೆಯುತ್ತದೆ. ಹೊತ್ತಿಗೆ ಸರಿಯಾಗಿ ತಿರುಗಿಸದಿದ್ದರೆ ಅದು ನಿಂತುಹೋಗುತ್ತದೆ. ಮತ್ತು ನಿಬಂಧನೆಗಿಂತ ಹೆಚ್ಚಾಗಿ ತಿರುಗಿಸಿದರೆ ಕಮಾನು ಕಿತ್ತು ಹೋಗಿ ಗಡಿಯಾರವು ಕೆಲಸಕ್ಕೆ ಬಾರದಂತಾಗುತ್ತದೆ.

ನಮ್ಮ ಶರೀರವೂ ಗಡಿಯಾರದಂತೆಯೇ ಇದೆ. ಬುದ್ಧಿ, ಕೋಪ, ಲೋಭ, ವಿವೇಕ, ದಯೆ, ದಾಕ್ಷಿಣ್ಯ ಮುಂತಾದ ಮನೋವೃತ್ತಿಗಳು ಗಡಿಯಾರದೊಳಗಿನ ಚಕ್ರಗಳಂತಿವೆ. ಅವುಗಳನ್ನೆಲ್ಲ ಮನಸ್ಸೆಂಬ ಕಮಾನು ತಿರಿಗಿಸುತ್ತದೆ. ಈ ಕಮಾನಿಗೆ ಕಾಲಕಾಲಕ್ಕೆ ನಿಬಂಧನೆಯಾಗಿ ಗತಿಯನ್ನು ಕೊಟ್ಟರೆ ಈ ವೃತ್ತಿಗಳೆಂಬ ಚಕ್ರಗಳು ಯಥಾಕ್ರಮವಾಗಿ ನಡೆದು ಶರೀರವೆಂಬ ಗಡಿಯಾರವನ್ನು ನಡೆಯಿಸುತ್ತವೆ. ಸಾಧಾರಣ ಗಡಿಯಾರದಲ್ಲಿ ಯಾವುದಾದರೂ ಒಂದು ಚಕ್ರ ಮುರಿದು ಹೋದರೆ ಅದನ್ನು ಸೆಟ್ಟಿಗೆ ಮಾಡಿ ಆ ಸ್ಥಳದಲ್ಲಿ ತಿರುಗಿ ಸೇರಿಸಬಹುದು. ಇದಂತು ಶರೀರವೆಂಬ ಗಡಿಯಾರದಲ್ಲಿ ಮುರಿದ ಚಕ್ರವನ್ನು ಸಟ್ಟಗೆಮಾಡಿ ತಿರುಗಿ ಯಥಾಸ್ಥಾನದಲ್ಲಿ ಸೇರಿಸುವ ಕೆಲಸದ ಉಪಾಯ ಇದುವರೆಗೂ ದೊರೆತಿಲ್ಲ. ಆದುದರಿಂದ ಶರೀರಸ್ಥಿತಿಯ ವಿಷಯದಲ್ಲಿ ಬಹಳ ಜಾಗರೂಕರಾಗಿ ಅದರಲ್ಲಿ ಎಲ್ಲಾ ವೃತ್ತಿಗಳೂ ಸರಿಯಾಗಿರುವಂತೆ ನಿಯಮಿಸಿಕೊಂಡಿರಬೇಕು.

ಆಯಾಯ ಕೆಲಸಗಳನ್ನು ಆಯಾಯ ಹೊತ್ತಿನಲ್ಲಿ ಮಾಡಬೇಕೆಂದು ನಿಬಂಧನೆಯನ್ನು ಇಟ್ಟು ಇರುತ್ತೀರೋ ಆಯಾ ಕಾಲಗಳಲ್ಲಿಯೇ ಆಯಾ ಕೆಲಸಗಳನ್ನು ಮಾಡುತ್ತಾ ಬರಬೇಕು. ಪ್ರತಿದಿನವೂ ಸ್ವಲ್ಪ ಸ್ವಲ್ಪವಾಗಿ ಮಾಡಿದರೂ ಬಹಳ ಕೆಲಸ ನಡೆಯುತ್ತದೆ; ಅವಸರವಿಲ್ಲದೆ ನಿಧಾನವಾಗಿ ಮಾಡುವದರಿಂದ ಕೆಲಸವೂ ಚೆನ್ನಾಗಿ ಆಗುತ್ತದೆ. "ಈ ಕೆಲಸವನ್ನು ಆಮೇಲೆ ನೋಡೋಣ" ಎಂದು ಹಿಂದಕ್ಕೆ ಹಾಕುತ್ತಾ ಹಾಕುತ್ತಾ ಬಂದರೆ ಕೊನೆಗೆ ಎಲ್ಲಾ ಕೆಲಸವೂ ಒಟ್ಟಿಗೆ ಸೇರಿಕೊಳ್ಳುತ್ತದೆ. ಆ ಸಮಯದಲ್ಲಿ ಅದು ಬಹಳ ಅವಶ್ಯಕವಾದ ಕೆಲಸವಾದಾಗ್ಯೂ ಅದನ್ನು ಮಾಡುವುದಕ್ಕೆ ಅವಕಾಶ ದೊರೆವುದಿಲ್ಲ; ಅಥವಾ ಅವಸರ

ದಿಂದ ಮಾಡಿದಾಗ್ಯೂ ಚೆನ್ನಾಗಿ ಆಗುವುದಿಲ್ಲ. ಮಾಡದಿದ್ದರೆ ನಿರ್ವಾಹವಿಲ್ಲದ ಪಕ್ಷದಲ್ಲಿ ಶರೀರವು ತಡೆಯಲಾರದಷ್ಟು ಹೆಚ್ಚು ಶ್ರಮವನ್ನಾದರೂ ಪಟ್ಟು ಕೆಲಸವನ್ನು ಮಾಡಬೇಕಾಗುತ್ತದೆ. ಇದರಿಂದ ಶರೀರಸ್ಥಿತಿಯು ಕೆಟ್ಟು ಅನೇಕ ಸಂಗತಿಗಳಲ್ಲಿ ದೊಡ್ಡ ಅನರ್ಥಗಳು ಉಂಟಾಗುತ್ತವೆ.

ನಾವು ನಮ್ಮ ಗುರುಗಳಲ್ಲಿ ಚೆನ್ನಾಗಿ ಭಕ್ತಿಯನ್ನಿಟ್ಟದ್ದರೆ ಅವರು ನಮ್ಮ ಮೇಲೆ ಪ್ರೇಮದಿಂದ ನಾವು ತಿಳಿಯಬೇಕಾದ ವಿಷಯಗಳನ್ನು ತಿಳಿಸಿಕೊಡುತ್ತಾರೆ. ಆದುದರಿಂದ ಆ ವಿಷಯಗಳು ನಮಗೆ ಬೇಗ ತಿಳಿಯುತ್ತವೆ. ನಾವು ಅವರಲ್ಲಿ ಉದ್ಧತರಾಗಿ ನಡೆದುಕೊಂಡರೆ ಅವರು ನಮಗೆ ಬೋಧಿಸುವ ಕೆಲಸವನ್ನು ಅಸಡ್ಡೆಯಿಂದ ಮಾಡುತ್ತಾರೆ. ನೀವು ವಿದ್ಯೆಯನ್ನು ಕಲಿತು ಎಷ್ಟು ಬುದ್ಧಿವಂತರಾದರೂ ಗುರುಗಳಿಗಿಂತ ನಿಮಗೆ ಹೆಚ್ಚು ತಿಳಿದಿದೆಯೆಂದು ಎಣಿಸಬಾರದು ; ಇತರರಿಗೂ ಹೀಗೆ ತಿಳಿಯಗೊಡಬಾರದು. ಆವುದಾದರೂ ಒಂದು ವಿಷಯವು ನಿಮಗೆ ಚೆನ್ನಾಗಿ ತಿಳಿದಿದ್ದು, ಅದು ಇತರರಿಗಾಗಲಿ ನಿಮ್ಮ ಸಹಾಧ್ಯಾಯಿಗಳಿಗಾಗಲಿ ತಿಳಿಯದೆ ಇದ್ದಲ್ಲಿ, ಬಹಿರಂಗವಾಗಿಯಾಗಲಿ ಅಂತರಂಗವಾಗಿಯಾಗಲಿ ಅದನ್ನು ಅನ್ಯರ ಸಂಗಡ ಹೇಳಿಕೊಂಡು ಅವರಿಗೆ ಅವಮಾನವನ್ನು ಮಾಡಬಾರದು. ಪ್ರಪಂಚದಲ್ಲಿ ಎಲ್ಲವನ್ನೂ ತಿಳಿದವರು ಆರೂ ಇಲ್ಲ. ಬೃಹಸ್ಪತಿಯಂಥ ವಿದ್ವಾಂಸರಿಗೂ ಕೂಡ ತಿಳಿಯದೆ ಇರುವ ವಿಷಯಗಳು ಅನೇಕವಾಗಿರುತ್ತವೆ. ಆವುದಾದರೂ ಒಂದು ವಿಷಯವು ಒಬ್ಬದನಾಗಾಯುವವನಿಗೆ ತಿಳಿದಿದ್ದ ಮಾತ್ರಕ್ಕೇ ಅವನು ವಿದ್ವಾಂಸನಿಗಿಂತ ಬುದ್ಧಿವಂತನೆಂದು ಸಿದ್ಧವಾಗುವುದಿಲ್ಲ. ನಮ್ಮ ವಿದ್ಯೆಗಳ ದೆಸೆಯಿಂದ ನಾವು ಗರ್ವಿತರಾಗಬಾರದು. ಪ್ರಪಂಚದಲ್ಲಿ ಒಬ್ಬನಿಗಿಂತ ಇನ್ನೊಬ್ಬನು ದೊಡ್ಡವನು ; ಹೀಗೆ ತಾರತಮ್ಯ ಭೇದವಿರುವುದರಿಂದ ನಾನು ದೊಡ್ಡವನೆಂದು ಆರೂ ಅಭಿಮಾನವನ್ನು ಹಚ್ಚಿಕೊಳ್ಳಬಾರದು.

ಪ್ರಪಂಚದಲ್ಲಿ ಧನವನ್ನು ಸಾಧಾರಣವಾಗಿ ಸಂಪಾದನೆ ಮಾಡಬಹುದು, ಪರಂತು ಅದರ ವಿನಿಯೋಗವನ್ನು ಚೆನ್ನಾಗಿಮಾಡಿ ಕಾಪಾಡಿಕೊಳ್ಳುವದು ಶ್ರಮವಾಗುತ್ತದೆ. ಸಂಪಾದಿಸಿದ ಹಣದ ವಿನಿಯೋಗವನ್ನು ಸರಿಯಾಗಿ ಮಾಡದಿದ್ದರೆ ಅದನ್ನು ಸಂಪಾದಿಸಿದವನಿಗೆ ಸುಖವಾಗು

ವುದಂತೂ ಇಲ್ಲವೇ ಇಲ್ಲ. ಅದನ್ನು ದುರ್ವ್ಯಯಮಾಡಿದರೆ ಸಂಪಾದಿಸಿದವನ ಕಷ್ಟವೂ ವ್ಯರ್ಥವಾಗಿ ಅವನು ಲೋಕದಲ್ಲಿ ನಿಂದೆಗೂ ಒಳಗಾಗುತ್ತಾನೆ. ದ್ರವ್ಯಸಂಪಾದನೆಯೇ ಅವನ ಸಂಕಟಕ್ಕೆ ಕಾರಣವಾಗುತ್ತದೆ. ಧನಕ್ಕೆ ಕಳ್ಳರು ಮೋಸಗಾರರು ಮುಂತಾದವರ ಭಯವಿರುತ್ತದೆ. ಧನದಿಂದ ಮನುಷ್ಯನು ಉನ್ಮತ್ತನಾದರೆ ಅವನಿಗೆ ಅದನ್ನು ನಾನಾ ವಿಧವಾದ ಕೆಟ್ಟಕೆಲಸಗಳಲ್ಲಿ ವೆಚ್ಚಮಾಡಬೇಕೆಂಬ ಬುದ್ಧಿಯು ಉಂಟಾಗುತ್ತದೆ. ಅವನು ಹಾಗೆ ವೆಚ್ಚಮಾಡುವುದಕ್ಕೆ ಆರಂಭಮಾಡಿದರೆ ಅದು ಉಳಿವುದಿಲ್ಲ. ಧನವು ವಿಚಾರಹೀನನ ಕೈಯಲ್ಲಿ ಸಿಕ್ಕದೆ ವಿಚಾರಪರನ ಕೈಯಲ್ಲಿ ಸಿಕ್ಕಿದರೆ ಅವನು ಅದನ್ನು ಚೆನ್ನಾಗಿ ಕಾಪಾಡುತ್ತಾನೆ; ಒಳ್ಳೆಯ ಕೆಲಸದಲ್ಲಿ ವೆಚ್ಚ ಮಾಡುತ್ತಾನೆ; ಸತ್ಪಾತ್ರದಲ್ಲಿ ದಾನವನ್ನು ಮಾಡುತ್ತಾನೆ; ವ್ಯಾಪಾರ ಉದ್ಯೋಗ ಮುಂತಾದುದನ್ನು ಮಾಡಿ ಅಭಿವೃದ್ಧಿಪಡಿಸುತ್ತಾನೆ; ಕಳ್ಳರು ತೆಗೆದುಕೊಂಡು ಹೋಗದಂತೆ ಚೆನ್ನಾಗಿ ನೋಡಿಕೊಳ್ಳುತ್ತಾನೆ; ಮತ್ತು ಕೈಲಾದಷ್ಟು ಪರೋಪಕಾರವನ್ನು ಮಾಡಿ ಜಗತ್ತಿನಲ್ಲಿ ಕೀರ್ತಿಯನ್ನೂ ಈಶ್ವರನ ಕೃಪೆಯನ್ನೂ ಪಡೆದುಕೊಳ್ಳುತ್ತಾನೆ.

ಈ ಪ್ರಕಾರ ಪಾತ್ರಭೇದದಿಂದ ಧನಕ್ಕೆ ಭಿನ್ನವಾದ ಪರಿಣಾಮಗಳು ಉಂಟಾಗುವ ಹಾಗೆಯೇ ಪಾತ್ರಭೇದದಿಂದ ವಿದ್ಯಾಧನಕ್ಕೂ ಪರಿಣಾಮ ಭೇದಗಳುಂಟಾಗುತ್ತವೆ. ಕೆಟ್ಟವನಲ್ಲಿ ವಿದ್ಯೆಯಿದ್ದರೆ ಅದು ಅವನ ಪಾಲುಮಾರಿಕೆ, ವ್ಯಸನ ಮುಂತಾದುದರಿಂದ ಅವನಲ್ಲಿ ನಿಲ್ಲುವುದೇ ಪ್ರಯಾಸ; ಒಂದುವೇಳೆ ನಿಂತರೂ ಅವನು ಆ ವಿದ್ಯೆಯನ್ನು ಮತ್ತೊಬ್ಬನಿಗೆ ಕೇಡುಂಟುಮಾಡುವುದರಲ್ಲಿ ವಿನಿಯೋಗಿಸುತ್ತಾನೆ. ವಿದ್ಯೆಯೆಂಬುದು ಒಂದು ವಿಧವಾದ ಶಕ್ತಿಯಾಗಿದೆ. ಮನುಷ್ಯನಲ್ಲಿ ವಿದ್ಯೆಯು ಎಷ್ಟು ಮಟ್ಟಿಗೆ ಇದೆಯೋ ಅಷ್ಟುಮಟ್ಟಿಗೆ ಅವನಲ್ಲಿ ಆ ವಿಧವಾದ ಶಕ್ತಿಯೂ ಇದೆಯೆಂದು ತಿಳಿಯಬೇಕು. ದುಷ್ಟರಲ್ಲಿರುವ ಶಕ್ತಿಯು ದೆಸೆಯಿಂದ ಮತ್ತೊಬ್ಬನಿಗೆ ತೊಂದರೆಯಾಗುವುದಲ್ಲದೆ ಅವರಿಗೂ ಅಹಿತವಾಗುತ್ತದೆ. ದುಷ್ಟರು ಮತ್ತೊಬ್ಬರಿಗೆ ತೊಂದರೆಯನ್ನು ಮಾಡುವಾಗ "ನಾವು ಅವರಿಗೆ ಕೇಡು ಮಾಡುತ್ತೇವೆ; ಅದರಿಂದ ನಮಗೆ ಒಳ್ಳೆಯದಾಗುತ್ತದೆ" ಎಂದು ತಿಳಿದುಕೊಂಡು ಇರುತ್ತಾರೆ. ಇದು ಭ್ರಾಂ

ತಿಯೇ ಸರಿ; ಏತಕ್ಕೆಂದರೆ ಆವನು ಪ್ರಪಂಚದಲ್ಲಿ ಇನ್ನೊಬ್ಬನನ್ನು ಕೆಡಿಸಲಿಕ್ಕೆ ಯತ್ನ ಪಡುತ್ತಾನೋ ಅವನು ಅಭಿವೃದ್ಧಿಗೆ ಬರುವದಿಲ್ಲ; ಹಾಗೆ ಅಭಿವೃದ್ಧಿಗೆ ಬಂದುದು ನಿಜವಾಗಿದ್ದರೆ ಎಲ್ಲರೂ ಇತರರನ್ನು ಕೆಡಿಸಿ ತಾವು ಬದುಕುವ ಕೆಲಸವನ್ನೇ ಮಾಡುತ್ತಿದ್ದರು. ತಮ್ಮ ಅಭಿವೃದ್ಧಿಯನ್ನು ತಾವು ಮಾಡಿಕೊಳ್ಳಬೇಕೆಂಬ ಇಚ್ಛೆಯು ಎಲ್ಲರಿಗೂ ಇರುವದರಿಂದ ಎಲ್ಲರೂ ಈ ರೀತಿಯಲ್ಲಿ ಇತರರಿಗೆ ಕೇಡನ್ನು ಮಾಡಲು ಉದ್ಯೋಗಿಸಿ ಇದುವರೆಗೆ ಭೂಮಿಯಲ್ಲಿ ಮನುಷ್ಯರ ಹೆಸರೇ ಇಲ್ಲದಂತಾಗುತ್ತಿದ್ದಿತು. ಆದುದರಿಂದ ನೀವು ವಿದ್ಯೆಯನ್ನು ಸಂಪಾದಿಸಲಿಕ್ಕೆ ಪ್ರಯತ್ನಮಾಡಿದರೆ ಅದರ ಜೊತೆಯಲ್ಲಿ ನಿಮ್ಮ ಸ್ವಭಾವವನ್ನೂ ಒಳ್ಳೆಯದನ್ನಾಗಿ ಮಾಡಿಕೊಳ್ಳುವದಕ್ಕೆ ಯತ್ನಮಾಡಬೇಕು. ನಿಮ್ಮ ಸಾಮರ್ಥ್ಯವೆಲ್ಲವನ್ನೂ ಇತರರಿಗೆ ಹಿತವನ್ನು ಮಾಡುವದರಲ್ಲಿ ವಿನಿಯೋಗಿಸಬೇಕು. ಮೂರ್ಖರಿಂದಲೂ, ದುಷ್ಟರಿಂದಲೂ ಇತರರಿಗೆ ಒಳ್ಳೆಯದಾಗುವ ಆಶೆಯೇ ಇರುವದಿಲ್ಲ. ಸುಶಿಕ್ಷಿತರಾದ ಒಳ್ಳೆಯವರಿಂದ ಜನರು ತಮಗೆ ಅಲಭ್ಯವಾದುದನ್ನೆಲ್ಲಾ ಸಂಪಾದಿಸಿಕೊಳ್ಳಬಹುದು. ಅಂಥ ಶಿಕ್ಷಿತಜನರು ಕೂಡ ದುರಾಚರಣೆಗೆ ಬಿದ್ದರೆ, ಜನರ ದುಃಖಕ್ಕೆ ಪಾರವುಂಟೇ? ಜ್ಞಾನವೆಂಬ ದ್ರವ್ಯವನ್ನು ನೀವು ಸಂಪಾದಿಸಿದ ಮಾತ್ರಕ್ಕೇ ಅದನ್ನು ಮನಸ್ಸಿಗೆ ಬಂದಂತೆ ವೆಚ್ಚಮಾಡಬಾರದು. ಈ ದ್ರವ್ಯವು ದೇವರ ಅನುಗ್ರಹದಿಂದ ನಿಮಗೆ ಪ್ರಾಪ್ತವಾಗಿರುವದರಿಂದ, ಆತನು ಮೆಚ್ಚುವಂತೆ ಅದನ್ನು ಉಪಯೋಗಿಸಬೇಕು. ಆದುದರಿಂದ ಈಗಿನಿಂದ ನೀವು ಈ ದ್ರವ್ಯವನ್ನು ಎಚ್ಚರಿಕೆಯಿಂದ ಕಾಪಾಡಿಕೊಳ್ಳಿರಿ. ನಿಮ್ಮ ಶರೀರದಲ್ಲಿ ಕಾಮ, ಕ್ರೋಧ, ಲೋಭ ಮೊದಲಾದ ಕಳ್ಳರು ಇರುತ್ತಾರೆ. ಅವರು ನಿಮ್ಮನ್ನು ವಂಚಿಸಿ ಈ ಧನವನ್ನು ಕದ್ದು ತೆಗೆದುಕೊಂಡು ಹೋಗುವದಕ್ಕೆ ಯತ್ನಮಾಡುತ್ತಾರೆ. ಆದುದರಿಂದ ನೀವು ಅದನ್ನು ಬುದ್ಧಿಯೆಂಬ ಬೊಕ್ಕಸದಲ್ಲಿ ಯಾವ ಉಪಹತಿಯೂ ಬಾರದಂತೆ ಭದ್ರವಾಗಿ ಇಟ್ಟಿರಬೇಕು. ಈ ಜ್ಞಾನಧನವನ್ನು ಗಂಟುಕಟ್ಟಿ ನಿಮ್ಮ ಹೊಟ್ಟೆಯಲ್ಲಿಯೇ ಇಟ್ಟುಕೊಂಡರೆ ಅದು ಅಭಿವೃದ್ಧಿಯಾಗುವದಿಲ್ಲ? ಬರುತ್ತಾ ಬರುತ್ತಾ ವೆಚ್ಚವಾಗಿ ಹೋಗುತ್ತದೆ. ಆದರಿಂದ ಅದನ್ನು ನಂಬಿಕೆಯುಳ್ಳವನಲ್ಲಿ ಬಡ್ಡಿಗೆ ಹಾಕಬೇಕು.

ನಿಮ್ಮ ಗುರುವು ನಿಮಗೆ ಕೊಟ್ಟ ಜ್ಞಾನಧನವನ್ನು ಅವರು ನಿಮ್ಮಲ್ಲಿ ಬಡ್ಡಿಗೆ ಹಾಕಿದ್ದಾರೆಂದು ತಿಳಿಯಬೇಕು. ಈ ಧನದ ಬಡ್ಡಿಯು ನೀವು ಬೆಳಯಿಸಿದಷ್ಟು ಬೆಳದು ಅವರಿಂದ ಜನರಿಗೆ ಮಹತ್ತಾದ ಉಪಕಾರವೂ ನಿಮಗೆ ಹಿತವೂ ಆಗುತ್ತದೆ. ನೀವು ಪ್ರತಿ ದಿವಸವೂ ಜ್ಞಾನವನ್ನು ಸಂಪಾದಿಸಿ ಅವನ್ನು ವೃದ್ಧಿಮಾಡುವುದಕ್ಕೆ ಸಾಹಸಮಾಡಿರಿ. ನೀವು ಎಷ್ಟು ಸಂಪಾದಿಸಿರುತ್ತೀರೋ ಅಷ್ಟೇಹೊರತು ಅದಕ್ಕಿಂತ ಹೆಚ್ಚಾದ ಜ್ಞಾನವಿಲ್ಲವೆಂದು ನೀವು ತಿಳಿಯಬಾರದು. ಜ್ಞಾನವೆಂಬುದು ಒಂದು ದೊಡ್ಡ ಸಮುದ್ರವಂತೆಯಿದೆ. ಅದರ ಪಾರವು ದೊಡ್ಡದೊಡ್ಡವರಿಗೇ ತಿಳಿದಿಲ್ಲ. ನಿಮ್ಮ ಪಾಡೇನು ?

ನೀವು ವಿದ್ಯಾಭ್ಯಾಸವನ್ನು ಮಾಡಿದನಂತರ ಇತರ ಕಾರ್ಯಗಳಲ್ಲಿ ಪ್ರವೇಶಿಸಿದಾಗ ದೊಡ್ಡದೊಡ್ಡ ಸಂಗತಿಗಳು ಸಂಭವಿಸಾವು. ಅಂಥ ಕಾಲದಲ್ಲಿ ಅಭ್ಯಾಸವನ್ನು ಅಲಕ್ಷ್ಯಮಾಡಿ, ಎಲ್ಲವನ್ನೂ ಮರೆತು ಬಿಡಬಾರದು. ಸ್ವಲ್ಪ ಶ್ರಮದಿಂದ ಸಂಪಾದಿಸಿದಂಥ ಆವುದಾದರೂ ಒಂದು ಪದಾರ್ಥವನ್ನು ನೀವು ಎಷ್ಟೋಚೆನ್ನಾಗಿ ಕಾಪಾಡಿಕೊಳ್ಳುತ್ತೀರಿ. ಹೀಗಿದ್ದಮೇಲೆ ಬಹಳ ಶ್ರಮದಿಂದ ಸಂಪಾದಿಸಿದ ವಿದ್ಯೆಯನ್ನು ನೀವು ಕಳದುಕೊಳ್ಳುವುದು ದುಃಖಪಡುವ ಮತ್ತು ನಾಚಿಕೆಪಡುವ ಸಂಗತಿಯಲ್ಲವೇ ?

ನೀವು ಎಷ್ಟು ದೊಡ್ಡ ಪದವಿಯನ್ನು ಪಡೆದಾಗ್ಯೂ, ನಿಮ್ಮ ಗುರುವು ಎಷ್ಟು ಸಣ್ಣ ಪದವಿಯಲ್ಲಿ ಇದ್ದಾಗ್ಯೂ, ಅವರಲ್ಲಿ ನೀವು ಅನಾದರ ಮಾಡಬಾರದು. ಏತಕ್ಕೆಂದರೆ ನೀವು ಸಂಪಾದಿಸಿರುವ ಯೋಗ್ಯತೆಯೂ ಮತ್ತು ಯಶಸ್ಸೂ ನಿಮ್ಮ ಗುರುಗಳ ಅನುಗ್ರಹದಿಂದಲೇ ಬಂದುವೆಂದು ತಿಳಿಯಬೇಕು. ನಿಮಗೆ ಉಪಕಾರವನ್ನು ಮಾಡಿದವರ ವಿಷಯದಲ್ಲಿ ಕೃತಘ್ನರಾಗಿರುವುದು ಬಹಳ ನಾಚಿಕೆಯ ಮಾತು. ಪ್ರಪಂಚದಲ್ಲಿ ಪರೋಪಕಾರ ಮಾಡತಕ್ಕಂಥವರು ಬಹು ಜನರಿದ್ದಾರೆ; ಪರಂತು ಅವರಲ್ಲಿ ವಿದ್ಯೆಯನ್ನು ಹೇಳುವವನಿಗೆ ಯಾರೂ ಸರಿಯಿಲ್ಲ. ನೀವು ಅಜ್ಞಾನಿಗಳಾಗಿದ್ದರೆ ನಿಮ್ಮಮೇಲೆ ದೊಡ್ಡದೊಡ್ಡ ವಿಪತ್ತುಗಳು ಬಂದೊದಗುತ್ತಾ ಇದ್ದುವು. ನೀವು ಗುರುಗಳ ಸಮೀಪದಲ್ಲಿ ವಿದ್ಯೆಯನ್ನು ಕಲಿತು ಜ್ಞಾನವನ್ನು ಸಂಪಾದಿಸಿಕೊಂಡುದರಿಂದ ಅಂಥ ವಿಪತ್ತುಗಳು

ಬಹಳವಾಗಿ ತಪ್ಪಿಹೋಗಿವೆ. ಇಂಥ ಅನರ್ಥಗಳ ದೆಸೆಯಿಂದ ನಿಮ್ಮನ್ನು ಸಂರಕ್ಷಿಸಿದವರು ದೊಡ್ಡವರಲ್ಲವೆ?

ವಿದ್ಯಾಭ್ಯಾಸದ ವಿಷಯವನ್ನು ಹಿಂದೆಹೇಳುವಾಗ ಮರೆತಿದ್ದ ಒಂದು ಸಂಗತಿಯನ್ನು ಈಗ ಹೇಳುತ್ತೇನೆ. ನೀವು ಪ್ರತಿದಿವಸದಲ್ಲಿಯೂ ಮಾಡಿದ ಅಭ್ಯಾಸ, ಮತ್ತು ಮಾಡಿದ ಕೆಲಸ ಇವುಗಳನ್ನು ನೆನಪಿನಿಂದ ಒಂದು ಪುಸ್ತಕದಲ್ಲಿ ಬರೆದು ಇಡುತ್ತಾ ನಿಮಗೆ ಕೂಡಿದ ಹೊತ್ತಿನಲ್ಲಿ ಅದನ್ನು ತಿರುಗಿ ನೋಡುತ್ತಾ ಬನ್ನಿರಿ. ಇದರಿಂದ ಬರೆವ ಅಭ್ಯಾಸವೂ ಆಗುವುದಲ್ಲದೆ ಇನ್ನೂ ಎರಡು ದೊಡ್ಡ ಅನುಕೂಲಗಳು ಉಂಟಾಗುತ್ತವೆ. ನೀವು ಬರೆದು ಇಡುವ ವಿಷಯವು ಬಾಯಿಪಾಠ ಮಾಡದಂತೆಯೇ ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತದೆ; ಮತ್ತು ಆಯಾ ದಿವಸ ನಡೆದುದನ್ನೆಲ್ಲಾ ಬರೆದು ಇಡುವುದರಿಂದ ನೀವು ಆವ ಸಮಯದಲ್ಲಿ ಏನು ಮಾಡಿದಿರಿ? ಅದರ ಪರಿಣಾಮವೇನಾಯಿತು? ಎಂಬುದು ನಿಮಗೆ ಚೆನ್ನಾಗಿ ಪದೇಪದೇ ನೆನಪಿಗೆ ಬರುತ್ತದೆ. ಹೀಗಾಗುವುದರಿಂದ ನೀವು ಒಳ್ಳೆಯ ಕೆಲಸ ಮಾಡಿದರೆ ಒಳ್ಳೆಯದಾಗುತ್ತದೆ. ಕೆಟ್ಟ ಕೆಲಸ ಮಾಡಿದರೆ ಕೇಡಾಗುತ್ತದೆ ಎಂಬುದು ಇನ್ನಾರ ಉಪದೇಶವೂ ಇಲ್ಲದೆ ನಿಮಗೇ ತಿಳಿಯುತ್ತದೆ. ರಾತ್ರಿಯೂ ಹಗಲೂ ಶ್ರಮಪಟ್ಟು ವಿದ್ಯಾಭ್ಯಾಸ ಮಾಡುವುದು ಏತಕ್ಕೆ? ಇದು ಒಳ್ಳೆಯದು ಇದು ಕೆಟ್ಟದು ಎಂಬ ವಿಚಾರವು ಮನಸ್ಸಿನಲ್ಲಿ ನೆಟ್ಟು, ಕೆಟ್ಟದನ್ನು ಬಿಟ್ಟು, ಒಳ್ಳೆಯದಾರಿಯನ್ನು ಹಿಡಿದು, ತನ್ನ ಹಿತವನ್ನು ಮಾಡಿಕೊಳ್ಳಬೇಕೆಂದಲ್ಲವೆ? ವಿದ್ಯೆಯನ್ನು ಕಲಿಯಬೇಕಾದರೆ ದೂರದರ್ಶಿಯಾದ ಬುದ್ಧಿವಂತನಲ್ಲಿ ಕಲಿಯಬೇಕು. ತಾನೇ ತಿಳಿಯದಿದ್ದವನು ಇತರರಿಗೆ ಏನು ಹೇಳಬಲ್ಲನು?

(೧) ನೀವು ಅಭ್ಯಾಸಮಾಡಬೇಕಾದ ಭಾಷೆಯನ್ನು ತಪ್ಪುಗಳಿಲ್ಲದಂತೆ ಬರೆವುದಕ್ಕೂ ಓದುವುದಕ್ಕೂ ಕಲಿಯಬೇಕಾದರೆ ಆ ಭಾಷೆಯ ವ್ಯಾಕರಣವನ್ನು ಕಲಿಯಬೇಕು. ವ್ಯಾಕರಣವನ್ನು ಕಲಿತ ಹೊರತು ಭಾಷೆಯನ್ನು ಶುದ್ಧವಾಗಿ ಬರೆವುದಕ್ಕೂ ಸ್ಪಷ್ಟವಾಗಿ ಓದುವುದಕ್ಕೂ ಆಗುವುದಿಲ್ಲ.

(೨) ಲೋಕದಲ್ಲಿಯ ಹಿಂದಣಕಾಲದ ರೀತಿ, ಈಗಿನ ಕಾಲದ ರೀತಿ, ನೀತಿ, ಎಲ್ಲದೇಶಗಳ ಸ್ಥಿತಿ, ಇವುಗಳನ್ನೂ ಆವ ದೇಶದ ಜನರು

ಆವಾವ ಕಾಲದಲ್ಲಿ ಹೇಗೆ ಹೇಗಿದ್ದರು? ಆವಾವ ಕೆಲಸಗಳನ್ನು ಮಾಡಿದರು? ಅದರಿಂದ ಫಲವೇನಾಯಿತು? ಎಂಬ ಸಂಗತಿಗಳನ್ನೂ ತಿಳಿಯಲಿಕ್ಕೆ ಇತಿಹಾಸಗಳನ್ನು ನೋಡಬೇಕು. ಇವುಗಳನ್ನು ನೋಡದಿದ್ದರೆ, ಮನುಷ್ಯನಲ್ಲಿ ಜ್ಞಾನವೂ, ಸನ್ಮಾರ್ಗಪ್ರವೃತ್ತಿಯೂ, ಪಾಪಭೀತಿಯೂ ಹುಟ್ಟುವುದಿಲ್ಲ.

(೩) ಪಾಪವನ್ನೂ ಪುಣ್ಯವನ್ನೂ ದೇವರನ್ನೂ ಜಗತ್ತಿನ ಪರಿಣಾಮವನ್ನೂ ನಿಜವಾದ ಸುಖವನ್ನೂ ತಿಳಿಯಲಿಕ್ಕೆ ಧರ್ಮಶಾಸ್ತ್ರವನ್ನು ನೋಡಬೇಕು. ಇಲ್ಲದಿದ್ದರೆ ಸಾರಾಸಾರ ವಿಚಾರವೂ, ವಿನಯವೂ, ದಯೆಯೂ, ದಾಕ್ಷಿಣ್ಯವೂ, ದೈವಭಕ್ತಿಯೂ ಇವುಗಳಿಂದುಂಟಾಗುವ ಅನಿರ್ವಚನೀಯವಾದ ಸುಖವೂ ಮನುಷ್ಯನಿಗೆ ದುರ್ಲಭವಾಗುತ್ತವೆ.

(೪) ಅನಂತರ ಈಶ್ವರ ಸೃಷ್ಟಿಯಲ್ಲಿ ಸೂರ್ಯ, ನಕ್ಷತ್ರ, ಭೂಮಿ ಇವುಗಳ ಸ್ಥಿತಿ ಎಂಥದು? ಎಲ್ಲಿ ಎಂಥ ಚಮತ್ಕಾರದ ಪದಾರ್ಥಗಳು ಸಿಕ್ಕುತ್ತವೆ? ಆವಾವ ಪದಾರ್ಥಗಳು ಆವಾವ ಕಾರಣದಿಂದ ಆವಾವ ರೀತಿಯಿಂದ ಹುಟ್ಟುತ್ತವೆ? ಆವಾವ ದೇಶವು ಆವಾವ ಕಡೆ ಆವಾವ ಸ್ಥಿತಿಯಲ್ಲಿದೆ? ಎಲ್ಲೆಲ್ಲಿಯ ಜನರ ಧರ್ಮಕಾರ್ಯ, ವಿದ್ಯೆ, ಉನ್ನತಿ ಇವು ಹೇಗೆ ಹೇಗಿವೆ? ಇವೇ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ಖಗೋಳವನ್ನೂ ಪದಾರ್ಥಜ್ಞಾನಭೂಗೋಳವನ್ನೂ ಕಲಿಯಬೇಕು. ಇವುಗಳನ್ನು ಕಲಿಯದೆ ಕೂಪಕೂರ್ಮದಂತೆ ಮನೆಯಲ್ಲಿ ಕುಳಿತಿರುವವರಿಗೆ ಈ ಸೃಷ್ಟಿಯು ಎಷ್ಟುದೊಡ್ಡದೆಂಬುದೂ ಅದು ಆವ ನಿಯಮಗಳಿಂದ ನಡೆಯುತ್ತದೆಂಬುದೂ ಈಶ್ವರನ ಮಹಿಮೆಯು ಎಷ್ಟು ದೊಡ್ಡದೆಂಬುದೂ ತಿಳಿವುದಿಲ್ಲ.

(೫) ಆವಾವ ಕಾಲದಲ್ಲಿ ಹೇಗೆಹೇಗೆ ನಡೆಯಬೇಕು? ಸ್ವಲ್ಪದರಲ್ಲಿಯೇ ಮಿತವಾಗಿಯೂ ಸುಖವಾಗಿಯೂ ಇರುವುದು ಹೇಗೆ? ಎಂಬುದನ್ನು ತಿಳಿವುದಕ್ಕೋಸ್ಕರ ಅರ್ಥಶಾಸ್ತ್ರವನ್ನೂ ನೀತಿಶಾಸ್ತ್ರವನ್ನೂ ಕಲಿಯಬೇಕು. ಇಲ್ಲದಿದ್ದರೆ ಮರ್ಯಾದೆಯಿಂದ ಸಂಸಾರ ಮಾಡುವುದು ಕಷ್ಟವಾಗುತ್ತದೆ.

(೬) ತಮ್ಮ ಶರೀರದ ಮತ್ತು ತಮ್ಮ ಮಕ್ಕಳೇ ಮೊದಲಾದವರ ಶರೀರದ ಆರೋಗ್ಯವನ್ನು ಕೆಡದಂತೆ ಇಟ್ಟುಕೊಳ್ಳುವುದಕ್ಕಾಗಿ

ಸ್ವಲ್ಪ ವೈದ್ಯಶಾಸ್ತ್ರವನ್ನು ತಿಳಿದಿರಬೇಕು. ಹುಡುಗರನ್ನೂ ವ್ಯಾಧಿಗ್ರಸ್ತರನ್ನೂ ಪರಿಪಾಲನಮಾಡುವ ಕ್ರಮವನ್ನು ಕಲಿತಿರಬೇಕು; ಇಲ್ಲದಿದ್ದರೆ ಬಹಳ ಅಪಾಯಗಳು ಸಂಭವಿಸುತ್ತವೆ.

(೭) ನಮ್ಮ ಮನೆಯ ನೆರೆಹೊರೆಯಲ್ಲಿ ಸುಶೀಲರಾಗಿಯೂ ಬುದ್ಧಿಶಾಲಿಗಳಾಗಿಯೂ ಇರುವ ಹೆಂಗಸರಲ್ಲಿ ಅಡಿಗೆ ಮಾಡುವುದನ್ನೂ, ಅವಕಾಶವಿದ್ದ ಕಾಲದಲ್ಲಿ ಹೊಲಿಯುವುದನ್ನೂ, ಕಸೂತಿಹಾಕುವುದನ್ನೂ, ಹಾಡುವುದನ್ನೂ ಹೇಳಿಸಿಕೊಳ್ಳಬೇಕು. ಇವು ಬಾರದೆಯಿದ್ದರೆ ಸಮಯದಲ್ಲಿ ಇತರರ ಕೈಕಾಲು ಕಟ್ಟಿಕೊಳ್ಳಬೇಕಾಗುತ್ತದೆ. ಇವು ನಮಗೆ ಬಾರದೆ ಇರುವುದು ಬಹಳ ನಾಚಿಕೆಯ ಮಾತಲ್ಲವೆ?

(೮) ಮನೆಯ ಆದಾಯವೆಷ್ಟು ವೆಚ್ಚವೆಷ್ಟು ಆಯಾ ದಿನಸುಗಳಲ್ಲಿ ಎಷ್ಟಕ್ಕೆ ಅವಧಾರಣೆಯ ಪ್ರಕಾರ ಎಷ್ಟಾಗುತ್ತದೆ ಎಂಬುದನ್ನು ತಿಳಿಯಲಿಕ್ಕೆ ಗಣಿತಶಾಸ್ತ್ರವನ್ನು ಸ್ವಲ್ಪ ಕಲಿಯಬೇಕು. ಇಲ್ಲದಿದ್ದರೆ ಆವುದಕ್ಕೆ ಎಷ್ಟು ಬೆಲೆಯೋ ತಿಳಿವುದಿಲ್ಲ.

ಮುಖ್ಯವಾಗಿ ನಿಮಗೆ ಆವುದೂ ಬರುವದಿಲ್ಲವೆನ್ನಿಸಬಾರದು. ಸ್ವಲ್ಪದರಲ್ಲಿ ಬಹಳ ತಿಳಿದುಕೊಳ್ಳುವ ಯತ್ನವನ್ನು ಮಾಡಿರಿ. ದೊಡ್ಡದೊಡ್ಡವರು ಆಚರಿಸುವ ರೀತಿಯನ್ನೂ, ನಿಮ್ಮ ದೇಶಾಚಾರ ಕುಲಾಚಾರಗಳನ್ನೂ, ಮತ್ತು ಇತರರ ಆಚಾರಗಳು ಯಾವಪ್ರಕಾರವಿವೆ ಎಂಬುದನ್ನೂ, ಚೆನ್ನಾಗಿ ತಿಳಿದುಕೊಳ್ಳಿರಿ. ಒಬ್ಬ ಸಣ್ಣ ಮನುಷ್ಯನಲ್ಲಿ ದೊಡ್ಡ ಗುಣವಿದ್ದರೆ ಸಣ್ಣವನಲ್ಲಿದೆ ಎಂದು ಅಸಡ್ಡೆಮಾಡದೆ ಅವನ್ನು ಗ್ರಹಿಸಬೇಕು. ಕಲಿಯಬೇಕೆಂಬ ಇಚ್ಛೆ ನಿಮಗಿದ್ದರೆ, ಜೇನುಹುಳ, ಇರುವೆ ಮುಂತಾದ ಸಣ್ಣ ಪ್ರಾಣಿಗಳಿಂದಲೂ ಸುಗುಣವನ್ನು ಕಲಿಯಬಹುದು.

---

## ೭ನೆಯ ಪರಿಚ್ಛೇದ.

## ಮರ್ಯಾದೆ.

ಜನರು ಸಮುದ್ರವನ್ನು ಬಹಳ ಕೊಂಡಾಡುವುದು ನಿಮಗೆಲ್ಲಾ ತಿಳಿದಿರಬಹುದು. ಆರಿಗಾದರೂ ಉತ್ತಮವಾದ ಉಪಮಾನವನ್ನು ಕೊಡಬೇಕಾದರೆ ಸಮುದ್ರದ ಉಪಮಾನವನ್ನು ಕೊಡುತ್ತಾರೆ. ಇದು ಏಕೆ?

ಸಾಧಾರಣವಾಗಿ ನೋಡಿದರೆ ಸಮುದ್ರದಲ್ಲಿ ಅಂಥ ಗುಣಗಳು ಯಾವುವೂ ಕಾಣಿಸುವುದಿಲ್ಲ. ಸಮುದ್ರದ ಸ್ವರೂಪವು ಭಯಂಕರವಾಗಿದೆ; ಅದರ ಗರ್ಭದಲ್ಲಿ ಜನರಿಗೆ ಉಪದ್ರವಕರಗಳಾದ ಮೊಸಳೆಗಳು, ದೊಡ್ಡದೊಡ್ಡ ಮೀನುಗಳು, ಆಮೆಗಳು, ನೀರುಹಾವುಗಳು ಮುಂತಾದ ಪ್ರಾಣಿಗಳಿವೆ. ಬಾಯಾರಿದವರು ಸಮುದ್ರದ ನೀರನ್ನು ಕುಡಿದರೆ ಅದರಿಂದ ತೃಪ್ತಿಯಾಗುತ್ತದೆಯೇ? ಸಮುದ್ರವು ಎಷ್ಟು ದೊಡ್ಡದಾದರೂ ಅದರಲ್ಲಿ ಜನರ ಬಾಯಾರಿಕೆಯನ್ನು ನಿವಾರಣಮಾಡುವ ಸಿಹಿನೀರಿನ ಸಣ್ಣ ಹಳ್ಳದಲ್ಲಿರುವಷ್ಟು ಮಹಿಮೆ ಕಾಣಿಸುವುದೆ? ಹೀಗೆ ಇದ್ದಾಗ್ಯೂ ಸಮುದ್ರವು ದೊಡ್ಡದೆಂದು ಕೊಂಡಾಡುವ ಜನರಿಗೆ ಹುಚ್ಚು ಹಿಡಿದಿದೆಯೆಂದು ನೀವು ತಿಳಿಯಬಹುದು. ಅದು ಸರಿಯಲ್ಲ.

ಸಮುದ್ರದಲ್ಲಿ ಮನೋಹರವಾದ ಎರಡು ದೊಡ್ಡ ಗುಣಗಳಿವೆ. ಅವುಗಳಲ್ಲಿ ಒಂದು ಗಾಂಭೀರ್ಯ, ಇನ್ನೊಂದು ಮರ್ಯಾದಾಪಾಲನೆ. ಅದರಲ್ಲಿ ಆ ಎರಡು ಗುಣಗಳಿರುವುದರಿಂದ ಅದು ಜಗತ್ತಿನಲ್ಲಿ ಎಲ್ಲಕ್ಕಿಂತಲೂ ದೊಡ್ಡದೆನಿಸಿಕೊಂಡು ಪ್ರಶಂಸೆಗೆ ಯೋಗ್ಯವಾಗಿದೆ. ಸಮುದ್ರದ ಗರ್ಭದಲ್ಲಿ ಏನಿದೆ, ಎಷ್ಟಿವೆ, ಅದು ಆವಕಡೆ ಇದೆ ಎಂಬುದನ್ನು ಹೇಳುವುದಕ್ಕೆ ಆರಿಂದಲೂ ಆಗುವುದಿಲ್ಲ. ಅದರ ಆಳವು ಬಹಳವಾಗಿದೆ. ಅದರ ಗರ್ಭದಲ್ಲಿ ಅಮೂಲ್ಯವಾದ ಮತ್ತು ಅಸಂಖ್ಯವಾದ ರತ್ನಗಳಿವೆ. ಹೀಗಿದ್ದಾಗ್ಯೂ ಅದು ನನ್ನಲ್ಲಿ ಇಂಥಿಂಥ ವಸ್ತುಗಳಿವೆಯೆಂದು ಮನುಷ್ಯನಹಾಗೆ ಕೂಗಿ ಹೇಳಿ ತೋರಿಸಿಕೊಳ್ಳುವುದಿಲ್ಲ. ಇದೊಂದು ಸಮುದ್ರದ ದೊಡ್ಡ ಗುಣವಾಗಿದೆ. ಜಲಪ್ರಳಯವಾಗುವಂತೆ ಮಳೆ ಕರೆದಾಗ್ಯೂ ಸಮುದ್ರವು ಮೇರೆದಪ್ಪುವುದಿಲ್ಲ. ಮತ್ತು ಹನ್ನೆರಡು ವರ್ಷ ಅನಾವೃಷ್ಟಿ ಬಂದಾಗ್ಯೂ ಅದರಲ್ಲಿರುವ ನೀರು ಕಡಮೆ ಯಾಗುವುದಿಲ್ಲ. ಜನರ ಬಾಯಾರಿಕೆಯನ್ನು ನಿವಾರಣೆ ಮಾಡುವ ಸಣ್ಣ ಹಳ್ಳದ ಸ್ಥಿತಿ ಈಪ್ರಕಾರವಿರುವುದಿಲ್ಲ. ಅದರ ಗರ್ಭದಲ್ಲಿ ಕಲ್ಲು ಮಣ್ಣು ಮುಂತಾದುವು ಎಷ್ಟಿದೆ ಎಂಬುದು ಎಲ್ಲರಿಗೂ ತಿಳಿಯುತ್ತದೆ. ಸ್ವಲ್ಪ ಮಳೆ ಬರುತ್ತಲೇ ಅದು ಮನಸ್ಸು ಬಂದಂತೆ ಉಬ್ಬಿ ಹೆಚ್ಚಾಗಿ ಗರ್ಜಿಸುತ್ತಾ, ದಾರಿ ಸಿಕ್ಕಿದ ಕಡೆಗೆಲ್ಲ ಸೊಟ್ಟುಸೊಟ್ಟಾಗಿ ಒರಟುತನದಿಂದ ನುಗ್ಗಿ, ತನ್ನ ಉದ್ಧತತನವನ್ನು ತೋರಿಸಿಕೊಳ್ಳುತ್ತದೆ. ಆಕಾಲದಲ್ಲಿ ಅದಕ್ಕೆ ಆರ

ಲಕ್ಷ್ಯವೂ ಇರುವುದಿಲ್ಲ. ಎರಡು ದಿವಸ ಮಳೆ ಬಾರದೆ ಇದ್ದರೆ ಕೂಡಲೆ ಅದು ಹೇಳಲಿಕ್ಕಾಗದಷ್ಟು ಹೀನಸ್ಥಿತಿಗೆ ಬಂದು ಕ್ಷೀಣಿಸಿ ಬತ್ತಿ ಹೋಗುತ್ತದೆ. ಇದನ್ನು ಆಲೋಚಿಸಿ ನೋಡಿ ಆ ಬಳಿಕ ಪ್ರಶಂಸೆ ಮಾಡುವುದಕ್ಕೆ ಯೋಗ್ಯವಾದ ಗುಣಗಳು ಸಮುದ್ರದಲ್ಲಿವೆಯೋ ಹಳ್ಳದಲ್ಲಿವೆಯೋ ಹೇಳಿರಿ.

ಮೇಲೆ ಹೇಳಿದ ದೃಷ್ಟಾಂತಗಳ ಅಭಿಪ್ರಾಯವೇನೆಂಬುದು ನಿಮಗೆ ತಿಳಿದಿರಬಹುದು. ಮನುಷ್ಯನಲ್ಲಿ ಸಾವಿರಾರು ಗುಣಗಳಿದ್ದಾಗ್ಯೂ, ಅವನಲ್ಲಿ ಗಾಂಭೀರ್ಯವೂ ಮರ್ಯಾದೆಯೂ ಇಲ್ಲದಿದ್ದರೆ, ಅವನಿಗೆ ಎಲ್ಲಿಯೂ ಪುರಸ್ಕಾರವಾಗುವುದಿಲ್ಲ. ಇಂಥವನಲ್ಲಿರುವ ಇತರ ಸುಗುಣಗಳೂ ಕೂಡ ಅವನಿಗೆ ಭೂಷಣಗಳಾಗಿರದೆ ನಿಂದಾಸ್ಪದಗಳಾಗುತ್ತವೆ. ಲೋಕದಲ್ಲಿ ಹುಟ್ಟಿದ ಮನುಷ್ಯನು ನಾಲ್ವರಲ್ಲಿ ಪ್ರತಿಷ್ಠೆಯನ್ನು ಪಡೆಯದಿದ್ದರೆ ಶ್ರೇಷ್ಠವಾದ ಮನುಷ್ಯಜನ್ಮವನ್ನು ಎತ್ತಿ ಏನುಮಾಡಿದ ಹಾಗಾಯಿತು? ಈಶ್ವರನು ಎಲ್ಲ ಪ್ರಾಣಿಗಳಿಗಿಂತಲೂ ಮನುಷ್ಯರಿಗೆ ಶ್ರೇಷ್ಠತ್ವವನ್ನು ಕೊಟ್ಟಿರುವುದು ನೀಚತ್ವವನ್ನು ಪಡೆದುಕೊಳ್ಳುವುದಕ್ಕೋಸ್ಕರವಲ್ಲವಲ್ಲ! ಒಬ್ಬ ಯಜಮಾನನ ಹತ್ತಿರ ಸೇವಕನು ಚೆನ್ನಾಗಿ ಕೆಲಸವನ್ನು ಮಾಡಿದರೆ ಆ ಯಜಮಾನನು ತಿರುಗಿ ಅವನ ಅಧಿಕಾರವನ್ನು ಹೆಚ್ಚಿಸುತ್ತಾನೆ. ಹೀಗೆ ಹೆಚ್ಚಿಸುವುದು ಮೊದಲು ಮಾಡುತ್ತಿದ್ದ ಕೆಲಸಗಳನ್ನು ಬಿಟ್ಟು ನೀಚವಾದ ಮತ್ತು ಕೆಟ್ಟದಾದ ಕೆಲಸವನ್ನು ಮಾಡಲಿ ಎಂದಲ್ಲ; ಮೊದಲಿಗಿಂತಲೂ ದೊಡ್ಡದಾದ ಒಳ್ಳೆಯ ಕೆಲಸವನ್ನು ಮಾಡಿ ತನ್ನ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳಲಿಯೆಂದೇ ಹಾಗೆ ಮಾಡುತ್ತಾನೆ. ಆದುದರಿಂದ ಪ್ರತಿ ಮನುಷ್ಯನೂ ತನ್ನ ಸ್ಥಿತಿಗೆ ತಕ್ಕ ಅಥವಾ ಅದಕ್ಕೆ ಮೀರಿದಬಳ್ಳಯತನವನ್ನು ಸಂಪಾದಿಸಿಕೊಂಡು ತನ್ನ ಯೋಗ್ಯತೆಯನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಆಸಕ್ತನಾಗಿರಬೇಕೆಂಬುದು ದೈವನಿಬಂಧನೆಯೆಂದು ಸಿದ್ಧವಾಯಿತು. ಆದಕಾರಣ ಈ ನಿಬಂಧನೆಗೆ ಅನುಸಾರವಾಗಿ ನಡೆದವನಿಗೆ ಶ್ರೇಯಸ್ಸುಂಟಾಗುತ್ತದೆ; ಇದಕ್ಕೆ ವಿರೋಧವಾಗಿ ನಡೆವುದರಿಂದ ಈಶ್ವರಾಜ್ಞೆಯನ್ನು ಉಲ್ಲಂಘಿಸಿದಂತೆ ಆಗಿ ಸಂಸಾರದಲ್ಲಿ ಪಾಪದ ಫಲರೂಪವಾದ ನಾನಾವಿಧವಾದ ಸಂಕಟಗಳು ಪ್ರಾಪ್ತವಾಗುತ್ತವೆ.

ಈ ನಿಬಂಧನೆಯನ್ನು ಅನುಸರಿಸಿ ನಡೆವುದಕ್ಕೋಸ್ಕರ ಮನುಷ್ಯನು

ತನ್ನ ಮರ್ಯಾದೆಯನ್ನು ಬಹಳ ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಪ್ರಪಂಚದಲ್ಲಿ ವಿದ್ಯೆಯನ್ನೂ ಧನವನ್ನೂ ಮಾನವನ್ನೂ ಸಂಪಾದಿಸಬಹುದು; ಆದರೆ ಮರ್ಯಾದೆಯನ್ನು ಕಾಪಾಡಿಕೊಳ್ಳದಿದ್ದರೆ ಅವುಗಳು ನಿಲ್ಲುವುದಿಲ್ಲ. ಮಾನವೆಂಬ ಎತ್ತರವಾದ ಶಿಖರಕ್ಕೆ ಜನರು ಹತ್ತುತ್ತಾರೆ; ಪರಂತು ಅವರು ಘನತೆಯುಳ್ಳವರಾಗಿಯೂ ಮರ್ಯಾದೆಯನ್ನು ಕಾಪಾಡಿಕೊಳ್ಳುವವರಾಗಿಯೂ ಗಂಭೀರರಾಗಿಯೂ ಇಲ್ಲದಿದ್ದರೆ ಆ ಶಿಖರದಲ್ಲಿ ನಿಲ್ಲುವುದಕ್ಕಾಗುವುದಿಲ್ಲ. ಅಲ್ಲಿ ನಿಲ್ಲದವರು ದುರ್ವ್ಯಸನವೆಂಬ ಗಾಳಿಯವೇಗದಿಂದ ತಳ್ಳಲ್ಪಟ್ಟವರಾಗಿ, ದುರವಸ್ಥೆಯೆಂಬ ಅಗಾಧವಾದ ಸಮುದ್ರದಲ್ಲಿ ಬಿದ್ದು ಕೊನೆಗೆ ಅನಾಮಧೇಯರಾಗುವರು. ಮನುಷ್ಯನು ತನ್ನ ಸ್ಥಿತಿಯನ್ನು ಅಭಿವೃದ್ಧಿಪಡಿಸಿಕೊಂಡು ಉತ್ತಮನಾಗುವುದೂ, ಮತ್ತು ನೀಚನಿಗಿಂತಲೂ ನಿಕೃಷ್ಟನಾಗುವುದೂ, ತನ್ನ ಕೃತ್ಯದಿಂದಲೇ. ಪ್ರಪಂಚದಲ್ಲಿ ಮನುಷ್ಯರಿಗೆ ಪ್ರತಿಷ್ಠೆಯನ್ನು ಸಂಪಾದಿಸಬೇಕೆಂಬ ಆಶೆ ಮನಸ್ಸಿನಲ್ಲಿ ಹುಟ್ಟಿದಮಾತ್ರಕ್ಕೇ ಅದು ಬರುವುದಿಲ್ಲ. ಅದಕ್ಕಾಗಿ ಸದಾಚಾರಪರರಾಗಿ ಗಂಭೀರರಾಗಿ ಮರ್ಯಾದೆಯನ್ನು ಅತಿಕ್ರಮಿಸದವರಾಗಿ ನಡೆದು, ಪ್ರತಿಷ್ಠೆಯನ್ನು ಸಂಪಾದಿಸಬೇಕು. ಈ ಪ್ರಕಾರ ನಡೆವುದರಲ್ಲಿ ನಿಶ್ಚಯವೂ ಶಕ್ತಿಯೂ ನಿಮ್ಮಲ್ಲಿದ್ದರೆ ನೀವು ದೊಡ್ಡವರಾಗುವ ಆಶೆಯನ್ನು ಇಡತಕ್ಕುದು; ಇಲ್ಲದಿದ್ದರೆ "ನವಿಲು ಕುಣಿಯುತ್ತದೆಯೆಂದು ಕಾಗೆ ಕುಣಿಯುವುದಕ್ಕೆ ಆರಂಭಿಸಿತು" ಎಂಬ ಗಾದೆಗೆ ಸರಿಯಾಗಿ ಕಾಗೆಯ ಸ್ಥಿತಿಗಿಂತಲೂ ನಿಮ್ಮ ಸ್ಥಿತಿ ನಿಕೃಷ್ಟವಾಗುವುದು.

ಮನುಷ್ಯನು ಬಂದುವೇಳೆ ಉನ್ನತಸ್ಥಿತಿಗೆ ಬಾರದೆ ಇದ್ದರೂ ಚಿಂತೆಯಿಲ್ಲ; ತಾನಿರುವ ಸ್ಥಿತಿಯಲ್ಲಾದರೂ ಮಾನದಿಂದಿರಬೇಕು. ಮರ್ಯಾದಾಪಾಲನೆಯಿಲ್ಲದೆ ಮಾನ ಬರುವುದಿಲ್ಲ. ಮನುಷ್ಯನೆಂದೆನಿಸಿಕೊಳ್ಳಬೇಕಾದರೆ ಮಾನ ಮರ್ಯಾದೆಗಳು ಅವಶ್ಯಕವಾಗಿ ಇರಬೇಕು. ಪ್ರಪಂಚದಲ್ಲಿ ದೇಹವಿರುವ ಪರ್ಯಂತ ಸುಖವಾಗಿರುವುದಕ್ಕೆ ಉಪಾಯವು ಯಾವುದೆಂಬುದನ್ನು ವಿಚಾರಿಸೋಣ.

ಸಂಸಾರದಲ್ಲಿ ಯಾವಕಡೆಗೆ ಹೋದಾಗ್ಗೂ ಯಾವಸ್ಥಿತಿಯಲ್ಲಿ ಇದ್ದಾಗ್ಗೂ ಮನುಷ್ಯನಿಗೆ ಹಜ್ಜೆಹಜ್ಜೆಗೂ ದುಃಖಗಳು ಸಂಘಟಿಸುತ್ತಲೇ ಇರುತ್ತವೆ. ಆದುದರಿಂದ ಎಲ್ಲಿ ಸ್ವಲ್ಪ ಸುಖವಾಗುವ ಸಂದ

ರ್ಭವು ಕಾಣುತ್ತದೋ ಅಲ್ಲಿಗೆ ಹೋಗುವುದಕ್ಕಾಗಿ ಜನರು ಹಿಂದೆ ಮುಂದೆ ನೋಡದೆ ತ್ವರೆಪಡುತ್ತಾರೆ. ಮನುಷ್ಯನಿಗೆ ದುಃಖವನ್ನು ಕಳೆದುಕೊಂಡು ಸುಖಪಡಬೇಕೆಂಬ ಅಪೇಕ್ಷೆಯಿರುವುದು ಸ್ವಾಭಾವಿಕವಾಗಿದೆ. ದುಃಖವನ್ನು ಕಡಿಮೆ ಮಾಡುವುದಾಗಿಯೂ ಸಂತೋಷವನ್ನು ಉಂಟುಮಾಡುವುದಾಗಿಯೂ ಕಾಣಬರುವ ಕೆಲಸವನ್ನು ಮಾಡುವುದಕ್ಕೆ ಮನಸ್ಸು ಯಾವಾಗಲೂ ಸಿದ್ಧವಾಗಿರುತ್ತದೆಂಬುದು ನಮ್ಮ ಎಲ್ಲಾ ಕೆಲಸಗಳಲ್ಲಿಯೂ ದೃಷ್ಟಾಂತಕ್ಕೆ ಬರುತ್ತದೆ. ಮನುಷ್ಯನು ಸರ್ವಕಾಲದಲ್ಲಿಯೂ ಸುಖಿಗಳಾಗುವ ಉಪಾಯಗಳನ್ನು ಹುಡುಕುವುದರಲ್ಲಿ ತತ್ಪರರಾಗಿರುತ್ತಾರೆ. ಇದು ಯುಕ್ತವೇ ಸರಿ. ಪರಂತು ಈ ಕೆಲಸವನ್ನು ಮಾಡಿದರೆ ಮುಂದೆ ಫಲವೇನಾಗುವುದೆಂಬ ಆಲೋಚನೆ ಯಿಲ್ಲದೆ ಮನಸ್ಸಿಗೆ ತೋರಿದ ಕೆಲಸವನ್ನೆಲ್ಲ ಮಾಡುವುದು ಮಾತ್ರ ದೋಷವೆಂದೆಣಿಸಬೇಕು.

ಆಲೋಚನೆಯಿಲ್ಲದೆ ಕೆಲಸವನ್ನು ಮಾಡಲಾರಂಭಿಸಿದರೆ ಪ್ರಯತ್ನವೆಲ್ಲ ನಿಷ್ಫಲವಾಗುವದಲ್ಲದೆ, ಒಂದೊಂದುಸಾರಿ ಆ ಕೆಲಸದಿಂದ ಉಂಟಾಗುವ ದುಃಖವನ್ನು ದೇಹವಿರುವ ಪರ್ಯಂತ ಅನುಭವಿಸಬೇಕಾಗುತ್ತದೆ. ಜಗತ್ತಿನಲ್ಲಿ ದುರ್ಮಾರ್ಗವು ನೋಡುವುದಕ್ಕೆ ಸುಂದರವಾಗಿ ಕಾಣುತ್ತದೆ; ಆದರೆ, ಅದರಲ್ಲಿ ಕಾಲಿಟ್ಟಕೂಡಲೆ ಹಿಂತೆಗೆವುದಕ್ಕೆ ಸ್ವಾಧೀನವಿಲ್ಲದಂತಾಗಿ ಮುಂದೆ ಹಜ್ಜೆಹಜ್ಜೆಗೂ ದುಃಖಗಳು ಬಂದೊದಗುತ್ತವೆ. ವಿಚಾರವಿಲ್ಲದವನು ಕೆಲಸಕ್ಕೆ ಆರಂಭಿಸುವಾಗ ಅದರಿಂದ ಸುಖವಾಗುವುದೆಂದೇ ತಿಳಿದು ಆರಂಭಿಸುತ್ತಾನೆ. ಆ ಕೆಲಸವು ಪರಿಣಾಮದಲ್ಲಿ ದುಃಖದಭಂಡಾರವಾಗುವುದು. ಆದುದರಿಂದ ಮೇಲೆಮೇಲೆ ನೋಡಿ ಇದು ಸುಖದ ದಾರಿಯೆಂದು ನಿಶ್ಚಯವಾಗಿ ಎಣಿಸಬಾರದು. ಎಳೆಯ ಹುಲ್ಲಿನಿಂದ ಮುಚ್ಚಲ್ಪಟ್ಟು ಮನೋಹರವಾಗಿ ಕಾಣುವ ಭೂಮಿಯ ಮೇಲೆ ಕುಳಿತುಕೊಳ್ಳುವುದಕ್ಕೆ ಹೋದಾಗ ಕೆಲವು ವೇಳೆಯಲ್ಲಿ ಮುಳ್ಳು, ಹಾವು, ಚೇಳುಗಳಿಂದ ತುಂಬಿರುವ ದೊಡ್ಡ ಗುಂಡಿಯಲ್ಲಿ ಬೀಳಬೇಕಾಗುತ್ತದೆ. ಪ್ರಪಂಚದಲ್ಲಿ ನೋಡುವುದಕ್ಕೆ ಮೇಲೆಮೇಲೆ ಬಹಳ ಚೆನ್ನಾಗಿ ಕಾಣುವಂಥದು, ಅನುಭವದಲ್ಲಿ ಕೇವಲ ದುಃಖಕರವಾಗುವುದು, ಹಾಗೆಯೇ ನೋಡುವುದರಲ್ಲಿ ಕೆಟ್ಟದಾಗಿಯೂ ಪರಿಣಾಮದಲ್ಲಿ ಹಿತಕಾರಿಯಾಗಿಯೂ ಇರುವ ಸಂಗತಿಗಳೂ ಅನೇಕವಾಗಿವೆ.

ಧರ್ಮವೂ ನೀತಿಯೂ ಸುಖಕ್ಕೆ ವಿಘ್ನಕಾರಿಗಳೆಂದು ಕೆಲವರು ಮನಸ್ಸಿನಲ್ಲಿ ತಿಳಿದುಕೊಂಡಿರುವಕಾರಣ ಅವರು ಧರ್ಮಶಾಸ್ತ್ರ ನೀತಿಶಾಸ್ತ್ರಗಳ ಪ್ರಕಾರ ನಡೆವುದಿಲ್ಲ. ಇದಲ್ಲದೆ—ನೀತಿಶಾಸ್ತ್ರ ಧರ್ಮಶಾಸ್ತ್ರಗಳನ್ನು ಅನುಸರಿಸಿನಡೆಯುವವರು ತಾವೂ ಸುಖಿಗಳಾಗುವುದಿಲ್ಲ, ಇತರರನ್ನೂ ಸುಖಿಗಳಾಗಗೊಡಿಸುವುದಿಲ್ಲ; ಪ್ರತಿಯೊಂದು ವಿಷಯದಲ್ಲಿಯೂ ನಮ್ಮ ಕೆಲಸಕ್ಕೆ ಅಡ್ಡವಾಗಿ ನಿಲ್ಲುತ್ತಾರೆಂದು ತಿಳಿದುಕೊಳ್ಳುತ್ತಾರೆ. ಚೆನ್ನಾಗಿ ಆಲೋಚಿಸಿದರೆ ಹಾಗೆ ಎಣಿಸುವುದು ಸರಿಯಲ್ಲವೆಂಬುದು ಗೊತ್ತಾಗುತ್ತದೆ. ನೀತಿಶಾಸ್ತ್ರ ಧರ್ಮಶಾಸ್ತ್ರಗಳನ್ನು ಅನುಸರಿಸುವ ಜನರು ಸಂಸಾರದ ಸುಖವನ್ನು ತಕ್ಕ ಮಟ್ಟಿನಲ್ಲಿ ಇಡಬೇಕೆಂಬುದಾಗಿ ಯತ್ನಮಾಡುತ್ತಾರೆ. ಯಾವ ವಿಷಯವೇ ಆಗಲಿ ಅದರ ಮಟ್ಟನ್ನು ಮೀರದೆ ಇದ್ದರೆ ಸುಖಪ್ರದವಾಗುತ್ತದೆ; ಮಟ್ಟು ಮೀರಿದ ಕೂಡಲೇ ಪರಿಹರಿಸುವುದಕ್ಕೆ ಅಸಾಧ್ಯವಾದ ದುಃಖವನ್ನುಂಟುಮಾಡುತ್ತದೆ. ಆರು ನೀತಿಶಾಸ್ತ್ರಾನುಸಾರವಾಗಿ ಎಲ್ಲ ವಿಷಯದಲ್ಲಿಯೂ ಮಿತಾಚರಣೆಯಲ್ಲಿ ಇರುತ್ತಾರೋ ಅವರೇ ಆ ನೀತಿಯ ಗುಟ್ಟನ್ನು ಬಲ್ಲರು; ಇತರರಿಗೆ ಅದು ತಿಳಿವುದಿಲ್ಲ. ಮಿತಾಚರಣೆ ಇದ್ದರೆ ಭೂಮಿಯಲ್ಲಿ ಸುಖಕ್ಕೆ ಸಾಧನವಾದ ವಿಷಯಗಳೆಲ್ಲ ಸಾರವುಳ್ಳವುಗಳಾಗುತ್ತವೆ. ಮತ್ತು ಇದರಿಂದ ಮನುಷ್ಯನ ಉಪಭೋಗಶಕ್ತಿಯು ಹೆಚ್ಚಿ ಅವನು ಸುಖಪಡಲಿಕ್ಕೆ ಅನುಕೂಲವಾಗುತ್ತದೆ. ಆದುದರಿಂದ ಅಮಿತಾಚರಣಕ್ಕೂ ಯಥೇಚ್ಛಾ ವ್ಯವಹಾರಕ್ಕೂ ಪ್ರತಿಬಂಧಕಗಳಾದ ಶಾಸ್ತ್ರಗಳನ್ನು ಸುಖಕ್ಕೆ ವಿಘ್ನಕಾರಿಗಳೆಂದು ಹೇಳಕೂಡದು. ಶಾಸ್ತ್ರಾನುಸಾರವಾಗಿ ನಡೆವವರಿಗೆ ಸುಖದ ಸಾಧನಗಳು ಸ್ವಲ್ಪವಿದ್ದಾಗ್ಯೂ ಅವರು ಸುಖದ ಸಂಪೂರ್ಣಫಲವನ್ನು ಅನುಭವಿಸಲಿಕ್ಕೆ ಶಕ್ತರಾಗಿರುತ್ತಾರೆ. ಮಿತಾಚರಣವು ಸುಖಕ್ಕೆ ವಿಘ್ನವೆಂದೂ ಮಿತಿಮೀರಿ ಮನಸ್ಸಿಗೆ ಬಂದಂತೆ ಸುಖಾನುಭವ ಮಾಡುವುದೇ ಜನ್ಮದ ಉದ್ದೇಶವೆಂದೂ ಆರು ತಿಳಿಯುತ್ತಾರೋ ಅಂಥ ಸ್ವಭಾವವುಳ್ಳ ಜನರ ಸ್ವೇಚ್ಛಾಚರಣೆಯನ್ನು ಮಾತ್ರ ಶಾಸ್ತ್ರಗಳು ನಿಷೇಧಮಾಡುತ್ತವೆ.

ಸಂಸಾರದಲ್ಲಿ ಸುಖವು ಕ್ಷಣಭಂಗುರವಾಗಿಯೂ ದುಃಖವು ಪದೇ ಪದೇ ಬರುವುದಾಗಿಯೂ ಇರುತ್ತವೆ. ಮಿತಾಚರಣೆಯೂ, ಆತ್ಮ

ಸಂಯಮನವೂ, (ಅಂದರೆ ಮನಸ್ಸನ್ನು ನಿಗ್ರಹಿಸುವುದು) ಜಾಗರೂಕತೆಯೂ ಇದ್ದ ಪಕ್ಷದಲ್ಲಿ, ಮನುಷ್ಯನ ಆಯುಸ್ಸು ಅತಿಶಯವಾದ ಸುಖದ ಭಂಡಾರವಾಗುತ್ತದೆ. ಆದುದರಿಂದ ಸಂಸಾರಕೃತ್ಯದಲ್ಲಿ ಹೊಸದಾಗಿ ಪ್ರವೇಶಮಾಡಿ ಅದರಲ್ಲಿ ಒಳ್ಳೆಯದು ಕೆಟ್ಟದೆಂಬುವರ ತಿಳಿವಳಿಕೆ ಯಿಲ್ಲದವರಿಗೆ ಮೇಲೆ ಹೇಳಿದ ಮಿತಾಚರಣೆ ಮೊದಲಾದ ಗುಣಗಳು ಅವಶ್ಯಕವಾಗಿರಬೇಕು. ಹೀಗಿದ್ದಾಗ್ಯೂ ಸಂಸಾರದಲ್ಲಿ ಹೊಸದಾಗಿ ಪ್ರವೃತ್ತರಾಗುವವರು ಈ ಗುಣಗಳನ್ನು ವಿಶೇಷವಾಗಿ ಲಕ್ಷ್ಯಕ್ಕೆ ತರುವುದಿಲ್ಲ. ಇದನ್ನು ನೋಡಿದರೆ ಬಹಳ ವ್ಯಸನವಾಗುತ್ತದೆ. ಸಂಸಾರವೆಂಬ ಪೇಟೆಯಲ್ಲಿ ಹೊಸದಾಗಿ ತಿರುಗುವುದಕ್ಕೆ ಹೊರಟ ಯೌವನಸ್ಥರ ಕಣ್ಣುಗಳಿಗೆ ನೋಡಿದುದೆಲ್ಲಾ ಮನೋಹರವಾಗಿ ಕಾಣುತ್ತದೆ; ಕೇವಲ ಕೆಟ್ಟ ವಿಷಯಗಳು ಸಹ ಅವರ ಭ್ರಾಂತದೃಷ್ಟಿಗೆ ಉತ್ತಮಗಳಾಗಿ ಕಾಣುತ್ತವೆ. ಸುಖಾಶೆಯು ಅವರನ್ನು ಮೋಹಪಡಿಸಿ ಕುರುಡರನ್ನಾಗಿ ಮಾಡುತ್ತದೆ. ಅವರಿಗೆ ಭೋಗವಾಸನೆ ಹೆಚ್ಚಾಗಿರುವುದರಿಂದ ಅವರ ಮನಸ್ಸು ಆವಾಗಲೂ ತವಕದಿಂದಲೂ ಉತ್ಕಂಠತೆಯಿಂದಲೂ ಕೂಡಿರುತ್ತದೆ.

ಯೌವನ ಮದದಿಂದ ಕುರುಡರಾಗಿ ಇರುವವರಿಗೆ ಹಿಂದೆ ಮುಂದೆ ಆವುದೂ ಕಾಣುವುದಿಲ್ಲ. ಅವರಿಗೆ ಹಗಲು ಹೊತ್ತು ಕಣ್ಣು ಚೆನ್ನಾಗಿ ಕಾಣಿಸುತ್ತಾ ಇದ್ದಾಗ್ಯೂ, ಮೋಹವೆಂಬ ಹಾಳುಭಾವಿಯಲ್ಲಿ ಹಾರಿಬೀಳುತ್ತಾರೆ. ಈ ಭಯಂಕರವಾದ ಯೌವನ ಮದದಿಂದ ಅವರ ಬುದ್ಧಿಯು ಕೇವಲ ಅವಿಚಾರಿಯಾಗಿಯೂ ಉದ್ಧತವಾಗಿಯೂ ಇರುವುದರಿಂದ, ಅವರಿಗೆ ಯಾವುದರ ಭಯವೂ ತೋರುವುದಿಲ್ಲ. ಜನರ ಯೋಗ್ಯತೆಯನ್ನು ಹಿಂದೆ ಮುಂದೆ ವಿಚಾರಿಸಿ ಆಲೋಚಿಸದೆ ಎಂಥವರಲ್ಲಾದರೂ ನಂಬಿಕೆಯನ್ನಿಡುತ್ತಾರೆ. ಅವರಿಗೆ ನಿಜವಾದ ಯೋಗ್ಯತೆಯನ್ನು ತಿಳಿದು ಆವ ಕೆಲಸವನ್ನಾದರೂ ಮಾಡುವಷ್ಟು ತಾಳ್ಮೆ ಇರುವುದಿಲ್ಲ. ಅವರಲ್ಲಿ ದೂರದೃಷ್ಟಿ ಇಲ್ಲದುದರಿಂದಲೇ ಸಿಕ್ಕಿದವರನ್ನೆಲ್ಲ ನಂಬುತ್ತಾರೆ. ಕೇವಲ ಉದ್ಧತರಾಗುವುದರಿಂದ ಅವರಿಗೆ ವಿಪತ್ತಿನ ಅನುಭವವಿಲ್ಲ. ಇಂಥ ಭಯಂಕರವಾದ ತಾರುಣ್ಯಾವಸ್ಥೆಯಲ್ಲಿ ಮಿತಾಚರಣೆಯಿಲ್ಲದಾಗ ಆಲಸ್ಯವೂ, ಅಜಾಗರೂಕತೆಯೂ, ಇಂದ್ರಿಯಾಧೀನತೆಯೂ, ಅವರಲ್ಲಿ

ಪ್ರವೇಶ ಮಾಡಿದರೆ ಅವರು ಕೆಳಗೆ ಬೀಳುವ್ರದಕ್ಕೆ ಇನ್ನೇನುಬೇಕು? ತರುಣ ಸ್ತ್ರೀಯರುಗಳಿರಾ, ಸಂಸಾರವೆಂಬ ಪೇಟೆಯಲ್ಲಿ ನೀವು ಈಗ ತಾನೇ ಪ್ರವೇಶಿಸಿದ್ದೀರಿ. ಇಲ್ಲಿ ಗಂಟುಕಳ್ಳರೂ ಮೋಸಗಾರರೂ ಬಹಳ ಜನರಿದ್ದಾರೆ. ಅವರು ನಿಮ್ಮನ್ನು ಸುಲಿದುಕೊಂಡು ಹೋಗುತ್ತಾರೆ. ಆದುದರಿಂದ ಬಹಳ ಎಚ್ಚರಿಕೆಯಿಂದಿರಬೇಕು. ಈ ಪೇಟೆಯಲ್ಲಿ ಎರಡು ದಾರಿಗಳಿವೆ: ಒಂದು ಒಳ್ಳೆಯದಾರಿ, ಇನ್ನೊಂದು ಕೆಟ್ಟದಾರಿ. ಒಳ್ಳೆಯದಾರಿಯಲ್ಲಿ ನೀವು ಹೋದರೆ ಮುಂದೆ ನಿಮಗೆ ಶ್ರೇಯಸ್ಸಾಗುತ್ತದೆ; ಕೆಟ್ಟದಾರಿಯಲ್ಲಿ ಹೋದರೆ ಏನಾಗುತ್ತೆಂಬುದನ್ನು ನಾನು ಹೇಳತಕ್ಕ ಅವಶ್ಯಕವಿಲ್ಲ. ಒಳ್ಳೆಯ ದಾರಿಯು ಸರಳವಾಗಿಯೂ, ಪ್ರಶಸ್ತವಾಗಿಯೂ, ಸುಖದಾಯಕವಾಗಿಯೂ ಇದೆ. ನೀವು ಯಾವ ದಾರಿಯನ್ನು ಹಿಡಿಯಬೇಕೋ ಅದನ್ನು ಕುರಿತು ಮೊದಲು ವಿಚಾರ ಮಾಡಬೇಕು. ಒಳ್ಳೆಯದಾರಿಯನ್ನು ಹಿಡಿವ ಜನರು ಧನವನ್ನೂ ಮಾನವನ್ನೂ ಸುಖವನ್ನೂ ಸಂಪಾದಿಸಿಕೊಂಡು ಪ್ರಪಂಚದಲ್ಲಿ ತೃಪ್ತರಾಗಿ ತಮ್ಮ ಕೀರ್ತಿಯನ್ನು ಮೆರೆಯಿಸುತ್ತಾರೆ. ಇದಕ್ಕೆ ವಿರೋಧವಾಗಿ ನಡೆದವರು ತಮ್ಮ ಸರ್ವಸ್ವವನ್ನೂ ಕಳೆದುಕೊಂಡು ಜೀವನ್ಮೃತರಂತೆ ಇರುತ್ತಾರೆ. ಈ ಒಳ್ಳೆಯದಾರಿಯನ್ನು ನೀವೂ ಹಿಡಿದು ಹೋಗಬೇಕಾಗಿ ಇರುವುದರಿಂದ ಹಿಂದೆ ಮುಂದೆ ಚೆನ್ನಾಗಿ ಆಲೋಚನೆಮಾಡಿ ನಡೆಯಬೇಕು. ಈಗಿನ ನಿಮ್ಮ ನಡತೆಗೆ ಅನುಸಾರವಾಗಿ ಮುಂದೆ ಸುಖದುಃಖಗಳಾಗಲಿ, ಮಾನಾಪಮಾನಗಳಾಗಲಿ, ಕೀರ್ತ್ಯಪಕೀರ್ತಿಗಳಾಗಲಿ, ಸಂಭವಿಸುವುವೆಂದು ನೀವು ಖಂಡಿತವಾಗಿ ತಿಳಿಯಬೇಕು. ಈಗ ಎಂಥ ಬೀಜವನ್ನು ಬಿತ್ತುತ್ತೀರೋ ಮುಂದೆ ಅದಕ್ಕೆ ಅಂಥ ಫಲವನ್ನು ಪಡೆಯುತ್ತೀರಿ. ನೀವು ಬೇವಿನ ಬೀಜವನ್ನು ಬಿತ್ತಿ, ಮಾವಿನ ಹಣ್ಣು ಬೇಕೆಂದರೆ ಸರ್ವಥಾ ದೊರೆಯಲಿಕ್ಕಿಲ್ಲ. ಆದುದರಿಂದ ನೀವು ಬುದ್ಧಿಯಿಂದ ಪರಿಣಾಮವನ್ನು ತಿಳಿವ ವ್ಯವಸಾಯ ಮಾಡಬೇಕು. ವೃದ್ಧರಸೇವೆಯನ್ನು ನೀವು ಮಾಡಿದರೆ ಅವರಲ್ಲಿ ನಿಮಗೆ ಅನೇಕ ಸದುಪದೇಶಗಳು ದೊರೆಯುತ್ತವೆ. ವೃದ್ಧರೆಂದರೆ ಕೇವಲ ತಲೆ ನರೆತವರೆಂದು ತಿಳಿಯಬಾರದು. ಬಿಳಿಯ ಕೂದಲು ಬಂದು ಜ್ಞಾನಮಾತ್ರವಿಲ್ಲದವನಿಗೆ ವೃದ್ಧನೆಂದು ಹೇಳಿದರೆ ವೃದ್ಧ ಎಂಬ ಶಬ್ದಕ್ಕೆ ಅವಮಾನ ಮಾ

ಡಿವಂತೆ ಆಗುತ್ತದೆ. ಅಂಥವರನ್ನು ವಯೋವೃದ್ಧರೆನ್ನಬೇಕು. ಪರಿಣಾಮದರ್ಶಿಗಳಾಗಿಯೂ, ದೂರದರ್ಶಿಗಳಾಗಿಯೂ, ಸಚ್ಚರಿತ್ರರಾಗಿಯೂ ಶಾಸ್ತ್ರವನ್ನು ತಿಳಿದವರಾಗಿಯೂ, ಇರುವ ವೃದ್ಧರ ಸೇವೆಯನ್ನು ಮಾಡದೆ ಇರುವವನು ಬಹುವಿದ್ಯೆಯನ್ನು ಕಲಿತಾಗ್ಯೂ ಜ್ಞಾನಿ ಎನಿಸಿಕೊಳ್ಳುವುದಿಲ್ಲ. ಇಂಥ ಜ್ಞಾನ ವೃದ್ಧರಾದವರ ಶುಶ್ರೂಷೆ ಮಾಡುವ ಸಂಘಟನೆ ನಿಮಗೆ ಬೀಳದೆ ಇದ್ದ ಪಕ್ಷದಲ್ಲಿ ಅವರು ಬರೆದು ಇಟ್ಟಿರುವ ಗ್ರಂಥಗಳನ್ನಾದರೂ ನೋಡಿ ಅದರಲ್ಲಿ ಉಪದೇಶಮಾಡಿರುವಂತೆ ಆಚರಿಸಬೇಕು. ನೀವು ಓದಿದ ಪುಸ್ತಕಗಳಲ್ಲಿರುವ ಸದುಪದೇಶಗಳು ನಿಮ್ಮ ಮನಸ್ಸಿಗೆ ಹತ್ತಿ ಅದರಂತೆ ನಿಮ್ಮ ಆಚರಣೆ ಇರದೆ ಇದ್ದ ಪಕ್ಷದಲ್ಲಿ ಹಾಗೆ ಲಕ್ಷಾವಧಿ ಪುಸ್ತಕಗಳನ್ನು ಓದಿದರೂ ಫಲವಿಲ್ಲ.

ಯೌವನಸ್ಥರ ಮನಸ್ಸಿನಲ್ಲಿ ಲೋಭವೆಂಬ ಭಯಂಕರವಾದ ಶತ್ರುವಿರುತ್ತಾನೆ. ಸ್ವಲ್ಪ ವಿಷಯದಲ್ಲಿ ಲೋಭಮಾಡಿ, ತಮ್ಮ ಯಾವತ್ಸುಖವನ್ನೂ ಕಳೆದುಕೊಂಡು ಪ್ರಾಣವನ್ನೂ ಸಹ ಬಿಟ್ಟವರ ದೃಷ್ಟಾಂತಗಳು ಸಾವಿರಾರು ದೊರೆಯಬಹುದು. ಆದುದರಿಂದ ನೋಡುವುದಕ್ಕೆ ಮಧುರವಾಗಿಯೂ, ಪರಿಣಾಮದಲ್ಲಿ ಭಯಂಕರವಾಗಿಯೂ, ಇರುವ ಲೋಭವನ್ನೂ ಮಾಡಬಾರದು. ನಿಮ್ಮ ನಡತೆಯನ್ನು ಅತ್ಯಂತ ಪವಿತ್ರವಾಗಿ ಮಾಡಿಕೊಳ್ಳುವುದರಲ್ಲಿ ನೀವು ಆಸಕ್ತರಾಗಿರಬೇಕು. ನಿರ್ಮಲವಾದ ನಡತೆಗೆ ಸರಿಯಾದ ಧನವು ಪ್ರಪಂಚದಲ್ಲಿ ಇನ್ನೊಂದಿಲ್ಲ. ಆದುದರಿಂದ ಅದನ್ನು ಎಲ್ಲರೂ ಜಾಗರೂಕತೆಯಿಂದ ಕಾಪಾಡಿಕೊಳ್ಳಬೇಕು. ಹೂವಿಗೆ ಗಿಡದ ಮೇಲೆ ಇರುವವರೆಗೂ ಕಾಂತಿ ಇರುತ್ತದೆ. ಅದು ಕೆಳಗೆ ಬಿದ್ದಕೂಡಲೇ ಬಾಡಿ ಹೋಗುತ್ತದೆ. ಅನಂತರ ಅದು ಎಷ್ಟು ಸುಗಂಧವುಳ್ಳುದಾದರೂ ಅದನ್ನು ತುಳಿದು ಹಾಕುತ್ತಾರೆ. ಆಮೇಲೆ ಅದನ್ನು ಕಣ್ಣೆತ್ತಿ ನೋಡುವುದು ಸಹ ಇಲ್ಲ. ಹಾಗೆಯೇ ಮನುಷ್ಯನಲ್ಲಿ ಎಷ್ಟು ಗುಣಗಳಿದ್ದಾಗ್ಯೂ ಅವನ ನಡತೆ ಪವಿತ್ರವಾಗಿ ಇರುವವರೆಗೆ ಅವನಿಗೆ ಮರ್ಯಾದೆ ನಡೆಯುತ್ತದೆ. ಅವನ ನಡತೆಗೆ ಕಳಂಕ ಹತ್ತಿದಕೂಡಲೇ ಅವನನ್ನು ಆರೂ ಮಾತನಾಡಿಸುವುದಿಲ್ಲ. ನಾಚಿಕೆಯು ಭಾರದಿಂದ ಅವನಿಗೆ ತಲೆಯನ್ನು ಎತ್ತಲಿಕ್ಕೆ ಕೂಡ ಆಗುವುದಿಲ್ಲ. ಮನುಷ್ಯನ ಮಾನವು ಆವ ಕಾರಣದಿಂದಾಗಲೀ ಒಂದುಸಾರಿ ಹೋದ

ಮೇಲೆ ತಿರುಗಿ ಬರುವುದಿಲ್ಲ. ಅದರಲ್ಲಿಯೂ ಭ್ರಷ್ಟವಾದ ನಡತೆಯುಳ್ಳ ಮನುಷ್ಯನಾದರೆ ಇನ್ನೂ ವಿಶೇಷ. ಅಂಥವನನ್ನು ಜನರು ಸೇರಿ ಒಂದುವೇಳೆ ದೊಡ್ಡ ಪದವಿಗೆ ಏರಿಸಿದಾಗ್ಯೂ ಅವನು ಬರುತ್ತಾ ಬರುತ್ತಾ ತೇಜೋವಿಹೀನನಾಗುತ್ತಾನೆ. ಅವನು ಮಾಡಿದ ದುಷ್ಕರ್ಮದ ಪಶ್ಚಾತ್ತಾಪವು ಹಗಲೂ ರಾತ್ರಿಯೂ ಅವನನ್ನು ತಿನ್ನುತ್ತಿರುತ್ತದೆ. ಅವನಿಗೆ ಮೇಲೆ ರಾಜಭೋಗಗಳಿದ್ದಾಗ್ಯೂ ಮನಸ್ಸಿನಲ್ಲಿ ವ್ಯಾಕುಲತೆ ತಪ್ಪುವುದಿಲ್ಲ. ಒಂದು ಸಲ ಹಿಡಿದ ದುರಭ್ಯಾಸವನ್ನು ಬಿಡಲಿಕ್ಕೆ ಆಗುವುದಿಲ್ಲ. ತಮ್ಮ ಕೆಟ್ಟನಡತೆಯಿಂದ ಕಳೆದುಕೊಂಡ ಪದವಿಯನ್ನು ತಿರುಗಿ ಸಂಪಾದಿಸುವುದಕ್ಕೆ ಪ್ರಯತ್ನ ಮಾಡಿದಾಗ್ಯೂ ಅದು ಸಿಕ್ಕುವುದಿಲ್ಲ. ಗಿಡದಿಂದ ಬಿದ್ದ ಹೂವನ್ನು ತಿರುಗಿ ಅದರ ಸ್ಥಾನದಲ್ಲಿ ಇಡಲಿಕ್ಕೆ ಹೋದರೆ ನಿಲ್ಲುವುದೆ? ನೀಚ ಕುಲದಲ್ಲಿ ಹುಟ್ಟಿದ್ದಾಗ್ಯೂ ನಡತೆ ಒಳ್ಳೆಯದಾಗಿದ್ದರೆ ಅವನನ್ನು ಜನರು ಪುರಸ್ಕರಿಸುತ್ತಾರೆ. ಆದುದರಿಂದ ನಿರ್ಮಲವಾದ ನಡತೆಯ ಯೋಗ್ಯತೆಯು ಪ್ರಪಂಚದಲ್ಲಿ ಇತರ ಯಾವ ಗುಣಕ್ಕೂ ಇಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಇಂಥ ಒಳ್ಳೆಯ ನಡತೆಯನ್ನು ಸಂಪಾದಿಸಬೇಕಾದರೆ ಬಹು ಶ್ರಮಪಡಬೇಕಾದ ಅಥವಾ ಹಣವನ್ನು ವೆಚ್ಚಮಾಡಬೇಕಾದ ಪ್ರಕೃತವಿಲ್ಲ. ಧರ್ಮಕ್ಕೆ ಅನುಸಾರವಾಗಿ ಮರ್ಯಾದೆಯಿಂದ ನಡೆದರೆ ಸಾಕು. ಧರ್ಮವಿರುದ್ಧವಾಗಿ ನಡೆದವರು ಭೂಮಿಯಲ್ಲಿರುವ ಸರ್ವದ್ರವ್ಯವನ್ನು ಕೊಟ್ಟರೂ ಅವರಿಗೆ ನಿರ್ಮಲವಾದ ನಡತೆಯೆಂಬುದು ಬರುವುದಿಲ್ಲ. ಇಂಥ ದುರ್ಲಭವಾದ ಧನವನ್ನಿಟ್ಟುಕೊಳ್ಳುವುದು ನಿಮ್ಮ ಸ್ವಾಧೀನದಲ್ಲಿರುವಾಗ ನೀವು ಅದರ ವಿಷಯದಲ್ಲಿ ಅಶ್ರದ್ಧೆಯನ್ನು ಮಾಡಬಾರದು. ನೀವು ಹುಚ್ಚರಾಗಿ ಒಂದುವೇಳೆ ಅಶ್ರದ್ಧೆಯನ್ನು ಮಾಡಿದರೆ ಮುಂದೆ ಬಹಳ ಶ್ರಮ ಪಡಬೇಕಾಗುವುದು.

ನೀವು ಈಗ ಯೌವನಮದದಿಂದ, ನಿಮ್ಮ ರೂಪವೂ ಯೌವನವೂ ಮನಸ್ಸಿನ ಉಲ್ಲಾಸವೂ ಶಾಶ್ವತವಾಗಿ ಹೀಗೆಯೇ ಇರುತ್ತವೆಂದು ತಿಳಿಯುತ್ತೀರಿ. ಇದು ತಪ್ಪು. ಆರಿಗೂ ಆವುದೂ ಶಾಶ್ವತವಲ್ಲವೆಂಬುದನ್ನು ನೀವೇ ಕಣ್ಣಿನಿಂದ ನೋಡುತ್ತೀರಿ. ಬಾಲ್ಯವೇ ಮೊದಲಾದ ಅವಸ್ಥೆಗಳೂ ಹಾಗೆಯೇ ನಶ್ವರವಾಗಿವೆ. ಆವಮದದಿಂದ ನೀವು

ಇದು ಒಳ್ಳೆಯದು ಇದು ಕೆಟ್ಟದು ಎಂದು ವಿಚಾರಮಾಡದೆ, ಮದಿಸಿದ ಆನೆಯಹಾಗೆ ಮನಸ್ಸಿಗೆ ತೋರಿದಕಡೆಗೆ ತಿರುಗುತ್ತಾ ಇದ್ದೀರೋ ಆ ಯೌವನವು ಎಷ್ಟುಬೇಗ ಕಳದು ಹೋಗುತ್ತದೆ ಎಂಬುದು ನಿಮಗೆ ತಿಳಿದು ಇದೆಯೇ? ಮಳೆಗಾಲದಲ್ಲಿ ಹೆಚ್ಚಾಗಿ ಮಳೆಬಿದ್ದು ಒಂದು ಸಣ್ಣಹಳ್ಳ ತುಂಬಿ ಹರಿವಾಗ ಅದು ನೋಡುವುದಕ್ಕೆ ಚೆನ್ನಾಗಿ ಕಾಣುತ್ತದೆ. ಆಗ ಅದರಲ್ಲಿ ಆನೆಯಂಥ ದೊಡ್ಡ ಪ್ರಾಣಿಯನ್ನಾದರೂ ತೇಲಿಸಿಕೊಂಡು ಹೋಗುವ ಬಲವಿರುತ್ತದೆ. ಅದರ ವೇಗದಿಂದ ಒಂದೊಂದು ಸಲ ದೊಡ್ಡದೊಡ್ಡ ಸೇತುಗಳೂ ಕಿತ್ತುಹೋಗುತ್ತವೆ. ಪರಂತು ಅದರಲ್ಲಿ ಹರಿದುಹೋಗುವ ನೀರು ತಿರುಗಿ ಬರುವುದಿಲ್ಲ. ಅದರ ಅಂದ, ಆನೆಯನ್ನು ತೇಲಿಸಿಕೊಂಡು ಹೋಗುವ ಮತ್ತು ಸೇತುಗಳನ್ನು ಕೀಳುವ ಬಲ, ಅದರ ಘೋರ ಶಬ್ದ, ಇವುಗಳಲ್ಲಿ ಯಾವುದೂ ನಿಲ್ಲುವುದಿಲ್ಲ. ದುರ್ವಾಸನೆಯು ಕೆಸರುಮಾತ್ರ ಅಲ್ಲಲ್ಲಿ ನಿಲ್ಲುತ್ತದೆ. ನಿಮ್ಮ ಯೌವನಾವಸ್ಥೆಯ ಸ್ಥಿತಿಯೂ ಹೀಗೆಯೇ ಇದೆ. ನಿಮ್ಮ ಶರೀರವೆಂಬ ಹಳ್ಳದ ಯೌವನವೆಂಬ ನೀರು ಧರ್ಮವೆಂಬ ಸೇತುವನ್ನು ಕೀಳದಂತೆ ಏರ್ಪಾಡು ಮಾಡಬೇಕು. ನಿಮ್ಮ ಆಯುಷ್ಯವೆಂಬ ಸರೋವರದಲ್ಲಿ ಸಚ್ಚರಿತ್ರವೆಂಬ ನೀರನ್ನು ಅಕ್ಷಯವಾಗಿ ನಿಲ್ಲಿಸಿಕೊಳ್ಳುವುದಕ್ಕೋಸ್ಕರ ಅದರ ಸುತ್ತಲೂ ಮಿತಾಚರಣೆಯೆಂಬ ಏರಿಯನ್ನು ಹಾಕಬೇಕು. ಅದರಲ್ಲಿ ಸದ್ಗುಣವೆಂಬ ಕಮಲಗಳು ಹುಟ್ಟಿ ಆ ಸರೋವರಕ್ಕೆ ಅನಿರ್ವಚನೀಯವಾದ ಕಾಂತಿಯನ್ನು ಉಂಟುಮಾಡುತ್ತದೆ. ಪರಂತು ಈ ಮೇರೆಗೆ ಏರಿಹಾಕಿ ಕಟ್ಟದೆ ಇದ್ದರೆ ಅದರಲ್ಲಿರುವ ನೀರೆಲ್ಲಾ ಬತ್ತಿ ದುರ್ಗುಣವೆಂಬ ಕೆಸರುಮಾತ್ರ ನಿಲ್ಲುವುದು. ಅದಕ್ಕೆ ದುರ್ವಾಸನೆ ಹುಟ್ಟಿ ಬಳಿಯಲ್ಲಿ ಯಾರೂ ಸೇರದಂತೆ ಆಗುತ್ತದೆ. ನೀವು ಮಿತಾಚರಣೆಯಿಂದ ನಿಮ್ಮ ನಡತೆಯನ್ನು ಒಳ್ಳೆಯದನ್ನಾಗಿಮಾಡಿಕೊಂಡು ತನ್ಮೂಲಕವಾಗಿ ಸಮುದ್ರದಂತೆ ಗಂಭೀರವಾಗಿ ಇರಬೇಕು. ಹೀಗಿರಬೇಕಾದರೆ ಏನುಮಾಡಬೇಕೆಂಬುದನ್ನು ಇನ್ನು ಮುಂದೆ ವಿವರಿಸುತ್ತೇನೆ.

(೧) ನೀವು ನಿರುದ್ಯೋಗರಾಗಿ ಯಾವಾಗಲೂ ಕುಳಿತಿರಬಾರದು. ಆವುದಾದರೂ ಒಳ್ಳೆಯ ಕೆಲಸವನ್ನು ಮಾಡುತ್ತಾ ಇರಬೇಕು. ಇದರಿಂದ ನಿಮ್ಮ ಮನಸ್ಸು ಇತರ ವಿಷಯಗಳ ಕಡೆಗೆ

ಹೋಗುವುದಕ್ಕೆ ಅವಕಾಶವಿರುವುದಿಲ್ಲ. ಪ್ರಾಯೇಣ ಕೆಲಸವಿಲ್ಲದೆ ಪಾಲುಮಾರಿಕೆಯಿಂದ ಹೊತ್ತು ಕಳೆವವರು ಕೆಟ್ಟ ನಡತೆಯುವರಾಗುತ್ತಾರೆ. ಆವುದಾದರೂ ಒಂದು ವಿಷಯದಲ್ಲಿ ಇರಬೇಕಾದುದು ಮನಸ್ಸಿನ ಧರ್ಮವಾದುದರಿಂದ ಅದು ಸುಮ್ಮನಿರಲಾರದು. ಆದುದರಿಂದ ಅದನ್ನು ಒಳ್ಳೆಯ ಕೆಲಸದಲ್ಲಿ ಅಂಟಿಸದೆ ಬಿಟ್ಟುಬಿಟ್ಟರೆ ಅದಕ್ಕೆ ಒಳ್ಳೆಯದು ಕೆಟ್ಟದೆಂಬುದು ತಿಳಿಯದೆ ಕುರುಡನಂತೆ ಸಿಕ್ಕಿದಕಡೆಗೆ ಹೋಗಿ ನೀಚಕಾರ್ಯದಲ್ಲಿ ಬೀಳುವುದು. ನೀರು ಹೇಗೆ ದಾರಿ ಸಿಕ್ಕಿದಕಡೆಗೆ ಹೋಗುವುದೋ ಹಾಗೇ ಮನಸ್ಸೂ ಸಿಕ್ಕಿದ ಕಡೆಗೆ ಹೋಗುವುದು. ಆದುದರಿಂದ ಜನರು ಜಾಗರೂಕರಾಗಿ ತಮ್ಮ ಮನಸ್ಸನ್ನು ಒಳ್ಳೆಯ ಕಾರ್ಯ ವಲ್ಲಿ ಅಂಟಿಸಬೇಕು. ಅದನ್ನು ಸುಮ್ಮನಿರಲಿಕ್ಕೆ ಬಿಡಬಾರದು

(೨) ನೀವು ಆತ್ಮಸಂಯಮನಮಾಡುವ ಅಭ್ಯಾಸಮಾಡಬೇಕು. ಇದರಿಂದ ನಿಮ್ಮ ಯಾವ ಕೆಲಸವೂ ಮಿತಿಮೀರಿ ಹೋಗುವುದಿಲ್ಲ. ನಿಮ್ಮ ಮನಸ್ಸಿನಲ್ಲಿ ಆವುದಾದರೂ ಒಂದು ಕೆಲಸ ಮಾಡಬೇಕೆಂದು ಅಪೇಕ್ಷೆಯುಂಟಾಗಿ ಅದನ್ನು ಮಾಡುವುದಕ್ಕೆ ನೀವು ಯತ್ನಿಸಿದಾಗ ನಿಮ್ಮ ಹಿರಿಯರು, ಗುರುಗಳು, ಅಥವಾ ನಿಮ್ಮ ಸಂರಕ್ಷಕರು, ಅದನ್ನು ಮಾಡುವುದರಿಂದ ನಿಮಗೆ ಅಹಿತವಾಗುತ್ತದೆಯೆಂದು ಹೇಳಿದರೆ, ಅದು ನಿಮಗೆ ಎಷ್ಟು ಪ್ರೀತಿಯ ಕೆಲಸವಾಗಿದ್ದರೂ ಅದನ್ನು ಬಿಟ್ಟುಬಿಡಬೇಕು. ನೀವು ಆವಕೆಲಸ ಮಾಡಬೇಕಾದರೂ ಹಿರಿಯರ ಅಪ್ಪಣೆಯನ್ನೂ ಜ್ಞಾನಿಗಳ ಆಲೋಚನೆಯನ್ನೂ ಕೇಳಿ ಮಾಡಬೇಕು. ನಿಮ್ಮ ಸ್ವಬುದ್ಧಿಯಿಂದಲೇ ಮಾಡಬಾರದು. ನಮಗೆ ತಿಳಿದುದಕ್ಕಿಂತಲೂ ಇತರರು ಏನು ಹೆಚ್ಚಾಗಿ ಹೇಳುತ್ತಾರೆ; ಇವರನ್ನು ಯಾಕೆ ಕೇಳಬೇಕು—ಎಂದು ನಿಮ್ಮ ಮನಸ್ಸಿಗೆ ತೋಚಬಹುದು; ಅದು ತಪ್ಪು. ಒಳ್ಳೆಯದು ಕೆಟ್ಟದು ಎಂದು ನಿಶ್ಚಯಮಾಡುವಷ್ಟು ನಿಮ್ಮ ಬುದ್ಧಿ ಪಕ್ವವಾಗಿರುವುದಿಲ್ಲ. ನಿಮ್ಮ ಹಿರಿಯರು ಮತ್ತೂ ಜ್ಞಾನಿಗಳು ಸಹ ಬಹಳ ಪೆಟ್ಟು ತಿಂದವರಾಗಿ ಇರುವುದರಿಂದ ನಿಮ್ಮನ್ನು ಬುದ್ಧಿವಂತರನ್ನಾಗಿ ಮಾಡುವುದಕ್ಕೋಸ್ಕರ ಧರ್ಮವಿರುದ್ಧವಾಗಿ ನಡೆಯಬಾರದೆಂದು ನಿಮಗೆ ಹೇಳುತ್ತಾರೆ. ನೀವು ಅವರು ಹೇಳಿದುದನ್ನು ಕೇಳಿ ಅದರಂತೆ ನಡೆಯದೆ ಇದ್ದರೆ ನಿಮಗೆ ಕೇಡು ತಪ್ಪುವುದಿಲ್ಲ.

(೩) ನೀವು ವಿನಯವನ್ನು ಕಲಿಯಬೇಕು. ಲೋಕದಲ್ಲಿ ವಿನಯಕ್ಕೆ ಸರಿಯಾದ ಸ್ನೇಹಿತನು ಯಾರೂ ಇಲ್ಲ. ಮನುಷ್ಯನಿಗೆ ದೇವರು ಕೊಟ್ಟಿರುವ ಗುಣಗಳಲ್ಲಿ ವಿನಯವೆಂಬುದು ಬಹಳ ಶ್ರೇಷ್ಠ ವಾದುದೆಂದು ಕಾಣುತ್ತದೆ. ಆದುದರಿಂದ ವಿನಯವೆಂಬ ರತ್ನದಿಂದ ಭೂಷಿತನಾದವನು ದೊಡ್ಡವನೆನಿಸಿಕೊಳ್ಳುತ್ತಾನೆ. ನೀವು ಸಹ ದೊಡ್ಡ ವರೆನಿಸಿಕೊಳ್ಳಬೇಕಾದರೆ ವಿನಯವನ್ನು ಕಲಿಯಬೇಕು. ವಿನಯ ವಿಲ್ಲದೆ ಇತರ ದೊಡ್ಡ ಗುಣಗಳಿದ್ದರೂ ಅವುಗಳಿಂದ ಉಪಯೋಗವೇನೂ ಇಲ್ಲ. ಅಹಂಕಾರವು ಮನುಷ್ಯನಿಗೆ ದೊಡ್ಡ ಶತ್ರುವೆಂದು ತಿಳಿಯ ಬೇಕು. ಮನುಷ್ಯನು ತಗ್ಗಿ ನಡೆವವರೆಗೂ ಅಭಿವೃದ್ಧಿಗೆ ಬರುತ್ತಾನೆ. ಪರಂತು ಅವನ ಮನಸ್ಸಿನಲ್ಲಿ ಅಹಂಕಾರವು ಪ್ರವೇಶಮಾಡಿದ ಕೂ ಡಲೇ ಅವನು ಕೆಳಗೆ ಬೀಳುವ ಲಕ್ಷಣಗಳು ಕಾಣಿಸುತ್ತವೆ; ಕಾಲ ಕ್ರಮೇಣ ಅವನು ನಾಶವನ್ನು ಹೊಂದುತ್ತಾನೆ. ಇತಿಹಾಸವನ್ನೂ ಇತರ ಗ್ರಂಥಗಳನ್ನೂ ಓದುವುದರಿಂದಲೂ, ಪ್ರತ್ಯಕ್ಷವಾಗಿ ಕಾಣುವ ಲೋಕದ ಮತ್ತು ನಿಮ್ಮ ಅವಸ್ಥೆಗಳನ್ನು ವಿಚಾರಮಾಡುವುದರಿಂದಲೂ, ಇಂಥ ದೃಷ್ಟಾಂತಗಳು ಸಾವಿರಾರು ಕಾಣಬರುತ್ತವೆ. ಆದುದರಿಂದ ಅಹಂಕಾರದಿಂದ ಉದತರಾಗುವುದು ಮೂರ್ಖತನವೇ ಸರಿ. ಅನಂತ ವಾಗಿಯೂ ಅಚಿಂತ್ಯವಾಗಿಯೂ ಇರುವ ಈಶ್ವರ ಸೃಷ್ಟಿಯಲ್ಲಿ ಎಂಥೆಂಥ ದೊಡ್ಡ ಪದಾರ್ಥಗಳಿವೆ, ಎಂಥೆಂಥ ಪ್ರಾಣಿಗಳಿವೆ ಎಂಬುದನ್ನೂ, ಇದು ಒಳ್ಳೆಯದು, ಇದು ಕೆಟ್ಟದು ಎಂಬ ನಿರ್ಣಯವನ್ನೂ ತಿಳಿದುಕೊಳ್ಳುವು ದಕ್ಕೆ ಎಂಥವನಿಗೂ ಅಸಾಧ್ಯವಾಗಿದೆ. ಹೀಗಿರುವಲ್ಲಿ ನಾನು ತಿಳಿದಿದ್ದೇನೆ; ನಾನು ದೊಡ್ಡವನು; ಎಂದು ಆರೂ ಅಹಂಕಾರ ಪಡಬಾರದು. ಎಲ್ಲ ರಿಗೂ ಆವುದಾದರೂ ಒಂದು ವಿಷಯದಲ್ಲಿ ಕಳಂಕವು ಅಥವಾ ಭಯವು ಇದ್ದೇ ಇರುತ್ತದೆ. ಆದುದರಿಂದ ಅಹಂಕಾರಕ್ಕೆ ಆಸ್ಪದವೆಲ್ಲಿ? ನಮ್ಮ ನಿಮ್ಮಂಥ ಬಡಪಾಯಿಗಳ ಗತಿಹಾಗಿರಲಿ; ದೊಡ್ಡದೊಡ್ಡ ಸಾರ್ವಭೌ ಮರು ಕುಬೇರನಂಥ ಧನವಂತರು, ಬೃಹಸ್ಪತಿಯಂಥ ವಿದ್ವಾಂಸರು ಇಂಥವರ ಅಹಂಕಾರವೇ ಮುರಿದು ಹೋಗಿ ಇದೆ. ಪ್ರಪಂಚದಲ್ಲಿ ಎಲ್ಲಿ ನೋಡಿದರೂ ವಿನಯಕ್ಕೆ ಜಯವೂ, ಅಹಂಕಾರಕ್ಕೆ ಪರಾಜಯವೂ ನಿಮಗೆ ಕಾಣಬರುತ್ತವೆ.

ಮನುಷ್ಯನಲ್ಲಿ ವಿನಯವಿದ್ದರೆ ಅದರಿಂದ ಇತರ ಗುಣಗಳೂ ಸುಖವೂ ಯಶಸ್ಸೂ ವೃದ್ಧಿಯಾಗುತ್ತವೆ. ವಿನಯಶಾಲಿಯಾದವನು ಉದ್ಧತತನದಿಂದ ಯಾರಲ್ಲಿಯೂ ಕಟ್ಟಮಾತನಾಡುವುದಿಲ್ಲ. ಎಲ್ಲರಲ್ಲಿ ಯೂ ನಮ್ರನಾಗಿ ಪ್ರೇಮದಿಂದ ನಡೆಯುತ್ತಾನೆ. ಆದುದರಿಂದ ಅವನನ್ನು ಜನರು ಪ್ರೀತಿಸುತ್ತಾರೆ. ಅವನ ಶತ್ರುವು ಸಹ ಅವನಿಗೆ ಮಿತ್ರನಾಗುತ್ತಾನೆ. ಅವನನ್ನು ಎಲ್ಲರೂ ಕೊಂಡಾಡುತ್ತಾರೆ. ಲೋಕದಲ್ಲಿ ಬಹಳ ಒಳ್ಳೆಯವನೆನಿಸಿಕೊಂಡು ಪ್ರತಿಷ್ಠೆಯನ್ನು ಪಡೆದುಕೊಳ್ಳಬೇಕಾದರೆ ಎಲ್ಲರಲ್ಲಿಯೂ ನಮ್ರನಾಗಿರಬೇಕು. ನಮ್ರತೆಯಿಂದಲೇ ದೊಡ್ಡಪದವಿ ದೊರೆವುದಲ್ಲದೆ ಅದರಿಂದ ಸ್ವತಃ ಏವ ಇತರ ಎಲ್ಲ ವಿಷಯಗಳೂ ಸ್ವಾಧೀನವಾಗುತ್ತವೆ. ಯಾರಾದರೂ ನಿಮ್ಮನ್ನು ನಿಂದಿಸಿದರೆ ನೀವು ಸಿಟ್ಟುಮಾಡಿಕೊಳ್ಳಬಾರದು. ನಿಮ್ಮಲ್ಲಿ ನಿಂದಾಸ್ಪದವಾದ ದೋಷಗಳೇನಾದರೂ ಇದ್ದರೆ ಮೊದಲು ಯೋಚಿಸಿ ತಿಳಿದುಕೊಂಡು ಅವುಗಳನ್ನು ಕಳೆದುಕೊಳ್ಳುವುದಕ್ಕಾಗಿ ಪ್ರಯತ್ನಮಾಡಬೇಕು. ನಿಮ್ಮನ್ನು ನಿಂದಿಸುವವನು ನಿಮ್ಮ ದೋಷಗಳನ್ನು ತೋರಿಸಿ ಕೊಟ್ಟುದಕ್ಕಾಗಿ ಅವನು ನಿಮಗೆ ಉಪಕಾರವನ್ನು ಮಾಡಿದನೆಂದೆಣಿಸಬೇಕು. ನಿಮ್ಮಲ್ಲಿ ದೋಷವಿಲ್ಲದಿದ್ದರೂ ನಿಂದಿಸಿದವನಲ್ಲಿ ನೀವು ಕೋಪವನ್ನು ಮಾಡದೆ ಪ್ರಸನ್ನರಾಗಿ ಮಾತನಾಡಬೇಕು. ನಿಮಗೆ ಅಪಕಾರವನ್ನು ಮಾಡಿದವನಿಗೆ ಅಪಕಾರವನ್ನು ಮಾಡಲೆಣಿಸದೆ ಉಪಕಾರವನ್ನೇ ಮಾಡಬೇಕು. ಇದರಿಂದ ಅವರಿಗೇ ನಾಚಿಕೆಯುಂಟಾಗಿ, ತಾವು ಮಾಡಿದ ಕೆಲಸಕ್ಕಾಗಿ ಪಶ್ಚಾತ್ತಾಪಪಟ್ಟು, ನಿಮ್ಮಲ್ಲಿ ಒಳ್ಳೆಯತನದಿಂದ ನಡೆಯುತ್ತಾರೆ. ಬುದ್ಧಿವಂತರಾದ ಜ್ಞಾನಿಗಳು ಉದ್ಧತರಾಗಿಯೂ, ಉಗ್ರರಾಗಿಯೂ, ಅಹಂಕಾರಿಗಳಾಗಿಯೂ, ಎಂದಿಗೂ ಇರುವುದಿಲ್ಲ. ಯಾವಾಗಲೂ ವಿನೀತರಾಗಿಯೂ ನಮ್ರರಾಗಿಯೂ ಇರುತ್ತಾರೆ. ಮಾವಿನಗಿಡ ಮುಂತಾದ ಫಲವೃಕ್ಷಗಳು ಕೂಡಾ ದೊಡ್ಡವುಗಳಾದರೂ ಫಲಭರಿತವಾದಾಗ ಬಗ್ಗುತ್ತವೆ. ಹಾಗೆಯೇ ಮೇಘಗಳು ನೀರಿನಿಂದ ತುಂಬಿದರೆ ನಮ್ರವಾಗುತ್ತವೆ ಅಹಂಕಾರದಿಂದ ಮತ್ತೊಬ್ಬರನ್ನು ಲಕ್ಷಿಸದೆ ಇರುವ ಮನುಷ್ಯನು ಎಷ್ಟು ಗುಣಾಢ್ಯನಾಗಿದ್ದರೂ, ಅವನನ್ನು ನೋಡಬೇಕೆಂಬ ಇಚ್ಛೆ ಕೂಡ ಆರಿಗೂ ಇರುವುದಿಲ್ಲ. ನಮ್ರತೆಯೆಂಬ ಗುಣವು, ನಮ್ರತೆಯು

ಳೆವವನನ್ನೂ ಅವನಿಗೆ ಸೇರಿದವನನ್ನೂ ಸಂತೋಷಪಡಿಸುತ್ತದೆ. ನಮ್ಮಿಂದ ಲೇನಾದರೂ ತಪ್ಪು ಕೆಲಸ ನಡೆದು ಅದಕ್ಕಾಗಿ ಇತರರು ಆಕ್ಷೇಪಿಸಿದಲ್ಲಿ, ನಾವು ಸಿಟ್ಟುಮಾಡಿಕೊಳ್ಳದೆ ಅದನ್ನು ಸ್ವೀಕರಿಸಿದರೆ, ಮುಂದೆ ಆಗುವ ಕಲಹವೇ ಮುಂತಾದ ಅನರ್ಥಗಳು ನಿವಾರಣೆಯಾಗುವುದಲ್ಲದೆ ನಮ್ಮ ತಪ್ಪಿಗೆ ತಕ್ಕ ದಂಡವೂ ತಪ್ಪಿಹೋಗುತ್ತದೆ. ಮತ್ತು ನಾವು ಆರಿಗೆ ನಮ್ರರಾಗಿರುವೆವೋ ಅವರಿಗೆ ನಮ್ಮಮೇಲೆ ಪ್ರೇಮವೂ ವಿಶ್ವಾಸವೂ ಇರುತ್ತವೆ.

(೪) ನಿಮ್ಮ ಹಿರಿಯರಿಗೂ ಗುರುಗಳಿಗೂ ಅವರಿಗೆ ಸಮಾನರಾದ ಇತರ ಜನರಿಗೂ ಯೋಗ್ಯವಾದ ಸನ್ಮಾನವನ್ನು ಮಾಡಬೇಕು. ಪೂಜ್ಯತೆಯಲ್ಲಿ ತಾಯಿತಂದೆಗಳು ದೇವರಿಗೆ ಎರಡನೆಯವರಾಗಿದ್ದಾರೆ. ನೀವು ಗಣ್ಯರಾಗಿ ನಾಲ್ವರಲ್ಲಿ ಪ್ರತಿಷ್ಠೆಯನ್ನು ಪಡೆದು ಸುಖವಾಗಿರುವುದು ನಿಮ್ಮ ತಾಯಿತಂದೆಗಳ ಮತ್ತು ನಿಮಗೆ ನೀತಿಮಾರ್ಗವನ್ನು ಉಪದೇಶಮಾಡಿದ ಗುರುಗಳ ಪ್ರಸಾದವಲ್ಲವೇ? ಹಾಗಿಲ್ಲದಿದ್ದರೆ ಈ ಜಗತ್ತಿನಲ್ಲಿ ಆರೂ ಗಣನೆಗೆ ತಾರದ ನಿಮ್ಮಂಥಾ ಪರಮಾಣುಗಳು ಎಷ್ಟಿಲ್ಲ. ನಿಮ್ಮ ತಂದೆತಾಯಿಗಳೂ ಗುರುಗಳೂ ನಿಮಗೆ ಮಾಡಿದ ಉಪಕಾರವನ್ನು ಸಂಪೂರ್ಣವಾಗಿ ತೀರಿಸುವುದಕ್ಕೆ ನಿಮ್ಮಿಂದ ಆಗುವುದಿಲ್ಲ. ಯಥಾಶಕ್ತಿ ಧರ್ಮಾನುಸಾರವಾಗಿ ಅವರ ಆಜ್ಞೆಯನ್ನನುಸರಿಸಿ ನಡೆದರೆ ಅವರಿಗೆ ಸ್ವಲ್ಪವಾದರೂ ಪ್ರತ್ಯುಪಕಾರ ಮಾಡಿದಂತಾಗುತ್ತದೆ. ನೀವು ಹಾಗೆ ಮಾಡದಿದ್ದರೆ ಲೋಕದಲ್ಲಿ ಜನ್ಮವೆತ್ತಿ ನಿಮ್ಮ ತಾಯಿಯನ್ನು ವ್ಯರ್ಥವಾಗಿ ದಣಿಸಿದಂತೆ ಆಗುತ್ತದೆ. ಹಿರಿಯರ ಎದುರಿಗೆ ಉದ್ಧತರಾಗಿ ಕೋಪದಿಂದ ಅವಾಚ್ಯವಾದ ಮಾತುಗಳನ್ನೂ ಸುಳ್ಳುಮಾತುಗಳನ್ನೂ ಆಡಬಾರದು. ಅವರಲ್ಲಿ ನಿಮ್ಮ ಕೋಪವನ್ನೂ ಅಹಂಕಾರವನ್ನೂ ತೋರಿಸಬಾರದು. ಅವರು ಹೇಳಿದುದನ್ನು ಕೇಳಿ ಮನಸ್ಸಿನಲ್ಲಿ ಇಟ್ಟುಕೊಂಡು ಅದರಂತೆ ನಡೆದರೆ ನಿಮಗೆ ಶ್ರೇಯಸ್ಸುಂಟಾಗುತ್ತದೆ. ನಿಮಗೆ ಶಕ್ತಿಯಿರುವವರೆಗೂ ಅವರ ಸೇವೆಯನ್ನು ಮಾಡುವುದರಲ್ಲಿ ಪಾಲುಮಾರಿಕೆಯನ್ನು ಮಾಡಬಾರದು. ನೀವು ಇರುವ ಸ್ಥಳಕ್ಕೆ ಹಿರಿಯರಾಗಲಿ ನಿಮ್ಮ ಪರಿಚಯವಿಲ್ಲದ ವಿದ್ವಾಂಸರಾಗಲಿ ಬಂದರೆ ಎದ್ದುನಿಂತು ಸನ್ಮಾನವನ್ನು ಮಾಡಬೇಕು. ಅವರು ಬರುವಾಗ ಎದುರಿಗೆ ಹೋಗಿ ಕರೆದುಕೊಂಡುಬಂದು ಹೋಗುವಾಗ ನಾಲ್ಕುಹೆಜ್ಜೆ ಅವರ

ಸಂಗಡ ಹೋಗಿ ಕಳುಹಿಸಬೇಕು. ಅವರಿಗೆ ನಮಸ್ಕಾರ ಮುಂತಾದ ಸನ್ಮಾನ ಸೂಚಕವಾದ ಉಪಚಾರಗಳನ್ನು ನಮ್ರತೆಯಿಂದ ಮಾಡಬೇಕು. ನಿಮಗೆ ಸಮಾನರಾದವರಿಗೂ ಯೋಗ್ಯವಾದ ಮರ್ಯಾದೆಗಳನ್ನು ಮಾಡಬೇಕು. ಯಾರಾದರೂ ನಿಮಗೆ ನಮಸ್ಕಾರವನ್ನು ಮಾಡಿದರೆ ನೀವು ಉದ್ಧತರಾಗಿ ತಲೆಯೆತ್ತಿ ನಿಲ್ಲದೆ, ನೀವು ಮಸ್ತಕವನ್ನು ತಗ್ಗಿಸಿ ನಮಸ್ಕಾರ ಮಾಡಬೇಕು. ನಮ್ಮ ದೇಶದಲ್ಲಿ ಜಾತಿಯನ್ನು ಮಾತ್ರ ನೋಡಿ ಸನ್ಮಾನಮಾಡುವ ಸಂಪ್ರದಾಯವಿದೆ. ಈಶ್ವರಸೃಷ್ಟಿಯಲ್ಲಿ ಸನ್ಮಾನಕ್ಕೆ ಜಾತಿ ಮುಖ್ಯವಲ್ಲ. ಗುಣವೇ ಮುಖ್ಯವಾದದು. ಒಂದುವೇಳೆ ನಿಮಗಿಂತಲೂ ದೊಡ್ಡಜಾತಿಯವನಲ್ಲಿ ಇಲ್ಲದೆ ಇರುವ ಸುಗುಣಗಳು ನಿಮಗಿಂತ ಸಣ್ಣ ಜಾತಿಯವನಲ್ಲಿ ಇರುತ್ತವೆ. ಆದುದರಿಂದ ನೀವು ಗುಣಾಢ್ಯರಿಗೆ ತಕ್ಕ ಸನ್ಮಾನ ಮಾಡುವುದು ಯುಕ್ತ. ನಿಮಗಿಂತ ವಯಸ್ಸಿನಲ್ಲಿ ಸಣ್ಣವರಾದರೂ ತಿಳುವಳಿಕೆಯಲ್ಲಿ ಹೆಚ್ಚಾಗಿದ್ದರೆ ಅವರನ್ನು ನಿಮಗಿಂತ ದೊಡ್ಡವರೆಂದೆಣಿಸಿ ಮರ್ಯಾದೆಯನ್ನು ಮಾಡಬೇಕು. ತಲೆ ನರೆತ ಮಾತ್ರದಿಂದಲೂ ಧನದಿಂದಲೂ ಮನುಷ್ಯನು ದೊಡ್ಡವನೆನಿಸಿಕೊಳ್ಳುವುದಿಲ್ಲ. ಜ್ಞಾನದಲ್ಲಿ ಹೆಚ್ಚಿದವನೇ ದೊಡ್ಡವನು. ಕೆಲವರು ನಿಮಗೆ ನಮಸ್ಕಾರ ಮಾಡತಕ್ಕುದೂ, ನೀವು ಅವರಿಗೆ ಆಶೀರ್ವಾದವನ್ನು ಮಾಡತಕ್ಕುದೂ, ಸಂಪ್ರದಾಯವಾಗಿದೆ. ಅಂಥ ಸಂದರ್ಭಗಳಲ್ಲಿ ನೀವು ಆಶೀರ್ವಾದ ಮಾಡಿದಮಾತ್ರದಿಂದ ಅವನಿಗೆ ಶ್ರೇಯಸ್ಸುಂಟಾಗುತ್ತದೆಯೆಂದು ತಿಳಿದುಕೊಂಡು "ಧನ ಧಾನ್ಯ ಸಮೃದ್ಧಿರಸ್ತು" ಮುಂತಾದ ವಾಕ್ಯಗಳಿಂದ ಆಶೀರ್ವಾದವನ್ನು ಮಾಡಬಾರದು. ಬಹಳ ನಮ್ರರಾಗಿ ದೇವರು ತನ್ನ ಇಚ್ಛಾನುರೂಪವಾಗಿ ಈತನಿಗೆ ಒಳ್ಳೆಯದನ್ನು ಮಾಡಲಿ ಎಂದು ಪ್ರಾರ್ಥನೆ ಮಾಡಬೇಕು. ಒಳ್ಳೆಯದನ್ನು ಅಥವಾ ಕೆಟ್ಟುದನ್ನು ಮಾಡುವ ಸಾಮರ್ಥ್ಯವು ನಿಮಗೆಲ್ಲಿಯದು? ಆಪ್ರಕಾರ ಶಕ್ತಿಯಿದ್ದರೆ, ನಿಮಗೆ ಯಾರ ಲಕ್ಷ್ಯವೂ ಇರುತ್ತಿರಲಿಲ್ಲ. ಇತರರಿಗೆ ಸುಖದುಃಖಗಳನ್ನು ಉಂಟುಮಾಡುವ ಸಾಮರ್ಥ್ಯವು ಮನುಷ್ಯನ ಕೈಯಲ್ಲಿ ಇಲ್ಲದಿರುವುದೇ ಉತ್ತಮವಾಗಿದೆ. ಹಾಗೆ ಶಾಪಾನುಗ್ರಹಶಕ್ತಿಯಿದ್ದರೆ ಪ್ರಪಂಚವು ಈಗಿರುವಂತೆ ಇರುತ್ತಿದ್ದಿತೋ ಇಲ್ಲವೊ? ಇದನ್ನು ಆಲೋಚಿಸುವುದಕ್ಕೆ ಆಗುವುದಿಲ್ಲ.

ಆರ ಸಂಗಡಲಾದರೂ ಮಾತನಾಡಬೇಕಾದರೆ ತ್ವರೆಪಡದೆ ಮಿತವಾಗಿಯೂ, ಸಮಯೋಚಿತವಾಗಿಯೂ, ಪ್ರಸನ್ನ ಮುಖರಾಗಿಯೂ, ಮಾತನಾಡಬೇಕು. ಪೂರ್ವಾಪರವನ್ನು ಚೆನ್ನಾಗಿ ವಿಚಾರಮಾಡಿ ಸತ್ಯವಾದುದನ್ನೇ ಆಡಬೇಕು. ಚಾಡಿ ಹೇಳಿದಂತೆ ಆಗುವ ಅಥವಾ ಇತರರಿಗೆ ಹಾನಿಯನ್ನು ಉಂಟುಮಾಡುವ ಮಾತುಗಳನ್ನು ಎಂದಿಗೂ ಆಡಬಾರದು. ತನ್ನ ಮಾನಕ್ಕೂ, ಇತರರ ಮಾನಕ್ಕೂ, ಸತ್ಯಕ್ಕೂ ಕೊರತೆ ಬಾರದ ಮಾತುಗಳನ್ನೇ ಆಡಬೇಕು. ನಿಮ್ಮನ್ನು ಯಾರಾದರೂ ನೋಡುವುದಕ್ಕೆ ಬಂದರೆ ತಕ್ಕ ಮರ್ಯಾದೆಯಿಂದ ಅವರನ್ನು ಕಂಡು ಕುಳ್ಳಿರಿಸಬೇಕು. ನೀವು ಎತ್ತರವಾದ ಸ್ಥಳದಲ್ಲಿ ಕುಳಿತು ಅವರನ್ನು ಕೆಳಗೆ ಕುಳ್ಳಿರಿಸಬಾರದು. ಬಂದವರು ಕುಳಿತುಕೊಂಡನಂತರ ಅವರ ಯೋಗಕ್ಷೇಮವನ್ನು ಕೇಳಬೇಕು. ಅವರು ನಿಮ್ಮ ಯೋಗಕ್ಷೇಮವನ್ನು ಕೇಳಿದರೆ, ದೇವರ ದೆಸೆಯಿಂದ ಚೆನ್ನಾಗಿದ್ದೇನೆಂದು ಹೇಳಿ, ಅನಂತರ ಇನ್ನೇನಾದರೂ ಮಾತನಾಡತಕ್ಕುದು ಇದ್ದರೆ ಆಡಬೇಕು. ದೊಡ್ಡವರು ಬಂದರೆ ಆವರು ಕುಳಿತುಕೊಳ್ಳುವ ಪರ್ಯಂತವೂ ನಿಂತಿದ್ದು, ಅನಂತರ ಒಂದು ಕಡೆಗೆ ಸರಿದು, ಬೇರೆ ಪೀಠದಲ್ಲಿಯೋ ಅಥವಾ ನೆಲದಲ್ಲಿಯೋ ಕುಳಿತುಕೊಳ್ಳಬೇಕು. ಅವರಿಗೆ ಕೇವಲ ಎದುರಾಗಿ ನಿಲ್ಲಬಾರದು, ಕುಳಿತುಕೊಳ್ಳಬಾರದು, ಅವರನ್ನು ದೃಷ್ಟಿಸಿ ನೋಡಬಾರದು.

ಮಾತನಾಡುವುದರಲ್ಲಿಯೂ, ನಡೆವುದರಲ್ಲಿಯೂ, ಕುಳಿತುಕೊಳ್ಳುವುದರಲ್ಲಿಯೂ, ಗಾಂಭೀರ್ಯವಿರಬೇಕು. ಎರಡನೆಯವರು ಮಾತನಾಡಿಸದೆ ಇದ್ದರೆ, ನೀವಾಗಿ ಮಾತನಾಡಬಾರದು. ಅವರು ಮಾತನಾಡಿಸಿದನಂತರ ಮಿತವಾಗಿಯೂ ಸಮಯೋಚಿತವಾಗಿಯೂ ಉತ್ತರವನ್ನು ಕೊಡಬೇಕು. ಆರಾದರೂ ಇರುವಾಗ ಅವರ ಎದುರಿಗೆ ಕೇಕರಿಸಿ ಮನಸ್ಸು ಬಂದಕಡೆಗೆ ಉಗುಳಬಾರದು. ಉಗುಳಬೇಕಾದರೆ ಮರೆಯಾದ ಸ್ಥಳಕ್ಕೆ ಹೋಗಿ ಉಗುಳಬೇಕು. ಅವರ ಎದುರಿಗೆ ಬೆರಳು ಮುರಿದುಕೊಳ್ಳಬಾರದು. ಕೈಕಾಲುಗಳನ್ನು ಚಾಚಿಕೊಂಡು ಅಮರ್ಯಾದೆಯಿಂದ ಕೂಡಬಾರದು. ಹಿರಿಯರ ಅಥವಾ ಇತರರ ಮುಖದ ಸಮೀಪದಲ್ಲಿ ಮಾತನಾಡಬೇಕಾದಲ್ಲಿ ಅವರ ಮುಖದ ಮೇಲೆ ಉಗುಳಿನ ಬಿಂದು ಬೀಳದಂತೆ ಎಚ್ಚರದಿಂದ ಮಾತನಾಡಬೇಕು. ಹಿರಿಯರು,

ಅಪರಿಚಿತರಾದ ವಿದ್ವಾಂಸರು, ಮುಂತಾದ ದೊಡ್ಡವರ ಸಂಗಡ ಮಾತ ನಾಡುವಲ್ಲಿ ತಾವು, ತಮ್ಮ, ಎಂಬ ಬಹುವಚನ ಪ್ರಯೋಗವನ್ನು ಮಾಡಬೇಕು. ಅವರಿಗೆ ಆಜ್ಞಾಪಿಸುವಂತೆ ಮಾತನಾಡಬಾರದು. ನಿಮಗೆ ಯಾರಾದರೂ ಉಪಕಾರಮಾಡಿದರೆ, ಅಥವಾ ಏನಾದರೂ ಸಹಾಯ ಮಾಡಿದರೆ, ಅದಕ್ಕೋಸ್ಕರ ಕೃತಜ್ಞರಾಗಿರಬೇಕು. ಆರ ಸಂಗಡಲೂ ವಕ್ರವಾದ ಮಾತುಗಳನ್ನಾಡಬಾರದು. ದಾರಿಯಲ್ಲಿ ಪುರುಷರ ಸಂಗಡಲೇ ಆಗಲಿ ಇತರರ ಸಂಗಡಲೇ ಆಗಲೀ ನಿಂತು ಮಾತನಾಡಬಾರದು. ಕಿಟಕಿಯಲ್ಲಿ ಅಥವಾ ಮನೆಯಬಾಗಿಲಲ್ಲಿ ನಿಂತು ಬೀದಿಯಲ್ಲಿ ನಡೆವ ವಿನೋದವನ್ನು ನೋಡಬಾರದು. ಆರಾದರೂ ಇಬ್ಬರು ರಹಸ್ಯವಾಗಿ ಮಾತನಾಡುತ್ತಾ ಇದ್ದರೆ ಅವರು ಕರೆಯದೆ ಅವರ ಸಮೀಪಕ್ಕೆ ಹೋಗಬಾರದು; ಮತ್ತು ಮರೆಯಾಗಿ ನಿಂತು ಅವರು ಆಡುವುದನ್ನು ಕೇಳಲೂ ಬಾರದು. ದಾರಿಯಲ್ಲಿ ನಡೆವಾಗ ಅತ್ತಿತ್ತ ನೋಡದೆ, ಕೈಗಳನ್ನಲ್ಲಾಡಿಸದೆ, ಓಡದೆ, ಕಾಲಿನಲ್ಲಿ ಸದ್ದು ಮಾಡದೆ, ನೆಟ್ಟಗೆ ದಾರಿಯನ್ನು ಹಿಡಿದು, ನೆಲವನ್ನು ನೋಡುತ್ತಾ ಹೋಗಬೇಕು. ದಾರಿಯಲ್ಲಿ ನಡೆವಾಗಲೂ, ಅಪರಿಚಿತರ ಮುಂದೆಯೂ, ಸರ್ವಾಂಗವೂ ಮುಚ್ಚುವಂತೆ ವಸ್ತ್ರವನ್ನು ಧರಿಸಿಕೊಂಡಿರಬೇಕು.

ಪೂರ್ವದಲ್ಲಿ ಈ ದೇಶದಲ್ಲಿ ಕುಲೀನರಾದ ಸ್ತ್ರೀಯರು ಮೇಲೆ ಮತ್ತೊಂದು ವಸ್ತ್ರವನ್ನು ಹೊದೆದುಕೊಳ್ಳುವ ಸಂಪ್ರದಾಯವಿದ್ದಿತು. ಆದರೆ ಈಗ ಜನಸಮೂಹದಲ್ಲಿಯೂ, ನೀರು ತರುವುದಕ್ಕೆ ಹೋಗುವಾಗಲೂ, ಅಡ್ಡ ಸೆರಗು ಕಟ್ಟಿಕೊಂಡು, ನಿರಿಗೆಯನ್ನು ಮೇಲಕ್ಕೆ ಸಿಕ್ಕಿಸಿಕೊಂಡು ನಡೆಯುತ್ತಾರೆ; ಒಟ್ಟೆಯನ್ನು ಒಗೆವುದಕ್ಕೆ ತೊಡಗಿದಾಗ ಅವರಿಗೆ ಶರೀರದಮೇಲೆ ಪ್ರಜ್ಞೆ ಸಹ ಇರುವುದಿಲ್ಲ. ಇದು ಕೇವಲ ಕೆಟ್ಟ ಸಂಪ್ರದಾಯವಾದುದರಿಂದ ಇದನ್ನು ಬಿಡಬೇಕು. ಕೊಳ, ಹೊಳ, ಕೆರೆ ಇವುಗಳಲ್ಲಿ ಸ್ನಾನ ಮಾಡುವಾಗ ಪುರುಷರು ಸಮೀಪದಲ್ಲಿದ್ದರೆ, ಮೈಯನ್ನು ತೆರೆದು ಸ್ನಾನ ಮಾಡಬಾರದು. ಅಂಥ ಸ್ಥಳಗಳಲ್ಲಿ ಸೂರ್ಯೋದಯಕ್ಕಿಂತ ಮುಂಚೆ ಮಬ್ಬಿನಲ್ಲಿ ಸ್ನಾನ ಮಾಡಬೇಕು; ಇದಕ್ಕಿಂತಲೂ ಮನೆಯಲ್ಲೇ ಮರೆಯಾದ ಸ್ಥಳದಲ್ಲಿ ಮಾಡುವುದು ಉತ್ತಮ. ಗೊತ್ತಿಲ್ಲದ ಸ್ಥಳಕ್ಕೆ ಅಥವಾ ಪೇಟೆಗೆ ಹೋಗುವಾಗ ಒಬ್ಬರೇ

ಹೋಗದೆ ತಮ್ಮ ಸಂಬಂಧಿಗಳನ್ನಾಗಲಿ ನಂಬಿಕೆಯುಳ್ಳ ಇತರರನ್ನಾಗಲಿ ಸಂಗಡ ಕರೆದುಕೊಂಡು ಹೋಗಬೇಕು. ಗೊತ್ತಿಲ್ಲದ ಸ್ಥಳಕ್ಕೆ ಅಥವಾ ಪರರಮನೆಗೆ ರಾತ್ರಿಕಾಲದಲ್ಲಿ ಹೋಗಬಾರದು. ಬಂದುವೇಳೆ ನಿರ್ವಾಹವಿಲ್ಲದೆ ಹೋಗಬೇಕಾಗಿ ಬಂದಲ್ಲಿ ಬಹಳ ಜಾಗರೂಕತೆಯಿಂದ ಸಂಗಡ ಯಾರನ್ನಾದರೂ ಕರೆದುಕೊಂಡು ಹೋಗಬೇಕು. ಕುಲೀನರಾದ ಸ್ತ್ರೀಯರು ಅಸಭ್ಯವಾದ ನಾಟಕಗಳನ್ನೂ ಅಥವಾ ಇತರ ವಿನೋದಗಳನ್ನೂ ನೋಡುವುದಕ್ಕೆ ಹೋಗಬಾರದು. ಅಂಥ ಸ್ಥಳದಲ್ಲಿ ಸೇರುವವರೆಲ್ಲರೂ ದೊಡ್ಡಮನುಷ್ಯರೇ ಆಗಿರುವುದಿಲ್ಲ. ಆದುದರಿಂದ ಮರ್ಯಾದೆ ಉಳಿವುದಿಲ್ಲ. ಅಲ್ಲಿ ವಾಚ್ಯಾವಾಚ್ಯವಿಚಾರವಿಲ್ಲದಕಾರಣ ಅಂಥ ಸ್ಥಳಕ್ಕೆ ಹೋದ ಹೆಂಗಸರ ಪವಿತ್ರವಾದ ಮರ್ಯಾದೆಗೆ ಕಳಂಕ ಹತ್ತುವುದೇನೂ ಆಶ್ಚರ್ಯವಲ್ಲ. ಅಶಿಕ್ಷಿತರಾದ ಕೆಲವು ಸ್ತ್ರೀಯರು ತಮ್ಮ ಮರ್ಯಾದೆ ಹೋಗುವುದನ್ನು ಲಕ್ಷಿಸದೆ, ಇಂಥ ವಿನೋದಗಳನ್ನು ನೋಡಬೇಕೆಂದು ಕ್ಷಣಿಕಸುಖದ ಆಶೆಯಿಂದ ಹೋಗಿ, ತಮ್ಮ ಸ್ತ್ರೀಕುಲಕ್ಕೇ ಅಪಯಶಸ್ಸನ್ನು ತರುತ್ತಾರೆ. ಇದು ಬಹಳ ಲಜ್ಜಾಕರವಾದ ಕಾರ್ಯವಾಗಿದೆ. ಪುರಾಣಗಳನ್ನೂ ಹರಿಕಥೆಗಳನ್ನೂ ಕೇಳುವುದಕ್ಕೆ ಹೆಂಗಸರು ಹಗಲೂ ರಾತ್ರಿಯೂ ಹೋಗುವ ವಾಡಿಕೆಯಿದೆ. ಅಲ್ಲಿ ಒಂದೊಂದುವೇಳೆ ವೇಶ್ಯಾಸ್ತ್ರೀಯರ ಸಮೀಪದಲ್ಲಿ ಸಹ ಕುಳಿತುಕೊಳ್ಳಬೇಕಾಗುತ್ತದೆ. ಆ ಸ್ಥಳವು ಪತಿತಪಾವನವೆನ್ನಿಸಿಕೊಳ್ಳುವುದರಿಂದ ಬಳ್ಳಿಯವರು, ಕಟ್ಟವರು, ಗರತಿಯರು, ಸೂಳೆಯರು, ವಿಟರು ನಟರು, ಮುಂತಾದ ಸರ್ವರ ಸಮಾವೇಶವಾಗುತ್ತದೆ. ಅಲ್ಲಿಗೆ ಹೋಗಿ ಅವರಲ್ಲಿ ಬೆರೆಯದಿದ್ದರೆ ಆಗುವುದಿಲ್ಲ. ಇಂಥ ಸ್ಥಳದಲ್ಲಿ ಅವಮಾನವೂ ಕೂಡ ಆಗುತ್ತದೆ. ಅಲ್ಲಿಗೆ ಹೆಂಗಸರು ಬರುತ್ತಾರೆಂದು ತಿಳಿದು, ಅನೇಕ ದುರ್ಜನರು ತಮ್ಮ ದುರ್ವೃತ್ತಿಯನ್ನು ನಡಿಸಲಿಕ್ಕೆ ಬರುತ್ತಾರೆ. ಇದೂ ಅಲ್ಲದೆ ಪುರಾಣ ಹೇಳುವವರಲ್ಲಿ ಹರಿಕಥೆ ಮಾಡುವವರಲ್ಲಿ ಸಹ ಕೆಲವರು ದುರಾಚಾರ ಉಳ್ಳವರಾಗಿರುತ್ತಾರೆ. ಅವರಲ್ಲಿ ಶಿಕ್ಷಿತರಾಗಿ ಜ್ಞಾನಿಗಳಾಗಿ ಇರುವವರು ಕೆಲವರು ಮಾತ್ರ. ಶಬ್ದ, ಸಮಾಸ ಚಕ್ರ, ನಾಲ್ಕು ಸರ್ಗ ರಘುವಂಶ, ಸ್ವಲ್ಪ ನೈಷಧ, ಇಷ್ಟು ಓದಿಕೊಂಡು ಪುರಾಣಗಳನ್ನೂ ಹರಿಕಥೆಗಳನ್ನೂ ಹೇಳತಕ್ಕವರೇ ವಿಶೇಷ. ಇಂಥವರು,

ಬದನೆಕಾಯಿ ತಿಂದರೆ ಸೂಚೀಮುಖನರಕಪ್ರಾಪ್ತಿಯೆಂದು ಹೇಳಿ ಮನಸ್ಸಿಗೆ ಬಂದಂತೆ ನಡೆವವರಾಗಿರುತ್ತಾರೆ. ಪೌರಾಣಿಕರಲ್ಲಿ ಕೆಲವು ಮಹಾಪುರುಷರಿಗೆ ಸ್ತ್ರೀಯರನ್ನು ನೋಡಿದಕೂಡಲೆ ಆವೇಶ ಬಂದು ಸಪಂಚಾಧ್ಯಾಯಿ ಮುಂತಾದ ಉಪಾಖ್ಯಾನಗಳಿಗೆ ಶಬ್ದಶಃ ಅರ್ಥ ಹೇಳುವುದಕ್ಕೆ ಉಪಕ್ರಮಿಸುತ್ತಾರೆ. ಶಿವಸ್ತುತಿ, ಬ್ರಹ್ಮಸ್ತುತಿ, ವೇದಾಂತ ಪ್ರಕರಣ, ಉದ್ಧವಭಗವತ್ಸಂವಾದ, ಭಗವದ್ಗೀತೆ ಮುಂತಾದ ಪ್ರಮೇಯಗಳಲ್ಲಿ ಮಾತ್ರ ಅರ್ಥ ಹೇಳುವುದಕ್ಕೆ ತಿಳಿಯದೆ ಕಣ್ಣು ಮುಚ್ಚಿಕೊಳ್ಳರಿ, ಬ್ರಹ್ಮದೇವರು ವಿಷ್ಣುವಿನ ಸ್ತೋತ್ರಮಾಡುತ್ತಾರೆ, ಎಂದು ಹೇಳಿ ಮುಗಿಸಿಬಿಡುತ್ತಾರೆ. ಇಂಥ ಸ್ವಭಾವವುಳ್ಳವರಿಂದ ಒಳ್ಳೆಯ ಉಪದೇಶ ದೊರಕುವುದು ಹಾಗಿರಲಿ; ಜನರಲ್ಲಿ ಮೊದಲಿದ್ದ ಒಳ್ಳೆಯ ನಡತೆ ಸಹ ಕೆಟ್ಟುಹೋಗುತ್ತದೆ. ಎಲ್ಲಾ ಪೌರಾಣಿಕರೂ ಎಲ್ಲಾ ಹರಿದಾಸರೂ ಹೀಗೆಯೇ ಇರುತ್ತಾರೆಂದು ನಾನು ಹೇಳುವುದಿಲ್ಲ. ಸ್ತ್ರೀಯರು ತಮ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳಲೆಂದು ನಾನು ಈ ವಿಷಯವನ್ನು ಹೇಳಿದೇನೆ. ಸ್ತ್ರೀಯರು ಇಂಥ ಸ್ಥಳಗಳಿಗೆ ಹೋಗದೆ, ತಾವು ಇದ್ದಕಡೆಯಲ್ಲಿಯೇ ಪುರಾಣಗಳನ್ನೂ ಇತಿಹಾಸಗಳನ್ನೂ ತಿಳಿದುಕೊಳ್ಳುವುದಕ್ಕೆ ಸ್ವಲ್ಪ ಶ್ರಮಪಟ್ಟು ಸಂಸ್ಕೃತವನ್ನು ಕಲಿತರೆ ಸಾಕು, ಭಾರತವರ್ಷದ ಸಮಸ್ತಧರ್ಮಗ್ರಂಥಗಳೂ ಸಂಸ್ಕೃತದಲ್ಲಿ ಇರುವುದರಿಂದ ಈ ಭಾಷೆಯನ್ನು ಕಲಿಯಬೇಕಾದದು ಅವಶ್ಯಕವಾಗಿದೆ. ಆ ಗ್ರಂಥಗಳನ್ನು ತಾವೇ ನೋಡಿಕೊಳ್ಳದೆ ಇತರರ ಮುಖದಿಂದ ಅವುಗಳ ಅಭಿಪ್ರಾಯವನ್ನು ಕೇಳಿದರೆ, ತಮ್ಮ ಧರ್ಮಗಳು ತಮಗೆ ಚೆನ್ನಾಗಿ ತಿಳಿವುದಿಲ್ಲ. ಸ್ತ್ರೀಯರಿಗೆ ಧರ್ಮಗಳು ತಿಳಿಯದೆ ಇರುವುದರಿಂದ ದೊಡ್ಡದೊಡ್ಡ ಅನರ್ಥಗಳು ನಡೆಯುತ್ತವೆ. ಧರ್ಮಶಾಸ್ತ್ರದ ಭಾಷೆ ಸರಳವಾಗಿಯೂ, ಮಧುರವಾಗಿಯೂ, ಸ್ವಲ್ಪ ಅಭ್ಯಾಸದಿಂದ ತಿಳಿಯುಲಿಕ್ಕೆ ಅನುಕೂಲವಾಗಿಯೂ ಇದೆ.

ಒಂದುವೇಳೆ ಎಲ್ಲರೂ ಸಂಸ್ಕೃತವನ್ನು ಕಲಿಯದೆ ಇದ್ದರೂ ಕೆಲವರಾದರೂ ಕಲಿತರೆ ಸಾಕು. ಗಂಡಸರಿಂದ ಪುರಾಣವನ್ನು ಕೇಳುವುದಕ್ಕಿಂತ ಹೆಂಗಸರಿಂದ ಕೇಳುವುದರಲ್ಲಿ ಅನುಕೂಲ ಹೆಚ್ಚಾಗಿದೆ. ಆದುದರಿಂದ ನಮ್ಮ ಪುರಾತನ ಭಾಷೆಯನ್ನು ಕಲಿತು, ನಮ್ಮ ಧರ್ಮಶಾಸ್ತ್ರ

ವನ್ನು ತಿಳಿದುಕೊಳ್ಳಬೇಕೆಂಬ ಆಶೆಯನ್ನು ಪೂರ್ಣಮಾಡಿಕೊಳ್ಳು ವುದು ಉತ್ತಮಪಕ್ಷ. ಇದು ಅಸಾಧ್ಯವಾದರೆ ಜ್ಞಾನಿಗಳಾಗಿಯೂ ಸುಶೀಲರಾಗಿಯೂ ವೃದ್ಧರಾಗಿಯೂ ಇರುವವರ ಕಡೆಯಿಂದ ತಮ್ಮ ಮನೆಯಲ್ಲಾಗಲಿ ಅದಕ್ಕೆ ಸರಿಯಾದ ಇತರ ಸ್ಥಳದಲ್ಲಾಗಲಿ ಪುರಾಣವನ್ನು ಕೇಳಬೇಕು. ಇವಕ್ಕೋಸ್ಕರ ಪೇಟೆಗೂ, ಅಥವಾ ವೇಶ್ಯಾಸ್ತ್ರೀಯರು ಮುಂತಾದವರು ಸಹ ಬರುವುದಕ್ಕೆ ಅಡ್ಡಿಯಿಲ್ಲದ ದೇವಾಲಯಗಳಿಗೂ ಹೋಗಬಾರದು.

ಇಂಥ ಅಮರ್ಯಾದೆಯ ಸ್ಥಳಗಳಿಗೆ ಕುಲಸ್ತ್ರೀಯರು ಹೋಗದೆ, ಜ್ಞಾನಿಗಳಾಗಿಯೂ ಸಚ್ಚರಿತ್ರರಾಗಿಯೂ ಇರುವ ಜನರಲ್ಲಿ ಹೋಗಿ ತಮಗೆ ಹಿತಕರವಾದ ಉಪದೇಶವನ್ನು ಹೊಂದಬೇಕು. ಕೆಲವರು ಆರಿಂದಲಾದರೂ ಮಂತ್ರೋಪದೇಶವನ್ನು ತೆಗೆದುಕೊಳ್ಳುವುದುಂಟು. ಇಂಥ ಸಂಗತಿಗಳಲ್ಲಿ ಆ ಉಪದೇಶವನ್ನು ಕೊಡುವ ಗುರುಗಳ ಶೀಲಗಳನ್ನು ಚೆನ್ನಾಗಿ ತಿಳಿದಿರುವುದಿಲ್ಲ. ಒಂದುವೇಳೆ ಅವರು ಮನಸ್ಸು ಬಂದಂತೆ ನಡೆದರೂ, ಗುರುಗಳ ದೋಷವನ್ನು ಹೊರಗೆ ಹಾಕಿದರೆ ನರಕಪ್ರಾಪ್ತಿ ಆಗುವದೆಂದು ಮುಗ್ಧರಾದ ಸ್ತ್ರೀಯರು ಎಣಿಸಿರುತ್ತಾರೆ. ಇದರಿಂದಲೂ ಅನರ್ಥಗಳಾಗುತ್ತವೆ.

ಇದಲ್ಲದೆ ಗೊತ್ತುಗುರಿಯಿಲ್ಲದೆ ಆರನ್ನಾದರೂ ಗುರುವನ್ನಾಗಿ ಮಾಡಿಕೊಳ್ಳಬೇಕೆಂದು ಹಿಂದೂ ಧರ್ಮಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲ. ಅದರಲ್ಲಿ ಹೆಂಗಸರಿಗೆ ತಂದೆ, ತಾಯಿ, ಅಣ್ಣ, ಮಾವ ಇವರೇ ಗುರುಗಳೆಂದು ಹೇಳಿದೆ. ವಿಚಾರಮಾಡಿದರೆ ಇವರನ್ನು ಮಾತ್ರವಲ್ಲ; ಜ್ಞಾನೋಪದೇಶ ಮಾಡುವವರನ್ನೂ ವಿದ್ಯಾಗುರುಗಳನ್ನೂ ಗುರುವೆಂದೆಣಿಸಬೇಕು.

ನೀವು ಒಳ್ಳೆಯವರ ಸಹವಾಸವನ್ನೂ ಅವರ ಸಂಗಡ ಸ್ನೇಹವನ್ನೂ ಮಾಡಿರಿ. ಹಗಲೆಲ್ಲ ನೆರೆಹೊರೆ ಹೆಂಗಸರಲ್ಲಿ ಹೋಗಿ ಹಾಲು ಮಾರಿಕೆಯಿಂದ ಕಾಲಮೇಲೆ ಕಾಲುಹಾಕಿಕೊಂಡು, ರುದ್ರ ಬತ್ತಿ, ವಿಷ್ಣು ಬತ್ತಿ ಮುಂತಾದುವನ್ನು ಮಾಡುತ್ತಾ, ಈಕೆಯ ಗಂಡ ಹೀಗೆ, ಆಕೆಯಕಾಲು ಸೊಟ್ಟು, ಈಕೆಯ ಮೂಗು ಡೊಂಕು, ತನ್ನ ಅತ್ತೆ ಬಹಳ ಜಗಳಗಂಟಿ, ಎಂಬಿವೇ ಮುಂತಾದ ದೂಷಣೆಗಳಿಂದ ಹೊತ್ತು ಕಳೆಯಬಾರದು. ಪರಸ್ಪರ ಸ್ನೇಹ ಬೆಳೆಯಿಸುವುದೂ ಮತ್ತು ಸಮು

ಯಬಂದಾಗ ಒಬ್ಬರಿಗೊಬ್ಬರು ಸಹಾಯಮಾಡುವುದೂ ಯುಕ್ತ. ನಿಮ್ಮ ನಿತ್ಯಕಟ್ಟಳೆಯ ಕೆಲಸವಾದನಂತರ ಅವಕಾಶ ಸಿಕ್ಕಿದವೇಳೆಯಲ್ಲಿ ನಿಮ್ಮ ಮನಸ್ಸನ್ನು ಒಳ್ಳೆಯಕಡೆಗೆ ವಿನಿಯೋಗಮಾಡದೆ ಗೊಡ್ಡುಹರಟೆ ಹೊಡೆವುದು ಬಹಳ ಕೆಟ್ಟುದು. ಇವರ ಸ್ವಭಾವ ಇಂಥದೆಂದು ತಿಳಿಯದೆ, ಆರ ಸಂಗಡಲಾದರೂ ಕೇವಲ ಕೂಡಿ ನಡೆವರೆ ಅವರ ದುರ್ಗುಣ ನಿಮಗೆ ಬರುತ್ತದೆ. ಇತರರ ಒಳ್ಳೆಯಗುಣ ಮಾತ್ರ ಬರುವುದು ಶ್ರಮ. ಪರಂತು ಅವರ ದುರ್ಗುಣಗಳು ಮಾತ್ರ ವಿಷೂಚಿಕಾದಿ ಸಾಂಕ್ರಾಮಿಕ ರೋಗಗಳಂತೆ ಬಹು ಬೇಗ ಬಂದು ನಿವಾರಿಸಲಸಾಧ್ಯವಾಗಿ, ಅದರ ದೆಸೆಯಿಂದ ಉಂಟಾಗುವ ಯಾತನೆಯನ್ನು ಜನ್ಮವಿರುವ ಪರ್ಯಂತವೂ ಅನುಭವಿಸಬೇಕಾಗಿ ಬರುತ್ತದೆ. ಆದುದರಿಂದ ಇಂಥ ದುಸ್ಸಹವಾಸವನ್ನು ಎಂದಿಗೂ ಮಾಡಬಾರದು. ಒಳ್ಳೆಯ ಮನುಷ್ಯನು ದುಸ್ಸಹವಾಸದಲ್ಲಿ ಬಿದ್ದಕೂಡಲೇ ಅವನನ್ನು ಜನರು ನಿಂದಿಸಿ, ಅವನ ಸಂಗಡ ಮಾತನಾಡುವುದಕ್ಕೆ ಸಹ ನಾಚಿಕೆಪಟ್ಟು ಕೊಳ್ಳುತ್ತಾರೆ. ದುಸ್ಸಹವಾಸದಿಂದ ತಮ್ಮ ಸ್ವಭಾವವು ಕೆಡುವುದಿಲ್ಲವೆಂಬ ನಿಶ್ಚಯವು ಒಂದುವೇಳೆ ತಮಗಿದ್ದರೂ ಅಂಥ ಸಂಗತಿಯ ನೆರಳಿನ ಸಮೀಪಕ್ಕೂ ಹೋಗಬಾರದು. ಜಾಲಿಗಿಡದ ಅಡವಿಯಲ್ಲಿ ಒಂದು ಗಂಧದಮರವಿದ್ದರೆ, ಅಲ್ಲಿ ಕಾಡುಕಿಚ್ಚು ಬಿದ್ದಾಗ ಅದು ಒಳ್ಳೆಯಮರವೆಂದು ಅದನ್ನು ಸುಡದೇ ಇರುವುದಿಲ್ಲ, ಮುಳ್ಳುಗಿಡದ ಸಂಗಡ ಇದೂ ಸುಟ್ಟೇಹೋಗುತ್ತದೆ. ದುಸ್ಸಹವಾಸದಿಂದ ಒಳ್ಳೆಯವರೂ ಕೆಟ್ಟುಹೋಗುತ್ತಾರೆ. ಕೆಟ್ಟಮೇಲೆ ಒಳ್ಳೆಯವರಾಗುವದಿಲ್ಲ. ಹಾಗೆಯೇ ನಿಮ್ಮ ಸ್ವಭಾವವು ಕೆಟ್ಟ ಸಹವಾಸದಿಂದ ಒಂದುಸಲ ಕೆಟ್ಟುಹೋದರೆ ತಿರುಗಿ ತಿದ್ದಲಿಕ್ಕೆ ಬಹು ಪ್ರಯಾಸವಾಗುತ್ತದೆ. ನಿರ್ಮಲವಾದ ನೀರಿನಲ್ಲಿ ಕೆಸರು ಬೆರಸಿ ಹೊಲಸುಮಾಡುವುದು ಸುಲಭ; ಪರಂತು ಬಗ್ಗಡವಾಗಿರುವ ನೀರನ್ನು ತಿಳಿಮಾಡಲಿಕ್ಕೆ ಬಹಳ ಶ್ರಮಪಡಬೇಕಾಗುತ್ತದೆ. ಯಾರಸಂಗಡಲೂ ಅತಿಸ್ನೇಹವನ್ನು ಮಾಡಬಾರದು. ಮಿತವಾಗಿ ಇದ್ದರೆ ಜಗಳ ಮುಂತಾದುವು ಬಾರದೆ ಮರ್ಯಾದೆ ಉಳಿಯುತ್ತದೆ. ಆದರೆ ಒಬ್ಬರಿಗೊಬ್ಬರು ಪ್ರೀತಿಯಿಲ್ಲದೆ ಇರಬೇಕೆಂದಲ್ಲ; ಪರಸ್ಪರ ಪ್ರೀತಿಯಿಂದಿದ್ದು, ಮತ್ತೊಬ್ಬರ ಸುಖದುಃಖಕ್ಕೆ ಭಾಗಿಗಳಾಗಿರುವುದು ಮನುಷ್ಯರಿಗೆ ಅವಶ್ಯ ಕರ್ತವ್ಯವಾಗಿದೆ.

ಮುಖ್ಯವಾಗಿ ತಮ್ಮ ಮತ್ತು ಇತರರ ಮರ್ಯಾದೆಗೆ ಭಂಗಬಾರದೆ, ಪರಸ್ಪರ ಪ್ರೀತಿಬೆಳೆದು, ಪಶ್ಚಾತ್ತಾಪವೂ ದುಃಖವೂ ನಿಂದೆಯೂ ಇಲ್ಲದೆ ಬಾಳುವುದಕ್ಕೋಸ್ಕರ ಎಲ್ಲರೂ ಸದಾಚರಣೆಯಿಂದಿರಲು ಯತ್ನ ಮಾಡಬೇಕು.

---

## ೪ನೆಯ ಪರಿಚ್ಛೇದ.

---

### ಧರ್ಮವು.

ಧೃತಿಃ ಕ್ಷಮಾ ದಮೋಸ್ತೇಯಂ ಶೌಚಮಿಂದ್ರಿಯ ನಿಗ್ರಹಃ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಂ॥

ಜಗತ್ತಿನಲ್ಲಿ ಮನುಷ್ಯನು ಆಚರಿಸಬೇಕಾದ ಆಚಾರಗಳಲ್ಲಿ ಧರ್ಮವೂ ಮುಖ್ಯವಾದುದು. ಇದೇ ಸಮಸ್ತ ವಿಷಯಗಳಿಗೂ ಮೂಲಾಧಾರವಾಗಿರುತ್ತದೆ. ಭೂಮಿಯನ್ನು ಬಿಟ್ಟು ಆಕಾಶದಲ್ಲಿ ಮನೆಯನ್ನು ಕಟ್ಟುವುದಕ್ಕೆ ಪ್ರಯತ್ನಪಟ್ಟರೆ ಯಾರಿಂದಲಾದರೂ ಆದೀತೆ? ಬೇರಿನ ಆಧಾರ ಬಲವಾಗಿ ಇಲ್ಲದಿದ್ದರೆ ಯಾವಗಿಡವೂ ನಿಲ್ಲುವದಿಲ್ಲ. ಇದರಂತೆಯೇ ಸಂಸಾರದಲ್ಲಿ ಧರ್ಮವನ್ನು ಬಿಟ್ಟು ನಡೆವವನೂ ಬಾಳುವುದಿಲ್ಲ; ಅವನು ಹಿಡಿದ ಕೆಲಸವೂ ನಡೆವುದಿಲ್ಲ. ಒಂದುವೇಳೆ ಸ್ವಲ್ಪ ನಡೆದರೂ, ಆಕಾಶಕ್ಕೆ ಎಸೆದ ಮಣ್ಣಿನ ಹೆಂಟೆ ನೆಲಕ್ಕೆಬಿದ್ದು ನಿರ್ನಾಮವಾಗುವಂತೆ ಅದರ ಹೆಸರುಕೂಡ ಇಲ್ಲವಂತಾಗುವುದು. ಪ್ರಪಂಚದಲ್ಲಿ ನಾಗರಿಕರಿಗೂ ನಾಗರಿಕರಲ್ಲದೆ ಇರುವವರಿಗೂ ಅವುದಾದರೂ ಒಂದು ಧರ್ಮವಿದ್ದೇ ಇರುತ್ತದೆ. ಆ ಧರ್ಮದ ಸಹಾಯದಿಂದ ಸುಖಪಡುತ್ತಾರೆ. ಮನುಷ್ಯನ ಉಚ್ಛೃಂಖಲವಾದ ಮನಸ್ಸನ್ನು ಸನ್ಮಾರ್ಗಕ್ಕೆ ಹತ್ತಿಸುವುದಕ್ಕೆ ಧರ್ಮದ ಭಯಕ್ಕೆ ಸಮಾನವಾದ ಇತರ ಭಯ ಯಾವುದೂ ಇಲ್ಲ. ನೆರೆಹೊರೆಯವರಿಂದಾಗಲಿ ರಾಜನಿಂದಾಗಲಿ ಇಷ್ಟು ಭಯವಿರುವುದಿಲ್ಲ. ಮನುಷ್ಯನಿಗೆ ಈ ಧರ್ಮದ ಭಯವಿಲ್ಲದೆ ಇದ್ದರೆ ಅವನಿಂದ ಜಗತ್ತಿನಲ್ಲಿ ಶಾಂತಿಯು ನಿಲ್ಲದೆ, ಸ್ವರ್ಗಸಮಾನವಾಗಿಯೂ ಸುಖಪ್ರದವಾಗಿಯೂ ಇರುವ ಭೂ

ಮಂಡಲವು ಸ್ಮಶಾನವಂತೆ ಭಯಂಕರವಾಗಿ, ಇರುತ್ತಿದ್ದಿತು. ಜನರಿಗೆ ಧರ್ಮದ ಭಯವಿಲ್ಲದೆ ಹೋದರೆ ಒಬ್ಬರನ್ನೊಬ್ಬರು ಹೊಡೆದು ಸುಲಿದು ಬಿಡುತ್ತಿದ್ದರು. ಲೋಕದಲ್ಲಿ ಈರೀತಿ ಆಗಬಾರದೆಂದು ಧರ್ಮದ ಭಯವನ್ನು ಎಲ್ಲರ ಮನಸ್ಸಿನಲ್ಲಿಯೂ ಬಲವಾಗಿರುವಂತೆ ದೇವರೇ ಮಾಡಿದ್ದಾನೆ. ಆದುದರಿಂದ ಎಂಥ ದುರ್ಬುದ್ಧಿಯುಳ್ಳವನಾದರೂ ಧರ್ಮದ ಹೆಸರನ್ನು ಎತ್ತಿದ ಕೂಡಲೆ ಸ್ವಲ್ಪ ಹೆದರುತ್ತಾನೆ. ಇದರಿಂದ ಅವನು ಹಿಂದೆ ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪ ಪಟ್ಟು ಮುಂದೆ ಪಾಪ ಮಾಡುವುದನ್ನು ಬಿಡುತ್ತಾನೆ. ಹೀಗೆ ಜಗತ್ತಿನಲ್ಲಿ ಉಪದ್ರವಗಳು ಕಡಿಮೆಯಾಗಿ ಎಲ್ಲರೂ ಸುರಕ್ಷಿತರಾಗಿರುತ್ತಾರೆ. ಜಗತ್ತನ್ನು ಸಂರಕ್ಷಣೆ ಮಾಡುವ ದೊಡ್ಡ ಗುಣವು ಧರ್ಮದಲ್ಲಿ ಇರುವುದರಿಂದಲೇ ಧರ್ಮಕ್ಕೆ ಧರಿಸುವಂಥದು ಅಥವಾ ಹಿಡಿವಂಥದು ಎಂದು ಹೆಸರು ಬಂದಿದೆ ಈ ಧರ್ಮವನ್ನು ಸರ್ವರೂ ತಿಳಿದುಕೊಂಡು ಅದಕ್ಕೆ ಅನುಸಾರವಾಗಿ ನಡೆಯತಕ್ಕುದು ಅವಶ್ಯಕವಾಗಿದೆ. ಧರ್ಮಕ್ಕೆ ಬಹಳ ಪೂಜ್ಯತೆ ಇರುವುದರಿಂದ ಮೇಲೆ ಧರ್ಮದ ವೇಷವನ್ನು ಹಾಕಿಕೊಂಡವರಿಗೂ ಲೋಕದಲ್ಲಿ ಮಾನಮರ್ಯಾದೆಗಳು ಆಗುತ್ತವೆ. ಧರ್ಮವು ಸರ್ವರಿಗೂ ಹಿತವನ್ನು ಮಾಡುವುದರಿಂದ ಇದಕ್ಕೆ ಇಷ್ಟು ಪೂಜ್ಯತೆ ಇರುವುದು ನ್ಯಾಯವೇಸರಿ.

ಏಕಏವ ಸುಹೃದ್ಧರ್ಮೋ ನಿಧನೇಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯತ್ತು ಗಚ್ಛತಿ ॥

ಮರಣದಲ್ಲಿಯೂ ಮನುಷ್ಯನ ಸಂಗಡ ಹೋಗುವ ಧರ್ಮವೊಂದೇ ನಿಜವಾದ ಮಿತ್ರನೆಂದೆಣಿಸಬೇಕು. ಉಳಿದುವುಗಳೆಲ್ಲ ಶರೀರದ ಜೊತೆಯಲ್ಲಿ ನಾಶವನ್ನು ಪಡೆಯುತ್ತವೆ.

ಒಳ್ಳೆಯದಾಗಲಿ ಕೆಟ್ಟುದಾಗಲಿ ತಾನು ಮಾಡಿದುದು ಮಾತ್ರ ಸಂಗಡ ಹೋಗುತ್ತದೆ. ಮಿಕ್ಕ ಹಣ, ಸ್ವಜನ ಮುಂತಾದವರು ಅವನ ಸಂಗಡ ಹೋಗುವುದಿಲ್ಲ. ಮನುಷ್ಯ ನಾವ ಶರೀರದಲ್ಲಿ 'ನಾನು' ಎಂಬ ಅಭಿಮಾನವನ್ನು ಇಟ್ಟುಕೊಂಡು ಅದರ ಪೋಷಣೆಗಾಗಿ ರಾಕ್ಷಸನಂತೆ ಕ್ರೂರವಾದ ಕೆಲಸಗಳನ್ನು ಮಾಡುವುದಕ್ಕೆ ಹಿಂತೆಗೆವುದಿಲ್ಲವೋ ಆ ಶರೀರವು ಕೂಡ ಅವನ ಸಂಗಡ ಹೋಗುವುದಿಲ್ಲ. ಆದುದರಿಂದ ಮರಣಕಾಲದಲ್ಲಿ ಶಾಂತಿಯನ್ನು ಉಂಟುಮಾಡುವ ಧರ್ಮವನ್ನು ತನಗೆಸ್ನೇಹಿತನ

ನ್ನಾಗಿ ಮಾಡಿಕೊಳ್ಳಬೇಕು. ಸಾಧಾರಣವಾಗಿ ಮನುಷ್ಯರಿಗೆ ಮರಣ ದಂಥ ಭಯಂಕರವಾದ ವಿಷಯವಿನ್ನೊಂದಿಲ್ಲ. ಮರಣದ ನೆನಪು ಬಂದ ಕೂಡಲೇ ಮೈಯಮೇಲೆ ರೋಮಾಂಚವುಂಟಾಗುತ್ತದೆ. ಇಂಥ ಕಷ್ಟದ ಸಮಯದಲ್ಲಿ ಧಾರ್ಮಿಕನಾದ ಮನುಷ್ಯನಿಗೆ ಸಹಾಯಮಾಡಲಿಕ್ಕೆ ಧರ್ಮವು ಸಿದ್ಧವಾಗಿರುತ್ತದೆ. ಆದುದರಿಂದ ಧಾರ್ಮಿಕನಾದವನಿಗೆ ಮರಣದ ಭಯವೂ ಇರುವುದಿಲ್ಲ. ಅವನಿಗೆ ಮರಣದನೆನಪು ಬಂದರೆ ಒಂದು ವಿಧವಾದ ಉಲ್ಲಾಸವಾಗುತ್ತದೆ.

ಸದಸದ್ವಿವೇಕವೂ ತದನುಸಾರವಾದ ಆಚರಣೆಯೂ ಧರ್ಮವೆನಿಸಿಕೊಳ್ಳುತ್ತವೆ. ಧರ್ಮಸ್ವರೂಪನಿರೂಪಣವು ಎಲ್ಲಾ ಮತಗಳಲ್ಲಿಯೂ ಒಂದೇ ವಿಧವಾಗಿದೆ. ಆಯಾ ಮತಗಳ ವಿಚಾರವೂ ನನಗೆ ಇಲ್ಲಿ ಬೇಕಿಲ್ಲ. ಪ್ರಪಂಚದ ಸಮಸ್ತ ಮತಗಳಿಗೂ ಮೂಲಾಧಾರವಾದ ಸದಸದ್ವಿಚಾರವೇ ನನಗೆ ಈಗ್ಗೆ ಅವಶ್ಯಕವಾಗಿದೆ. ಅದನ್ನು ಈಗ ನಾನು ವಿವರಿಸುತ್ತೇನೆ.

ಧರ್ಮಕ್ಕೆ ೧೦ ಲಕ್ಷಣಗಳು ಉಂಟೆಂದು ಹೇಳಿ ಇದ್ದಾರೆ. ಅವು ಯಾವುವೆಂದರೆ:—೧. ಧೃತಿ ಎಂದರೆ ಧೈರ್ಯ. ೨. ಕ್ಷಮೆ. ೩. ದಮ ಅಂದರೆ ಮನೋನಿಗ್ರಹ. ೪. ಅಸ್ತೇಯ (ಕಳವು ಮಾಡದೆ ಇರುವುದು). ೫. ಶೌಚ (ಶುಚಿಯಾಗಿರುವುದು). ೬. ಇಂದ್ರಿಯನಿಗ್ರಹವು. ೭. ಧೀ ಎಂದರೆ ಧರ್ಮವಿಷಯಕವಾದ ಬುದ್ಧಿ. ೮. ವಿದ್ಯೆ ಅಂದರೆ ಪರಮೇಶ್ವರನ ವಿಷಯಕವಾದ ಜ್ಞಾನ. ೯. ಸತ್ಯ. ೧೦. ಅಕ್ರೋಧ ಎಂದರೆ ಸಿಟ್ಟು, ಈರ್ಷ್ಯ, ಪರರನ್ನು ಪೀಡಿಸಬೇಕೆಂಬ ಅಪೇಕ್ಷೆ, ದ್ವೇಷ ಮುಂತಾದವುಗಳಿಲ್ಲದೆ ಇರುವುದು.

೧. ಧೃತಿ.—ಧೈರ್ಯವು ಮನುಷ್ಯನ ಹೃದಯದಲ್ಲಿ ಸರ್ವಕಾಲದಲ್ಲಿಯೂ ಇರಬೇಕು. ಸಿಂಹ, ಹುಲಿ, ಮೊದಲಾದವುಗಳ ಸಮಾಗಮವಾದಾಗಲೂ, ಶತ್ರುಗಳ ಸಂಗಡ ರಣದಲ್ಲಿ ಯುದ್ಧಮಾಡಬೇಕಾದಾಗಲೂ, ಅವಶ್ಯಕವಾಗಿ ಇರಬೇಕಾದ ಗುಣಕ್ಕೂ ಧೈರ್ಯವೆಂದು ಹೆಸರುಂಟು. ಆದರೆ ಅದು ಧೈರ್ಯವೆಂಬ ಶಬ್ದದ ಗೌಣವಾದ ಅರ್ಥವು. ಧರ್ಮಸಂಬಂಧವಾದ ಧೈರ್ಯವೇ ಧೈರ್ಯದ ಮುಖ್ಯಾರ್ಥವಾಗಿದೆ. ಹೊರಗಿನ ಶತ್ರುಗಳ ಸಂಗಡ ನಿರ್ಭಯವಾಗಿ ಪರಾಕ್ರಮದಿಂದ ಯುದ್ಧ

ವನ್ನು ಮಾಡುವವರು ಬಹು ಜನರಿದ್ದಾರೆ. ಪರಂತು ಮನಸ್ಸಿನಲ್ಲಿ ಸರ್ವ ಕಾಲದಲ್ಲಿಯೂ ನಿಂತಿರುವ ಕಾಮ ಕ್ರೋಧ ಮೊದಲಾದ ಶತ್ರುಗಳ ಸಂಗಡ 'ನಾನು ಧರ್ಮಕ್ಕೆ ವಿರುದ್ಧವಾದ ಕೆಲಸ ಮಾಡುವುದಿಲ್ಲ' ಎಂದು ನಿಶ್ಚಯಿಸಿ ಯುದ್ಧ ಮಾಡುವ ಧೈರ್ಯಶಾಲಿಗಳು ಬಹಳ ಅಪೂರ್ವ. ಮನುಷ್ಯರ ಮನಸ್ಸಿನಮೇಲೆ ಅಧಿಕಾರವನ್ನು ನಡೆಯಿಸುವ ಕಾಮಕ್ರೋಧಾದಿಗಳು ಬಹು ಬಲಿಷ್ಠವಾದುವುಗಳು. ಅವುಗಳ ಮೇಲೆ ದೊಡ್ಡದೊಡ್ಡವರ ಸಾಹಸವುಕೂಡ ನಡೆವುದಿಲ್ಲ. ಎಂಥ ಧಾರ್ಮಿಕನಾಗಲಿ ಜ್ಞಾನಿಯಾಗಲಿ ಲೋಭ ಮುಂತಾದುವುಗಳ ಬಲೆಗೆ ಸಿಕ್ಕದೆ ಇದ್ದರೆ ಪರಿಣಾಮವಾಗುತ್ತದೆ. ಒಂದುಸಾರಿ ಆ ಬಲೆಗೆ ಸಿಕ್ಕಿದನಂತರ ಹೊರಗೆ ಹೊರಡುವುದು ಪ್ರಯಾಸವಾಗುತ್ತದೆ. ಆದುದರಿಂದ ಧರ್ಮವಿರುದ್ಧವಾಗಿ ನಡೆಯುವಂತೆ ನಿಶ್ಚಯಿಸುವ ಧೈರ್ಯವೇ ನಿಜವಾದ ಧೈರ್ಯವೆಂದು ತಿಳಿಯಬೇಕು. ಹೀಗೆ ದೊಡ್ಡದಾದ ಮತ್ತು ಸರ್ವಕಾರ್ಯಸಿದ್ಧಿಗೂ ಅನುಕೂಲವಾದ ಧೈರ್ಯವನ್ನು ನೀವು ಸಂಪಾದಿಸಬೇಕು. ನಿಮ್ಮ ಧರ್ಮವನ್ನು ನಾಶಮಾಡುವುದಕ್ಕೆ ಸಾವಿರಾರು ವ್ಯಾಮೋಹದ ವಿಷಯಗಳು ನಿಮ್ಮ ಸಮೀಪಕ್ಕೆ ಬರುತ್ತವೆ. ಇವುಗಳನ್ನು ಕಣ್ಣೆತ್ತಿನೋಡದೆ ನಿಮ್ಮ ಧರ್ಮಮಾರ್ಗದಲ್ಲಿ ನೀವು ನಡೆಯಬೇಕು. ನಿಮ್ಮ ಧರ್ಮಮಾರ್ಗಕ್ಕೆ ವಿಘ್ನವಾಗಿ ಬರುವ ಕಾಮ ಕ್ರೋಧ ಮುಂತಾದುವುಗಳ ಸಂಗಡ ನೀವು ಯುದ್ಧಮಾಡಿ ಗೆದ್ದರೆ ನೀವು ಎಲ್ಲವನ್ನೂ ಗೆದ್ದಂತೆ ಆಗುವುದು. ಜಗತ್ತಿನಲ್ಲಿ ಈ ಶತ್ರುಗಳನ್ನು ಗೆದ್ದವನೇ ಶೂರನು; ಇಂಥ ಶೂರನಿಗೆ ಪೂಜ್ಯತೆಯುಂಟು.

೨. ಕ್ಷಮೆ.—ಕ್ಷಮೆ ಎಂಬ ಗುಣಕ್ಕೆ ಬೆಲೆಯೇ ಇಲ್ಲ. ಕ್ಷಮಾಬಲವುಳ್ಳವರಿಗೆ ಪ್ರಾಯೇಣ ಶತ್ರುಗಳೇ ಇರುವುದಿಲ್ಲ. ಕ್ಷಮೆಯಿಲ್ಲದಿದ್ದರೆ ಜನರಲ್ಲಿ ಪರಸ್ಪರ ವೈರ ಹುಟ್ಟುತ್ತದೆ. ನಮಗಾರಾದರೂ ಅಪಕಾರ ಮಾಡಿದರೆ ನಾವು ಅದನ್ನು ಎಣಿಸದೆ ಕ್ಷಮಿಸಿದರೆ, ನಮ್ಮ ಮನಸ್ಸಿಗೆ ಉಂಟಾಗುವ ಸುಖವಿಂಥದೆಂದು ಹೇಳಲಿಕ್ಕೆ ಆಗುವುದಿಲ್ಲ. ಕ್ಷಮಾ ಬಲವುಳ್ಳವರನ್ನು ದುರ್ಜನರು ಏನು ಮಾಡಬಲ್ಲರು? ಅವರ ವಿಷಯದಲ್ಲಿ, ತಮ್ಮಷ್ಟಕ್ಕೆ ತಾವೇ ನಾಚಿಕೊಂಡು ಸುಮ್ಮನಿರುತ್ತಾರೆ. ಕ್ಷಮೆ ಮಾಡುವವನು ಮನಸ್ಸಿನ ಶಾಂತಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರನಾ

ಗುತ್ತಾನೆ. ಕ್ಷಮಿಸಲ್ಪಟ್ಟವನು ಕ್ಷಮಿಸಿದವನ ಒಳ್ಳೆಯತನವನ್ನು ನೋಡಿ ಬಂದಲ್ಲದಿದ್ದರೆ ಮತ್ತೊಂದು ವೇಳೆಯಲ್ಲಿ ತನ್ನ ಕೆಟ್ಟ ಕೆಲಸಕ್ಕಾಗಿ ಪಶ್ಚಾತ್ತಾಪ ಪಟ್ಟು ಅದನ್ನು ಬಿಟ್ಟುಬಿಡುತ್ತಾನೆ. ಈ ಪ್ರಕಾರ ಲೋಕದಲ್ಲಿ ಬಹಳ ಅನರ್ಥಗಳು ನಡೆವುದು ನಿಂತುಹೋಗುತ್ತದೆ. ಆದಕಾರಣ ತಮಗೂ ಪರರಿಗೂ ಹಿತಕಾರಿಯಾದ ಕ್ಷಮಾಗುಣವು ನಿಮ್ಮಲ್ಲಿ ಸರ್ವಕಾಲದಲ್ಲಿಯೂ ಇರಬೇಕು. ಆರಾವರೂ ನಿಮಗೆ ಅಪಕಾರವನ್ನು ಮಾಡಿದರೆ ಅವರಮೇಲೆ ನಿಮ್ಮ ಹಗೆಯನ್ನು ತೀರಿಸಿಕೊಳ್ಳಬೇಕೆಂಬ ಅಪೇಕ್ಷೆ ಸರ್ವಥಾ ಇರಬಾರದು. ಒಬ್ಬನಿಗೆ ಮತ್ತೊಬ್ಬನು ಕೆಟ್ಟುದನ್ನಾಗಲಿ ಒಳ್ಳೆಯದನ್ನಾಗಲಿ ಮಾಡಲಾರನು; ಆದರೆ ನಿಮಿತ್ತಮಾತ್ರನಾಗುತ್ತಾನೆ. ಈಶ್ವರ ನಿಂಬಂಧನೆಯ ಪ್ರಕಾರ ಆಗತಕ್ಕದು ಆಗಿಯೇ ಆಗುವುದು. ತಮ್ಮ ಇಷ್ಟಾನುಸಾರವಾಗಿ ತಮಗಾಗಲಿ ಮತ್ತೊಬ್ಬರಿಗಾಗಲಿ ಶುಭಾಶುಭಗಳನ್ನು ಹಿಂದೆಯಾರೂ ಪಡೆದಿಲ್ಲ; ಈಗಲೂ ಪಡೆಯಲಾರರು; ಮುಂದೆಯೂ ಪಡೆವುದಕ್ಕಾಗುವುದಿಲ್ಲ. ಮತ್ತೊಬ್ಬನಿಂದ ತಮಗೆ ಕೆಟ್ಟುದಾಯಿತೆಂದು ಅಪವಾದವನ್ನು ಕಲ್ಪಿಸಿಕೊಂಡು ಅದಕ್ಕೆ ಪ್ರತೀಕಾರವನ್ನು ಮಾಡುವುದಕ್ಕೆ ಪ್ರಯತ್ನಿಸುವುದು ವಿವೇಕಿಗಳ ಲಕ್ಷಣವಲ್ಲ. ನೀವು ಅವರಿಗೆ ಅಪಕಾರ ಮಾಡುವುದರಿಂದ ಅವರು ನಿಮಗೆ ಮಾಡಿದ ಅಪಕಾರ ಹೋದಹಾಗೆ ಆಗುವುದಿಲ್ಲ. ಇತರರಿಗೆ ಕೇಡು ಮಾಡಬೇಕೆಂಬ ದುರಾಲೋಚನೆಗೆ ನಿಮ್ಮ ಪವಿತ್ರವಾದ ಮನಸ್ಸಿನಲ್ಲಿ ಅವಕಾಶ ಕೊಡುವುದುಮಾತ್ರ ಆಗುವುದಲ್ಲದೆ ನಿಮ್ಮ ಅಮೂಲ್ಯವಾದ ಹೊತ್ತು ವ್ಯರ್ಥವಾಗಿ ಕಳೆದು ಹೋಗುವುದು. ಆದುದರಿಂದ ನೀವು ಯಾವಾಗಲೂ ಉಗ್ರಸ್ವಭಾವವನ್ನು ಬಿಟ್ಟು ಶಾಂತರಾಗಿ ಇರಬೇಕು. ಶಾಂತಿಯುಳ್ಳವರಿಗೆ ಭೂಷಣವುಂಟು; ಶಾಂತಿ ಇಲ್ಲದವರಿಗಿಲ್ಲ. ಸ್ತ್ರೀಯರಿಗೆ ಪಂಡಿತರು ಭೂಮಿಯ ಸಾಮ್ಯವನ್ನು ಕೊಟ್ಟು ಇದ್ದಾರೆ. ಭೂಮಿಯು ಸಕಲ ಪ್ರಾಣಿಗಳಿಗೂ ತಾಯಿಯಂತೆ ಇದೆ. ಇದರಲ್ಲಿ ಕ್ಷಮಾಗುಣವು ಅಪಾರವಾಗಿದೆ. ಕರ್ಷಕನು ತನ್ನ ನೇಗಿಲಿನಿಂದ ಭೂಮಿಯನ್ನು ಸೀಳುತ್ತಾನೆ. ಇದಕ್ಕಾಗಿ ಭೂಮಿಗೆ ಕೋಪವೇನಾದರೂ ಉಂಟೆ? ಹೆಚ್ಚಾಗಿ ಸೀಳಿದಹಾಗೆಲ್ಲ ಅವನಿಗೆ ಹೆಚ್ಚು ಫಲವನ್ನು ಕೊಡುತ್ತದೆ. ಇಂಥ ಕ್ಷಮಾಗುಣವು ಭೂಮಿಯಲ್ಲಿ ಹೊರತು ಇನ್ನಾವುದರಲ್ಲಿಯೂ ಇಲ್ಲ. ಈ ಭೂಮಿಯು ಸಾ

ವ್ಯವನ್ನು ಪಂಡಿತರು ನಿಮಗೆ ಕೊಟ್ಟಿರುವುದರಿಂದ ಅದು ನಿಮಗೆ ಒಪ್ಪು ವಂತೆ ನೀವು ಕ್ಷಮಾಪರರಾಗಿ ಇರಬೇಕು.

೩. ದಮ.—ದಮ ಅಂದರೆ ಮನೋನಿಗ್ರಹವು. ಈ ಗುಣವು ಮನುಷ್ಯರಲ್ಲಿ ಮುಖ್ಯವಾಗಿರಬೇಕು. ಆದರೆ ಇದನ್ನು ಕಾಪಾಡಿ ಕೊಂಡಿರುವುದು ಶ್ರಮಸಾಧ್ಯವಾದ ಕೆಲಸ. ಮನುಷ್ಯನು ಮಿಕ್ಕ ಯಾವಕಷ್ಟದ ಕೆಲಸವನ್ನಾದರೂ ಮಾಡಬಹುದು; ಮನಸ್ಸನ್ನು ನಿಗ್ರ ಹಿಸುವುದು ಮಾತ್ರ ಆಗುವುದಿಲ್ಲ ಎಂದು ವಿದ್ವಾಂಸರು ಹೇಳಿ ಇದ್ದಾರೆ. ಎಲ್ಲಾ ವಿಷಯುಗಳಲ್ಲಿಯೂ ಮನಸ್ಸನ್ನು ನಿಗ್ರಹಿಸುವುದು ಸಾಧ್ಯವೆಂದು ಹೇಳುವುದಕ್ಕೆ ಆಗುವುದಿಲ್ಲ. ಆದರೂ ತಮ್ಮ ಶಕ್ತ್ಯನುಸಾರವಾಗಿ ಧೈರ್ಯ ದಿಂದ ಯತ್ನ ಮಾಡಬೇಕು. ಮನೋನಿಗ್ರಹವಿಲ್ಲದಿದ್ದರೆ ನಾನಾವಿಧ ವಾದ ಸಂಕಟಗಳು ಪ್ರಾಪ್ತವಾಗುತ್ತವೆ. ಇದಕ್ಕೆ ಧೈರ್ಯವೇ ಮುಖ್ಯ ಸಾಧನವೆಂದು ಮೊದಲೇ ಹೇಳಿದೇನೆ.

೪. ಅಸ್ತೇಯ.—ಅಸ್ತೇಯವೆಂದರೆ ಕಳವುಮಾಡದೆ ಇರುವುದು. ಈ ಗುಣವು ಮನುಷ್ಯನಲ್ಲಿ ಅವಶ್ಯಕವಾಗಿ ಇರತಕ್ಕುದೆಂದು ಹೇಳ ತಕ್ಕ ಪ್ರಕೃತವಿಲ್ಲ. ಕಳವು ಎರಡು ವಿಧವಾಗಿದೆ:—ಪರರ ಒಡವೆಯನ್ನು ಅವರ ಅನುಮತಿ ಇಲ್ಲದೆ ತೆಗೆದುಕೊಳ್ಳುವುದು ಒಂದು ವಿಧ; ಮನಸ್ಸಿ ನಲ್ಲಿ ಒಂದು ವಿಧವಾಗಿಯೂ ಹೊರಗೆ ಒಂದು ವಿಧವಾಗಿಯೂ ಆಚರಿಸು ವುದು ಮತ್ತೊಂದು ವಿಧ. ಹೀಗೆ ಕಳವು ಎರಡು ವಿಧವಾಗಿರುವುದು. ಇವೆರಡನ್ನೂ ನೀವು ಮಾಡಬಾರದು. ನಿಮ್ಮನ್ನು ಕೇಳದೆ ನಿಮ್ಮ ಒಡವೆಯನ್ನು ಇತರರು ತೆಗೆದುಕೊಂಡರೆ ನಿಮ್ಮ ಮನಸ್ಸಿಗೆ ಹೇಗೆ ವ್ಯಾಕು ಲವಾಗುತ್ತದೋ, ಇತರರನ್ನು ಕೇಳದೆ ಅವರ ಒಡವೆಯನ್ನು ನೀವು ತೆಗೆದುಕೊಂಡರೆ ಅವರಿಗೂ ಹಾಗೆಯೇ ವ್ಯಾಕುಲವಾಗುತ್ತದೆ. ಆದುದ ರಿಂದ ಹೀಗೆ ಮಾಡುವುದು ಉಚಿತವಲ್ಲ. ಕಳ್ಳನೆಂಬು ಒಂದುಸಾರಿ ಜನ ರಿಗೆ ಗೊತ್ತಾದಮೇಲೆ ಅವನ ಗೌರವ ಉಳಿವುದಿಲ್ಲ. ಮನಸ್ಸಿನಲ್ಲಿ ಒಂದು ವಿಧವಾಗಿಯೂ ಹೊರಗೆ ಒಂದು ವಿಧವಾಗಿಯೂ ಆಚರಿಸುವುದು ಬಹಳ ಕೆಟ್ಟುದು. ನೀವು ಹೊರಗೆ ಒಳ್ಳೆಯತನವನ್ನು ತೋರಿಸಿಕೊಂಡು ಮನಸ್ಸಿನಲ್ಲಿ ಪಾಪದ ಆಲೋಚನೆಯನ್ನು ಮಾಡುತ್ತಾ ಈ ನಿಮ್ಮ ಪಾಪದ ಆಲೋಚನೆ ಯಾರಿಗೂ ತಿಳಿವುದಿಲ್ಲವೆಂದು ತಿಳಿದುಕೊಳ್ಳಬಹುದು. ಜನ

ರು ಕಾಣದಹಾಗೆ ನೀವು ಪಾಪವನ್ನು ಮಾಡಿದರೆ ಅದಕ್ಕೆ ನಿಮ್ಮ ಮನಸ್ಸು
ಸಾಕ್ಷಿಯಾಗಿ ಇರುವುದಲ್ಲದೆ ದೇವರೂ ತಿಳಿಯುತ್ತಾನೆ. ನೀವು ಒಳಗೆ
ಪಾಪವನ್ನು ಮಾಡುತ್ತಿರುವಾಗ ನಿಮ್ಮ ಹೊರಗಿನ ಸದಾಚಾರವನ್ನು
ನೋಡಿ ಜನರು ನಿಮ್ಮನ್ನು ಸಾಧುಗಳೆಂದೂ ಜ್ಞಾನಿಗಳೆಂದೂ ಕೊಂಡಾ
ಡುತ್ತಾ ಇದ್ದರೆ ಈ ಶ್ಲಾಘನೆಗೆ ನೀವು ಯೋಗ್ಯರಲ್ಲವೆಂದು ನಿಮ್ಮ ಮನ
ಸ್ಸು ನಿಮಗೆ ಹೇಳುವುದಿಲ್ಲವೆ? ಇದೂ ಅಲ್ಲದೆ ಮುಚ್ಚಿಕೊಂಡು ಪಾಪಗ
ಳನ್ನು ಮಾಡುವ ವಾಡಿಕೆ ಬಿದ್ದಮೇಲೆ ನೀವು ನಿರ್ಭೀತರಾಗಿ ಹೆಚ್ಚು
ಪಾಪಗಳನ್ನು ಮಾಡುತ್ತೀರಿ. ಮನುಷ್ಯನು ಮೊದಲುಮಾಡಿದ ಒಂದೆ
ರಡು ಸಣ್ಣ ಕೆಟ್ಟ ಕೆಲಸಗಳು ಜೀರ್ಣಿಸಿದಲ್ಲಿ, ಮುಂದೆಯೂ ದೊಡ್ಡ
ದೊಡ್ಡ ದುಷ್ಕೃತ್ಯಗಳನ್ನು ಮಾಡಲಿಕ್ಕೂ ಸಂಕೋಚಪಡುವುದಿಲ್ಲ.
ಒಂದು ವೇಳೆ ಸಂಕೋಚವಾದರೂ ಮಾಡಬಾರದೆಂದು ಮನಸ್ಸಿದ್ದರೂ
ಅಭ್ಯಾಸಬಲದಿಂದ ಮಾಡಲೇಬೇಕಾಗುತ್ತದೆ. ಹೀಗೆ ಮಾಡುತ್ತಿರುವ
ಕೆಟ್ಟ ಕೆಲಸಗಳನ್ನು ಎಷ್ಟುದಿವಸ ಮುಚ್ಚಿಕೊಳ್ಳಬಹುದು? ಒಂದ
ಲ್ಲದಿದ್ದರೆ ಇನ್ನೊಂದು ದಿವಸ ಹೊರಗೆ ಬಂದೇ ಬರುತ್ತದೆ. ಅನಂ
ತರ ಆತನಿಗೆ ಆಗುವ ಮಾನಹಾನಿ ಇಷ್ಟೆಂದು ಹೇಳಲಿಕ್ಕೆ ಆಗು
ವುದಿಲ್ಲ. ಕೆಲವರು ಇಂಥ ಅವಮಾನವನ್ನು ಸಹಿಸಲಾರದೆ ಪ್ರಾಣ
ತ್ಯಾಗವನ್ನು ಕೂಡ ಮಾಡುತ್ತಾರೆ. ಇದಕ್ಕಿಂತ ದುಃಖಕರವಾದ
ಸಂಗತಿ ಇನ್ನಾವುದುಂಟು. ಆದುದರಿಂದ ನೀವು ಈ ಎರಡು ವಿಧ
ವಾದ ಕಳ್ಳತನವನ್ನೂ ಮಾಡಬಾರದು. ಎಂಥ ವಿಪತ್ತು ಬಂದರೂ
ಅದರಲ್ಲಿ ಪ್ರವರ್ತಿಸಬಾರದು. ಸಣ್ಣ ಕಳ್ಳತನದಿಂದ ದೊಡ್ಡ ಅರಿಷ್ಟ
ವೇನೂ ಸಂಭವಿಸುವುದಿಲ್ಲವೆಂದು ಯೋಚಿಸಿ, ಸಣ್ಣ ಕಳ್ಳತನಕ್ಕೂ
ಕೂಡ ಪ್ರವರ್ತಿಸಬಾರದು. ಅಕೃತ್ಯದಲ್ಲಿ ವಾಡಿಕೆ ಬಿದ್ದಮೇಲೆ ಅವನ್ನು
ಬಿಡಲಿಕ್ಕೆ ಆಗುವುದಿಲ್ಲ. ಎಂದಾದರೂ ಒಂದುದಿವಸ ಹೊರಗೆ ಬಂದೇಬ
ರುತ್ತದೆ. ಪಾಪವೆಂಬ ವಿಷವೃಕ್ಷದ ಬೀಜವು ನಿಮ್ಮ ಮನಸ್ಸಿನಲ್ಲಿ
ನಾಟ ಮೊಳಕೆಯಾದರೆ ಅದು ಎಳೆಯದಾಗಿರುವಾಗಲೇ ಅದನ್ನು ಸಹ
ಮೂಲವಾಗಿ ಕಿತ್ತು ಹಾಕಬೇಕು. ಸ್ವಲ್ಪ ಬೇರು ಬಿಟ್ಟುಕೊಳ್ಳುವುದ
ಕ್ಕೆ ಅವಕಾಶಕೊಟ್ಟಲ್ಲಿ ಬಳಿಕ ಅದನ್ನು ತೆಗೆದುಹಾಕುವುದಕ್ಕೆ ಸರ್ವಥಾ
ಆಗುವುದಿಲ್ಲ. ನೀವು ನಿಮ್ಮ ಮನಸ್ಸನ್ನು ಯಾವ ವಿಧವಾದ ಲೋಭ

ಕ್ಕೆ ಬಳಪಡಿಸದೆ ಇದ್ದರೆ ನಿಮ್ಮಿಂದ ಪಾಪದ ಕೆಲಸಗಳು ನಡೆವುದಿಲ್ಲ. ಲೋಭವೆಂಬುದು ಸಕಲ ಪಾಪಕೃತ್ಯಗಳಿಗೂ ಜನ್ಮಸ್ಥಾನವಾಗಿದೆ, ಮನುಷ್ಯನಲ್ಲಿ ಎಷ್ಟುಸುಗುಣಗಳಿದ್ದರೂ ಲೋಭದಿಂದ ಅವು ಮಾಲಿನ್ಯವನ್ನು ಹೊಂದುತ್ತವೆ. ಆದುದರಿಂದ ಪಾಪಕ್ಕೆ ಮೂಲವಾಗಿಯೂ ಅಪಕೀರ್ತಿಗೆ ತೌರುಮನೆಯಾಗಿಯೂ ಇರುವ ಲೋಭವನ್ನು ನೀವು ಬಿಡಬೇಕು. ಇಲ್ಲವಾದರೆ ಕಳ್ಳತನ ಮುಂತಾದುದನ್ನು ಮಾಡಿ ಕೊನೆಗೆ ಆತ್ಮಘಾತವನ್ನು ಮಾಡಿಕೊಳ್ಳಬೇಕಾದೀತು.

೫. ಶೌಚ.—ಶೌಚ ಎಂದರೆ ಶುಚಿತ್ವ. ಅದು ಅಂತರಂಗದ ಶುಚಿತ್ವವೆಂದೂ ಬಹಿರಂಗವ ಶುಚಿತ್ವವೆಂದೂ ಎರಡು ವಿಧವಾಗಿದೆ. ಇವೆರಡಕ್ಕೂ ಪರಸ್ಪರ ಸಂಬಂಧವು ಬಹಳವಾಗಿರುವುದರಿಂದ ಇವುಗಳಲ್ಲಿ ಒಂದು ಇಲ್ಲದೆ ಇನ್ನೊಂದು ದೊರೆವುದಿಲ್ಲ. ಒಂದುವೇಳೆ ದೊರೆತಾಗ್ಯೂ ಬಹಳಕಾಲ ನಿಲ್ಲುವುದಿಲ್ಲ. ಆದುದರಿಂದ ಇವೆರಡುವಿಧವಾದ ಶೌಚವನ್ನೂ ಮನುಷ್ಯನು ಕಾಪಾಡಿಕೊಳ್ಳಬೇಕು. ಸ್ನಾನವನ್ನು ಮಾಡಿ ಶರೀರವನ್ನೂ ಬಟ್ಟೆಗಳನ್ನೂ ಪಾತ್ರೆ ಮುಂತಾದುವುಗಳನ್ನೂ ನಿರ್ಮಲವಾಗಿ ಇಟ್ಟುಕೊಳ್ಳುವುದು ಹೊರಗಿನ ಶೌಚವೆನ್ನಿಸಿಕೊಳ್ಳುತ್ತದೆ. ಈ ಪ್ರಕಾರವಿದ್ದರೆ ಯಾವ ಕೆಲಸ ಮಾಡಲಿಕ್ಕೂ ಮನುಷ್ಯನಿಗೆ ಪಾಲುಮಾರಿಕೆ ಉಂಟಾಗುವುದಿಲ್ಲ; ರೋಗಾದಿಗಳೂ ಬರುವುದಿಲ್ಲ. ಮನಸ್ಸು ನಿರ್ಮಲವಾಗಿದ್ದರೆ ಧರ್ಮ ಕೆಲಸಗಳನ್ನು ಮಾಡಲಿಕ್ಕೆ ಉತ್ಸಾಹವುಂಟಾಗುತ್ತದೆ. ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡಿರುವುದು ಒಳಗಿನ ಶುಚಿತ್ವವು. ಹೊರಗೆ ಎಷ್ಟು ನಿರ್ಮಲವಾಗಿದ್ದರೂ ಅಂತರ್ಯವು ನಿರ್ಮಲವಾಗಿಲ್ಲದಿದ್ದರೆ ಹೊರಗಿನ ಶುಚಿತ್ವದಿಂದ ಏನೂ ಪ್ರಯೋಜನವಾಗುವುದಿಲ್ಲ. ಅವುದಾದರೂ ಪಾತ್ರೆಯು ಹೊರಗೆ ಶುಭ್ರವಾಗಿದ್ದು ಒಳಗೆ ಕೊಳೆ ತುಂಬಿದ್ದರೆ, ಅದನ್ನು ನೋಡಿ ಜನರು ಹೇಗೆ ಸಹಿಸುವುದಿಲ್ಲವೋ, ಹಾಗೆಯೇ ಹೊರಗೆ ಮಾತ್ರ ನಿರ್ಮಲವಾಗಿದ್ದು ಒಳಗೆ ಮಲಿನವಾಗಿರುವವನು ಜನರಿಗೆ ಇಷ್ಟನಾಗುವುದಿಲ್ಲ. ಅಪವಿತ್ರವಾದ ಮನಸ್ಸುಳ್ಳವರಿಗೆ ಆವಾಗಲೂ ಮರ್ಯಾದೆ ನಡೆವುದಿಲ್ಲ. ಅವರ ಮನಸ್ಸಿನಲ್ಲಿ ನಾನಾವಿಧವಾದ ಪಾಪದ ಆಲೋಚನೆಗಳು ಆವಾಗಲೂ ನೆಲೆಗೊಂಡಿರುವುದರಿಂದ ಅವರಿಗೆ ಸುಖವಿರುವುದಿಲ್ಲ. ಇಂಥ ಮನುಷ್ಯರ ಮುಖವ

ನ್ನು ನೋಡಿದಕೂಡಲೇ ಅವರ ಮುಖಭಾವವು ಒಂದು ಕನ್ನಡಿಯ ಹಾಗೆ ಇರುವುದರಿಂದ ಅವರ ಮನಸ್ಸಿನ ಆಲೋಚನೆಗಳು ಪ್ರಾಯೇಣ ಎಲ್ಲರಿಗೂ ಗೊತ್ತು ಆಗುತ್ತವೆ. ಎಷ್ಟು ಪ್ರಯತ್ನಮಾಡಿದರೂ ಅದನ್ನು ಮುಚ್ಚುವುದಕ್ಕಾಗುವುದಿಲ್ಲ. ಆದುದರಿಂದ ಮನಸ್ಸಿನಲ್ಲಿ ಸರ್ವಕಾಲದಲ್ಲಿಯೂ ನಿರ್ಮಲವಾದ ಆಲೋಚನೆಯನ್ನು ಮಾಡುತ್ತಿರಬೇಕು. ಅದರಲ್ಲಿ ಧರ್ಮವಾಸನೆಯನ್ನು ಇಡಬೇಕು. ಒಂದು ಸ್ಥಳದಲ್ಲಿ ಒಂದು ಪದಾರ್ಥವನ್ನು ಇಟ್ಟರೆ ಆ ಸ್ಥಳದಲ್ಲಿ ಇನ್ನೊಂದನ್ನು ಇಡುವುದಕ್ಕಾಗುವುದಿಲ್ಲ. ನಿಮ್ಮ ಮನಸ್ಸಿನಲ್ಲಿ ಸಂಪೂರ್ಣವಾಗಿ ಧರ್ಮವಾಸನೆಯನ್ನು ಇಟ್ಟಲ್ಲಿ ಪಾಪದ ಆಲೋಚನೆಗಳಿಗೆ ಅಲ್ಲಿ ಸ್ಥಳ ದೊರೆವುದಿಲ್ಲ. ಈ ಎರಡು ವಿಧದ ಶೌಚದಿಂದ ನಿಮಗೆ ಉಂಟಾಗುವ ಸುಖವು ಅನುಭವದಿಂದಲೇ ಗೊತ್ತಾಗತಕ್ಕುದು. ಆದುದರಿಂದ ಅದು ಬಣ್ಣಿಸಲಸಾಧ್ಯವು.

೬. ಇಂದ್ರಿಯ ನಿಗ್ರಹವು.—ನಿಮ್ಮ ಇಂದ್ರಿಯಗಳು ತುರಗಗಳಂತೆ ಇವೆ. ಅವುಗಳ ಗತಿಯನ್ನು ತಡೆವುದು ಸುಲಭವಲ್ಲ. ಜ್ಞಾನವೂ ಧೈರ್ಯವೂ ಇದ್ದವನಿಗೆ ಅವನ್ನು ನಿಗ್ರಹಿಸುವುದು ತಕ್ಕಮಟ್ಟಿಗೆ ಸುಲಭವಾಗಿರುವುದು. ಪಂಡಿತರು ಈ ಇಂದ್ರಿಯಗಳನ್ನು ರಥಕ್ಕೆ ಕಟ್ಟುವ ಮದಿಸಿದ ಕುದುರೆಗಳಿಗೆ ಹೋಲಿಸುತ್ತಾರೆ. ಇವು ತಮ್ಮ ಇಷ್ಟವಿದ್ದ ಕಡೆಗೆ ಎಳೆದುಕೊಂಡು ಹೋಗಬೇಕೆನ್ನುತ್ತವೆ. ಅಡ್ಡಿ ಮಾಡದೆ ಬಿಟ್ಟಲ್ಲಿ ಅವುಗಳನ್ನು ಹೂಡಿರುವ ಶರೀರವೆಂಬ ರಥವು ಮುರಿದು ಚೂರು ಚೂರಾಗುವುದು. ಆದುದರಿಂದ ಈ ಕುದುರೆಗಳ ಕಡಿವಾಣಗಳನ್ನು ಬಹು ಜಾಗರೂಕತೆಯಿಂದ ಹಿಡಿದಿರಬೇಕು. ಆಯಾ ಇಂದ್ರಿಯಗಳಿಗೆ ಇಷ್ಟವಾಗಿರುವ ವಿಷಯಗಳು ಅವುಗಳ ಸಮೀಪಕ್ಕೆ ಬಂದಲ್ಲಿ ಅವುಗಳು ಸ್ವಾಧೀನ ತಪ್ಪಿಹೋಗಲಿಕ್ಕೆ ಯತ್ನಿಸುತ್ತವೆ. ಆದುದರಿಂದ ಇಂಥ ವಿಷಯಗಳನ್ನು ಅವುಗಳ ಸಮೀಪಕ್ಕೆ ಬರಗೊಡಬಾರದು. ಒಂದು ವೇಳೆ ಮೋಹಕ ವಿಷಯಗಳು ಸಮೀಪದಲ್ಲಿ ಇಲ್ಲದೆ ಇದ್ದರೂ ಇಂದ್ರಿಯಾಶ್ವಗಳು ಸ್ವೇಚ್ಛೆಯಾಗಿ ಹೋಗುವಂತೆ ಕಂಡಲ್ಲಿ ಆಗ ಅವುಗಳ ಕಡಿವಾಣಗಳನ್ನು ಹಿಡಿದು ಎಳೆಯಬೇಕು. ಮನಸ್ಸು ಇಂದ್ರಿಯಗಳೆಂಬ ಕುದುರೆಗಳಿಗೆ ಕಡಿವಾಣವಾಗಿದೆ. ಈ ಮನಸ್ಸನ್ನು ಸರ್ವಕಾಲದಲ್ಲಿಯೂ ಸತ್ಕಾರ್ಯದಲ್ಲಿ ಇಟ್ಟಿದ್ದರೆ ಇಂದ್ರಿಯಗಳು ಸ್ವಾಧೀನವಾಗಿರುತ್ತವೆ.

ಇಂದ್ರಿಯಗಳನ್ನು ನಿಮ್ಮ ಅಧೀನದಲ್ಲಿಟ್ಟುಕೊಂಡಿರಬೇಕೇ ಹೊರತು ನೀವು ಅವುಗಳಿಗೆ ಅಧೀನರಾಗಿ ಅವು ಎಳೆದ ಕಡೆಗೆ ಹೋಗಬಾರದು. ಇಂದ್ರಿಯಾಧೀನರಾದವರು ಪಶುಗಳಿಗಿಂತಲೂ ಹೀನರಾಗಿ ಕಾಣುವುದರಿಂದ ಅವರನ್ನು ಯಾರೂ ಮನುಷ್ಯರೆನ್ನುವುದಿಲ್ಲ. ಜಿತೇಂದ್ರಿಯರಾಗಿ ಇರುವವರು ದಿನೇ ದಿನೇ ಉತ್ತಮವಾದ ಕೆಲಸಗಳನ್ನು ಮಾಡುವುದರಿಂದ ಅವರನ್ನು ಜನರು ದೇವರಂತೆ ಭಾವಿಸುತ್ತಾರೆ.

೭. ಧೀ.—ಧೀ ಎಂದರೆ ಧರ್ಮವಿಷಯಕವಾದ ಬುದ್ಧಿಯು. ಜನರು ಮಾಡುವ ಕೆಲಸಗಳಲ್ಲಿ ಧರ್ಮಕ್ಕೆ ಅನುಸಾರವಾದುದಾವುದು ? ವಿರೋಧವಾದುದಾವುದು ? ಎಂಬುದನ್ನು ಆಲೋಚನೆಯಿಂದ ನಿಶ್ಚಯಿಸುವುದು ಧಾರ್ಮಿಕವಾದ ಬುದ್ಧಿಯ ಕೆಲಸವಾಗಿದೆ. ಇಂಥ ಬುದ್ಧಿಗೆ ವಿವೇಕವೆಂದು ಹೇಳುತ್ತಾರೆ. ವಿವೇಕವಿಲ್ಲದಿದ್ದರೆ ಸದಸದ್ವಿಚಾರಮಾಡಿ ಒಳ್ಳೆಯ ಕೆಲಸದಲ್ಲಿ ಪ್ರವರ್ತಿಸುವುದಕ್ಕೂ ಕೆಟ್ಟ ಕೆಲಸಗಳನ್ನು ಬಿಡುವುದಕ್ಕೂ ಆಗುವುದಿಲ್ಲ. ಆದರೆ ಎಲ್ಲರಿಗೂ ಬುದ್ಧಿಯು ಒಂದೇ ಸಮನಾಗಿರುವುದಿಲ್ಲ. ಧಾರ್ಮಿಕನಿಗೆ ಅನುಚಿತವಾದುದೆಂದು ಕಾಣುವ ಕೆಲಸವು ಇತರರಿಗೆ ಒಳ್ಳೆಯದೆಂದು ಕಾಣುತ್ತದೆ. ಆದುದರಿಂದ ವಿಷಯಗಳಲ್ಲಿ ಸದಸದ್ವಿಚಾರವನ್ನು ಮಾಡುವುದಕ್ಕೆ ಯೋಗ್ಯತೆಯನ್ನು ಉಂಟು ಮಾಡುವ ಬುದ್ಧಿಯು ನಿಮ್ಮಲ್ಲಿ ಇರಬೇಕು. ಧರ್ಮವಿಷಯಕವಾದ ಬುದ್ಧಿಯೇ ಈ ವಿಚಾರಕ್ಕೆ ಯೋಗ್ಯವಾದುದು. ಇಂಥ ಬುದ್ಧಿಯು ನಿಮ್ಮಲ್ಲಿ ಇದ್ದರೆ ಧರ್ಮವಿರುದ್ಧವಾದ ಕೆಲಸ ಮಾಡಬೇಕೆಂದು ನಿಮ್ಮ ಮನಸ್ಸಿಗೆ ಬಂದರೂ ನೀವು ಮಾಡುವುದಿಲ್ಲ. ಇದರಿಂದ ನಿಮಗೂ ಇತರರಿಗೂ ಸುಖವಾಗಿ ನಿಮಗೆ ಶ್ರೇಯಸ್ಸುಂಟಾಗುತ್ತದೆ.

೮. ವಿದ್ಯೆ.—ವಿದ್ಯೆಯೆಂದರೆ ಈಶ್ವರ ವಿಷಯಕವಾದ ಜ್ಞಾನವು. ಈ ವಿದ್ಯೆಯು ಇಲ್ಲದಿದ್ದರೆ ಸರ್ವೋತ್ತಮವಾದ ಸುಖವು ಇಂಥದೆಂದು ತಿಳಿವುದಿಲ್ಲ. ಆದಕಾರಣ ಪ್ರತಿ ಮನುಷ್ಯನಿಗೂ ಈ ವಿದ್ಯೆಯು ಆವಶ್ಯಕವಾಗಿರಬೇಕು. ವಿದ್ಯೆಯಿಲ್ಲದೆ ಇರುವವರು ತಮಗೆ ಸುಖವಾಗಬೇಕೆಂದು ಸದಸದ್ವಿಚಾರವಿಲ್ಲದೆ ಅನೇಕ ಕೆಲಸಗಳನ್ನು ಮಾಡುತ್ತಾರೆ. ಅದರಿಂದ ಅವರಿಗೆ ಸುಖವೇನೂ ಆಗದೆ ಸಾಯುವ ವರೆಗೂ ಅನೇಕ ದುಃಖಗಳು ಸಂಭವಿಸುವುವು. ಅವರು ತಾವು ಮಾಡುವ ಪ್ರಯತ್ನ

ದಿಂದ ತಮಗೆ ಸುಖವೇ ಆಗುತ್ತದೆಯೆಂದು ತಿಳಿದು, ಅನ್ಯರಿಗೆ ಒಳ್ಳೆಯದು ಅಥವಾ ಕೇಡು ಆಗುವುದೆಂಬ ವಿಚಾರಮಾಡದೆ, ಅಜ್ಞಾನದಿಂದ ಕೆಲಸಗಳನ್ನು ಮಾಡುವುದರಿಂದ ಅನರ್ಥಗಳೇ ಉಂಟಾಗುತ್ತವೆ. ಅನಂತರ ತಾವು ಮಾಡಿದುದು ತಪ್ಪಾಯಿತೆಂದು ತಿಳಿದು ಪಶ್ಚಾತ್ತಾಪದಿಂದ ದುಃಖಪಡುತ್ತಾರೆ. ಇಂಥವರಿಗೆ ಸುಖವೆಂಬುದೆಲ್ಲಿ? ಆದುದರಿಂದ ನೀವು ಈಶ್ವರನ ಮೇಲೆ ಭಾರವನ್ನು ಹಾಕಬೇಕು. ನಮ್ಮ ಬುದ್ಧಿಯ ಬಲದಿಂದ ಕೆಲಸಗಳನ್ನು ಮಾಡಿ ನಾವು ಸುಖಪಡುತ್ತೇವೆಂಬ ಆಶೆಯು ಸ್ವಪ್ನದಲ್ಲಿಯೂ ಇರಬಾರದು. ಹಾಗಿದ್ದರೆ ನಿಮಗೆ ಮುಂದೆ ಪಶ್ಚಾತ್ತಾಪ ವುಂಟಾಗಲಾರದು. ಪ್ರಪಂಚದಲ್ಲಿ ಒಳ್ಳೆಯದಾದರೂ ಕೆಟ್ಟದಾದರೂ ಭಗವತ್ಸಂಕಲ್ಪಾನುಗುಣವಾಗಿಯೇ ಆಗುವುದು. ಒಂದುವೇಳೆ ನಿಮಗಾವುದಾದರೂ ಸಂಕಟವು ಪ್ರಾಪ್ತವಾದರೆ ದೇವರು ನಿಮಗೆ ಕೆಟ್ಟದನ್ನು ಮಾಡಿದನೆಂದು ಮಾತ್ರ ನೀವು ಎಣಿಸಬಾರದು. ದೇವರು ಸರ್ವಕಾಲದಲ್ಲಿಯೂ ಜಗತ್ತಿನ ಹಿತವನ್ನೇ ಮಾಡುತ್ತಾ ಇರುತ್ತಾನೆ. ನಾವು ಆತನ ಮಕ್ಕಳಾಗಿರುವುದರಿಂದ ನಮಗೆ ಆತನು ಎಂದಿಗೂ ಕೇಡು ಮಾಡುವುದಿಲ್ಲವೆಂದು ತಿಳಿದುಕೊಂಡು ಆತನು ನಮ್ಮನ್ನಾವಸ್ಥೆಯಲ್ಲಿ ಇಟ್ಟಿದ್ದರೂ ಅದರಲ್ಲೇ ನಾವು ಸಂತುಷ್ಟರಾಗಿರಬೇಕು. ಈಶ್ವರನ ಮೇಲೆ ಭಾರವನ್ನು ಹಾಕಿ ಆತನ ಪ್ರೇಮಕ್ಕೆ ಪಾತ್ರರಾದರೆ ಎಂಥ ಕಷ್ಟಗಳು ಸಂಭವಿಸಿದರೂ ಅವುಗಳಿಂದ ನಮಗೆ ತೊಂದರೆಯಾಗದೆ ನಾವು ಸಂತುಷ್ಟರಾಗಿರುತ್ತೇವೆ. ದೈವಭಕ್ತಿಯಲ್ಲಿ ಮುಳುಗಿರುವ ಮನುಷ್ಯನ ಸುಖವು ಇಂಥದೆಂದು ಹೇಳಲಿಕ್ಕಾಗುವುದಿಲ್ಲ. ಜಗತ್ತಿನಲ್ಲಿ ಆ ಸುಖಕ್ಕೆ ಸಮಾನವಾದ ಸುಖ ಮತ್ತೊಂದಿಲ್ಲ. ಇಂಥ ಅನುಪಮವಾದ ಮತ್ತು ಅಮೂಲ್ಯವಾದ ಸುಖವನ್ನು ಹೊಂದಿರುವ ಮನುಷ್ಯನು ಇತರ ಕ್ಷುಲ್ಲಕವಿಷಯದಲ್ಲಿ ಆಶೆಪಡುವುದಿಲ್ಲ, ಅದರಿಂದ ಉಂಟಾಗುವ ಸಂಕಟಗಳಿಗೂ ಗುರಿಯಾಗುವುದಿಲ್ಲ. ದೈವಭಕ್ತಿಯಿಂದ ಉಂಟಾಗುವ ಸುಖಕ್ಕೆ ಸಮಾನವಾದ ಸುಖವು ಪ್ರಪಂಚದಲ್ಲಿ ಮತ್ತೊಂದಿಲ್ಲವೆಂದು ಪ್ರಸಿದ್ಧವಾಗಿಯೇ ಇದೆ. ಇದು ದೊರೆಯಬೇಕಾದರೆ ಈಶ್ವರ ವಿಷಯಕವಾದ ಜ್ಞಾನವು ಅವಶ್ಯಕವಾಗಿರಬೇಕು. ಈ ಜ್ಞಾನವಿಲ್ಲದ ಮನುಷ್ಯನ ಜನ್ಮವು ವ್ಯರ್ಥವಾದುದರಿಂದ ಮನುಷ್ಯರೆಂದೆನಿಸಿಕೊಳ್ಳುವವರೆಲ್ಲರೂ ಈ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು.

೯. ಸತ್ಯವು.-ಸತ್ಯವನ್ನಾಡುವುದೂ ಆಡಿದಂತೆ ನಡೆವುದೂ ಅತಿ ಶ್ರೇಷ್ಠವಾದುವು; ಸತ್ಯವಿಲ್ಲದವನಲ್ಲಿ ವಿದ್ಯೆ, ದ್ರವ್ಯ, ಒಳ್ಳೆಯಗುಣಗಳು ಇವು ಎಷ್ಟಿದ್ದರೂ ಅಲ್ಪಜನರಿಗೂ ಕೂಡ ಅವನಲ್ಲಿ ಗಣ್ಯತೆ ಇರುವುದಿಲ್ಲ. ಅವನು ಸುಳ್ಳು ಹೇಳತಕ್ಕವನೆಂದು ಒಂದು ಸಾರಿ ಜನರಿಗೆ ತಿಳಿದಕೂಡಲೇ ಅವನನ್ನಾರೂ ನಂಬುವುದಿಲ್ಲ. ಅವನ ವಿಷಯದಲ್ಲಿ ಎಲ್ಲರೂ ಜಾಗರೂಕರಾಗಿ ಇರುತ್ತಾರೆ. ಆತನೂ ಇತರರಿಗೆ ಹೆದರಿ ಕೊಂಡು ನಡೆಯುತ್ತಾ ಇರಬೇಕಾಗುತ್ತದೆ. ಜನರಲ್ಲಿ ಯಾವಾಗಲೂ ಹೆದರಿಕೊಂಡು ನಡೆವವನ ಮನಸ್ಸಿಗೆ ಶಾಂತಿಯೇ ಇರುವುದಿಲ್ಲ. ಆದುದರಿಂದ ನೀವು ಸತ್ಯವನ್ನೇ ಆಡಬೇಕು; ಮತ್ತು ಆಡಿದಂತೆ ನಡಿಯಬೇಕು. ನೀವಾವುದಾದರೂ ಕೆಟ್ಟ ಕೆಲಸವನ್ನು ಮಾಡಿ ಅದನ್ನು ಜನರು ತಿಳಿದರೆ ನಿಮಗೆ ಅವಮಾನವಾಗುತ್ತದೆಯೆಂದಾಗಲಿ ಅಥವಾ ಶಿಕ್ಷೆಯಾಗುವುದೆಂದಾಗಲಿ ಹೆದರಿ ಸುಳ್ಳಾಡಬಾರದು. ನಿಜವನ್ನು ಹೇಳಿದರೆ ಜನರು ನಿಮ್ಮನ್ನು ಕೊಂಡಾಡಿ ನಿಮ್ಮ ತಪ್ಪನ್ನು ಒಂದುವೇಳೆ ಕ್ಷಮಿಸುವರು. ಸತ್ಯವನ್ನಾಡುವುದಕ್ಕೆ ಎಂದಿಗೂ ಹೆದರಬಾರದು. ಎಷ್ಟು ಪ್ರಯತ್ನ ಮಾಡಿ ಸುಳ್ಳನ್ನು ಮುಚ್ಚಿಟ್ಟರೂ ಅದು ಬಯಲಿಗೆ ಬಂದೇ ಬರುತ್ತದೆ. ಬೆಂಕಿಯನ್ನು ಒಣಗಿದ ಹುಲ್ಲಿನ ಮೆದೆಯಲ್ಲಿ ಮುಚ್ಚಿಟ್ಟರೆ ಅದು ಕಾಣಿಸಿಕೊಳ್ಳದೆ ಇರುವುದೆ? ನೀವು ಮನಸ್ಸಿನಲ್ಲಿ ಒಂದನ್ನು ಇಟ್ಟುಕೊಂಡು ಬಾಯಿಯಿಂದ ಸುಳ್ಳನ್ನು ಆಡಿದರೂ ನಿಮ್ಮ ಮುಖಭಾವದಿಂದ ನಿಮ್ಮ ಸುಳ್ಳು ಇತರರಿಗೆ ಗೊತ್ತಾಗುತ್ತದೆ. ಆದುದರಿಂದ ನಿರರ್ಥಕವಾಗಿ ಸುಳ್ಳಾಡಿ ಜನರಲ್ಲಿ ಅವಮಾನ ಹೊಂದಿ ದೇವರಲ್ಲಿ ವಿತಕ್ಕೆ ಅಪರಾಧಿಯಾಗಬೇಕು. ಸತ್ಯವನ್ನು ಆಡಿದುದರಿಂದ ನಿಮ್ಮ ಪ್ರಾಣ ಹೋಗುವುದಾದರೂ ನೀವು ಹೆದರಬಾರದು. ದೇವರು ನಿಮ್ಮ ಹಿಂದೆಯಿದ್ದು ನಿಮ್ಮನ್ನು ಸಂರಕ್ಷಣೆ ಮಾಡುತ್ತಾನೆಂದು ನಂಬಿ ನೀವು ಆವುದಕ್ಕೂ ಹೆದರದೆ ಇರಬೇಕು. ಸತ್ಯವನ್ನಾಡುವುದರಿಂದ ಈಗ ಸ್ವಲ್ಪ ಕಷ್ಟವನ್ನು ಅನುಭವಿಸಬೇಕಾದರೂ ಕೊನೆಗೆ ಸುಖವುಂಟಾಗಿ--ಎಲ್ಲಕ್ಕಿಂತಲೂ ಸತ್ಯವೇ ದೊಡ್ಡದು, ಅದಕ್ಕೆ ಎಲ್ಲ ಕೆಲಸಗಳಲ್ಲಿಯೂ ಜಯವಾಗುತ್ತದೆ ಎಂದು ನಿಮಗೇ ಗೊತ್ತಾಗುವುದು. ಆದುದರಿಂದ ನೀವು ಸತ್ಯವನ್ನು ಬಿಡಬಾರದು.

೧೦. ಅಕ್ರೋಧ—ಎಂದರೆ ರಾಗದ್ವೇಷವೇ ಮೊದಲಾದುವುಗಳಿಲ್ಲದೆ ಇರುವುದು. ಸಿಟ್ಟೆಂಬುದು ಮನುಷ್ಯನಿಗೆ ಒಂದು ದೊಡ್ಡ ಶತ್ರುವು; ಇದನ್ನು ಗೆಲ್ಲುವುದು ಕಷ್ಟ. ಅಲ್ಪ ಮನಸ್ಸಿನವರು ಇದನ್ನು ಗೆಲ್ಲುವುದಕ್ಕೆ ಆಗುವುದಿಲ್ಲ. ಇದು ಪ್ರಬಲವಾದರೆ ದೊಡ್ಡ ದೊಡ್ಡ ಅನರ್ಥಗಳು ಸಂಭವಿಸುತ್ತವೆ. ಮನುಷ್ಯನಿಗೆ ಬಲವಾದ ಕ್ರೋಧ ಬಂದ ಕಾಲದಲ್ಲಿ ಅವನು ತನ್ನ ಪ್ರಾಣವನ್ನೂ ಇತರರ ಪ್ರಾಣಗಳನ್ನೂ ತೆಗೆವುದಕ್ಕೆ ಅನುಮಾನಿಸುವುದಿಲ್ಲ. ಅಗ್ನಿಯು ತಾನು ಉತ್ಪನ್ನವಾದ ಬಿದಿರು ಮೆಳೆ, ಕಟ್ಟಿಗೆ ಮುಂತಾದುದನ್ನು ಸುಡುವವರೆಗೂ ಹೇಗೆ ಶಾಂತವಾಗುವುದಿಲ್ಲವೋ ಹಾಗೆಯೇ ಕ್ರೋಧವು ಯಾರಲ್ಲಿ ಹುಟ್ಟುತ್ತದೋ ಅವನನ್ನು ಹಾಳುಮಾಡುವವರೆಗೂ ಬಿಡುವುದಿಲ್ಲ. ಆದುದರಿಂದ ಇಂಥ ಕ್ರೋಧವೆಂಬ ಬೆಂಕಿಯನ್ನು ಕ್ಷಮೆ ಎಂಬ ನೀರಿನಿಂದ ಕೂಡಲೇ ಆರಿಸಬೇಕು. ಸಿಟ್ಟು ಬಂದಕಾಲದಲ್ಲಿ ಇಂಥ ಮಾತನ್ನು ಆಡಬಹುದು ಇಂಥದನ್ನು ಆಡಬಾರದು ಎಂಬ ವಿವೇಕವಿರುವುದಿಲ್ಲ. ಆಗ ವಿಚಾರವಿಲ್ಲದೆ ಆಡಿದ ಸ್ವಲ್ಪ ಮಾತಿನಿಂದಲೂ ಮುಂದೆ ಬಹಳ ದುಃಖಗಳು ಸಂಭವಿಸುವುವು. ಮದ್ದಿನಮೇಲೆ ಬೆಂಕಿಯ ಸಣ್ಣ ಕಿಡಿ ಬಿದ್ದರೂ ಅದರಿಂದ ದೊಡ್ಡ ದೊಡ್ಡ ಕೋಟೆಗಳು ಸಹ ಬಿದ್ದು ಹೋಗುತ್ತವೆ. ಹೀಗೆ ಸಿಟ್ಟಿನ ವೇಳೆಯಲ್ಲಿ ಆಡಿದ ಸಣ್ಣ ಮಾತಿನಿಂದ ತಮಗೂ ಇತರರಿಗೂ ಅಪಾಯ ಸಂಭವಿಸುತ್ತದೆ. ನಿಮಗೆ ಸಿಟ್ಟು ಬಂದಕೂಡಲೇ ವಿಚಾರವಿಲ್ಲದೆ ಮಾತನಾಡುವುದನ್ನು ನೀವು ನಿಲ್ಲಿಸಬೇಕು, ಸ್ವಲ್ಪ ಹೊತ್ತು ವಿಚಾರಮಾಡಿದಲ್ಲಿ ಸಿಟ್ಟು ಸಂಪೂರ್ಣವಾಗಿ ಶಾಂತವಾಗುತ್ತದೆ. ಅಥವಾ ಬಹಳ ಮಟ್ಟಿಗೆ ಕಡಿಮೆಯಾದರೂ ಆಗುತ್ತದೆ. ಆ ಮೇಲೆ ಯುಕ್ತವಿದ್ದಂತೆ ಕೆಲಸ ಮಾಡಬಹುದು. ನೀವು ಆರಸಂಗಡಲೂ ದ್ವೇಷ ಮಾಡಬಾರದು. ಸ್ವಪ್ರಯೋಜನಕ್ಕಾಗಿ ಇತರರ ಸಂಗಡ ದ್ವೇಷವನ್ನು ಮಾಡುವುದು ಮೂರ್ಖತನವು. ಇದು ಪಶುಗಳಿಗೆ ಯೋಗ್ಯವೇ ಹೊರತು ಮನುಷ್ಯನಿಗೆ ಯೋಗ್ಯವಾದುದಲ್ಲ. ಸಣ್ಣ ಮಾತಿಗಾಗಿ ಸಿಟ್ಟು ಮಾಡುವವರಿಗೂ ಮತ್ತು ತಮ್ಮ ಪ್ರಯೋಜನಕ್ಕಾಗಿ ಇತರರ ಸಂಗಡ ದ್ವೇಷಮಾಡುವವರಿಗೂ ಎಂದಿಗೂ ಒಳ್ಳೆಯದಾಗುವುದಿಲ್ಲ. ದ್ವೇಷವನ್ನು ಮಾಡುವುದರಿಂದ ಒಳ್ಳೆಯದಾಗಿರುವುದನ್ನಾರೂ ಕಂಡಿಲ್ಲ, ಕೇಳಿಯೂಇಲ್ಲ. ದ್ವೇಷ

ಮಾಡಿದವರು ಸಂಕಟಪಟ್ಟುದಕ್ಕೆ ಮಾತ್ರ ನಿದರ್ಶನಗಳಿವೆ. ಇತರರ ಸಂಗಡ ದ್ವೇಷವನ್ನು ಮಾಡಿದವನಿಗೆ ಸಂಕಟ ಬಂದಕಾಲದಲ್ಲಿ ಯಾರೂ ಸಹಾಯ ಮಾಡುವುದಿಲ್ಲ. 'ತೋಳ ಗುಂಡಿಗೆ ಬಿದ್ದರೆ ಆಳಿಗೆ ಬಂದು ಕಲ್ಲು' ಎಂಬಂತೆ ತನಗೆ ಬಂದ ಸಂಕಟವನ್ನು ತಾನೊಬ್ಬನೇ ಅನುಭವಿಸಬೇಕಾಗುತ್ತದೆ. ನೀವು ನಿಮ್ಮ ನೆಂಟರಿಷ್ಟರ ಸಂಗಡಲೂ ನೆರೆಹೊರೆಯವರ ಸಂಗಡಲೂ ಪ್ರೇಮದಿಂದ ನಡೆಯಬೇಕು. ಹೀಗೆ ನಡೆದರೆ ನಿಮಗೆ ಸುಖವುಂಟಾಗಿ ನಿಮ್ಮಮೇಲೂ ಇತರರಮೇಲೂ ಬಂದೆರಗುವ ಅನೇಕ ಸಂಕಟಗಳು ನಿವೃತ್ತವಾಗಿ ನಿಮ್ಮನ್ನು ಜನರು ಕೊಂಡಾಡುವರು.

ಗುಣದಲ್ಲಿಯೂ, ಐಶ್ವರ್ಯದಲ್ಲಿಯೂ, ಮರ್ಯಾದೆಯಲ್ಲಿಯೂ, ತನಗಿಂತ ಹೆಚ್ಚಾಗಿರುವವರ ವಿಷಯದಲ್ಲಿ ಅಲ್ಪಮನಸ್ಸಿನವನಿಗೆ ದ್ವೇಷವಿರುತ್ತದೆ. ಇದಕ್ಕೆ ಮತ್ಸರವೆಂದೂ ಹೊಟ್ಟೆಯಕಿಚ್ಚೆಂದೂ ಹೇಳುತ್ತಾರೆ. ಇಂಥ ನೀಚಸ್ವಭಾವದವರು, ಉತ್ತಮರನ್ನು ಜನರು ಕೊಂಡಾಡುವುದನ್ನು ನೋಡಿ ಸಹಿಸಲಾರದೆ, ತಮ್ಮೊಳಗೆ ತಾವೇ ಬೆಂದುಹೋಗುತ್ತಾರೆ. ಎಷ್ಟು ಪ್ರಯತ್ನ ಪಟ್ಟರೂ ಅವರಂತೆ ತಾವು ಸನ್ಮಾನಿತರಾಗುವುದಿಲ್ಲವೆಂದು ತಿಳಿದಕೂಡಲೇ ಅವರನ್ನು ನಿಂದಿಸುವುದಕ್ಕೆ ಉಪಕ್ರಮಿಸುತ್ತಾರೆ. ನಿಂದೆ ಮಾಡುವುದೆಂದರೆ ಒಬ್ಬನಲ್ಲಿ ಇಲ್ಲದೆ ಇರುವ ದೋಷಗಳು ಅವನಲ್ಲಿ ಇವೆ ಎಂದು ಹೇಳುವುದು. ಇದು ಎಷ್ಟು ಕೆಟ್ಟುದೋ ಹೇಳಲಿಕ್ಕಾಗುವುದಿಲ್ಲ. ನಿಂದಿಸುವವನು ಸುಳ್ಳಾಡುವುದರಿಂದ ಸುಳ್ಳಾಡುವವನಿಗೆ ಆಗುವ ಫಲಗಳು ನಿಂದಿಸುವವನಿಗೂ ಆಗುತ್ತವೆ. ನೀಚರು ಕಾರಣವಿಲ್ಲದೆ ನಿಂದಿಸುವುದರಿಂದ ದೊಡ್ಡವರ ಯಶಸ್ಸಿಗಾವ ಹಾನಿಯೂ ಉಂಟಾಗುವುದಿಲ್ಲ. ಬೆಂಕಿಯನ್ನು ತಿರಸ್ಕಾರ ಮಾಡಿ ಕಾಲಿನಿಂದ ಒದೆದರೆ ಬೆಂಕಿಗೆ ಏನೂ ಆಗುವುದಿಲ್ಲ; ಒದೆದವನ ಕಾಲು ಮಾತ್ರ ಸುಟ್ಟುಹೋಗುತ್ತದೆ ಹೀಗೆಯೇ ನೀಚರ ನಿಂದೆಯಿಂದ ಸಜ್ಜನರಿಗೆ ಏನೂ ಬಾಧಕವಿಲ್ಲ; ನೀಚರ ಸ್ವಭಾವವನ್ನು ಜನರು ತಿಳಿದಕೂಡಲೇ ಅವರ ಮುಖಾವಲೋಕನವನ್ನು ಸಹ ಮಾಡುವುದಿಲ್ಲ. ಬಳಿಕ ದುರವಸ್ಥೆಯಲ್ಲಿ ಅವರು ತಮ್ಮ ಆಯುಷ್ಯವನ್ನು ಕಳೆಯಬೇಕಾಗುತ್ತದೆ. ಆದುದರಿಂದ ನಿರರ್ಥಕವಾಗಿ ಮಾತ್ಸರ್ಯವನ್ನು ತಾಳಿ

ಸಂಕಟಪಟ್ಟುಕೊಳ್ಳುವುದಕ್ಕಿಂತ ದೇವರು ತಮ್ಮನ್ನು ಯಾವ ಸ್ಥಿತಿಯಲ್ಲಿ ಇಟ್ಟು ಇದ್ದಾನೆಯೋ ಅದರಲ್ಲಿಯೇ ಸಂತೋಷವಾಗಿರುವುದು ಉತ್ತಮ. ಇತರರ ದೊಡ್ಡತನವನ್ನು ನೋಡಿ ಅದು ಅವರಿಗೆ ಹೇಗೆ ಬಂದಿತೆಂದು ವಿಚಾರಮಾಡಿ ತಾವೂ ಅವರಂತೆ ಆಗುವುದಕ್ಕೆ ಸಾಧ್ಯವಾದರೆ ಪ್ರಯತ್ನ ಮಾಡಬೇಕು. ಇಲ್ಲದ ಪಕ್ಷದಲ್ಲಿ ಅನ್ಯಾಯವಾಗಿ ಹೊಟ್ಟೆಯಕಿಚ್ಚಿನಿಂದ ಅವರನ್ನು ನಿಂದಿಸಿ ದೋಷಿಗಳಾಗುವುದು ಕೇವಲ ದೂಷ್ಯವಾದ ಕೆಲಸವು.

ಮನುಷ್ಯನಿಗೆ ಮತ್ಸರ ಹುಟ್ಟಿದಕೂಡಲೇ ಇತರರನ್ನು ಕೆಡಿಸುವ ಬುದ್ಧಿ ಹುಟ್ಟುತ್ತದೆ. ಮತ್ತೊಬ್ಬರ ವೈಭವವನ್ನು ನೋಡಿ ಸಹಿಸದೆ ಯಾವುದಾದರೂ ಒಂದು ವಿಷಯದಿಂದ ಅವರನ್ನು ಕೆಡಿಸಬೇಕೆಂದು ಯತ್ನಮಾಡುವವರು ತಾನೇ ಕೆಟ್ಟು ಹೋಗುತ್ತಾರೆ. ಇದರ ನಿದರ್ಶನಗಳು ಸಾವಿರಾರು ಸಿಕ್ಕಬಹುದು. ಆದುದರಿಂದ ಇಂಥ ಅನಿಷ್ಟಕಾರಕವಾದ ಸಿಟ್ಟು ಮತ್ಸರ ಮೊದಲಾದುವುಗಳಿಗೆ ನಿಮ್ಮ ಮನಸ್ಸಿನಲ್ಲಿ ಅವಕಾಶವನ್ನು ಕೊಡಬಾರದು. ಎಲ್ಲರ ಸಂಗಡಲೂ ಪ್ರೇಮದಿಂದಲೂ ವಿನಯದಿಂದಲೂ ಇರಬೇಕು. ನಿಮಗಿಂತ ಹೆಚ್ಚು ಯೋಗ್ಯತೆಯುಳ್ಳವರನ್ನು ನೋಡಿ ಸಂತೋಷಪಟ್ಟು, ದೇವರು ಮನುಷ್ಯಜಾತಿಯಲ್ಲಿ ಇಂಥ ರತ್ನಗಳನ್ನು ನಿರ್ಮಿಸಿ ಈ ಜಾತಿಗೆ ಭೂಷಣವನ್ನು ಉಂಟುಮಾಡಿದುದಕ್ಕಾಗಿ ದೇವರಲ್ಲಿ ಕೃತಜ್ಞರಾಗಿರಬೇಕು. ನಿಮಗೆ ಸಮಾನರಾದವರಲ್ಲಿ ಸ್ನೇಹವನ್ನು ಮಾಡಬೇಕು. ಸಮಾನಸ್ಕಂಧರಲ್ಲಿ ಮಾಡಿದ ಸ್ನೇಹವೂ ಪ್ರೇಮವೂ ಸುಖವನ್ನುಂಟುಮಾಡುತ್ತವೆ. ನಿಮಗಿಂತ ಸ್ಥಿತಿಯಲ್ಲಿ ಕಡಮೆಯಾದವರನ್ನು ನೋಡಿ ಬೇಸರಪಡದೆ ಅಂತಃಕರಣದಿಂದ ಕಾಣಬೇಕು. ಇದರಿಂದ ನಿಮಗೆ ದೇವರು ದಯೆಮಾಡುತ್ತಾನೆ. ಈ ಸಣ್ಣ ಜನರಿಗಿಂತಲೂ ನಿಮ್ಮ ಸ್ಥಿತಿಯನ್ನು ದೇವರು ಉತ್ತಮವನ್ನಾಗಿ ಮಾಡಿರುವುದೇ ನಿಮ್ಮಮೇಲೆ ಬಂದು ಅನುಗ್ರಹವಲ್ಲವೆ? ಆದರೂ ಇದರಿಂದ ದೇವರಿಗೆ ನಿಮ್ಮಮೇಲೆ ಹೆಚ್ಚಾಗಿಯೂ ಅವರ ಮೇಲೆ ಕಡಿಮೆಯಾಗಿಯೂ ಪ್ರೀತಿಯಿದೆ ಯೆಂದು ಎಣಿಸಬಾರದು. ಈ ಪ್ರಕಾರ ನಿಮಗಿಂತಲೂ ಉತ್ತಮರಲ್ಲಿಯೂ ನಿಮಗೆ ಸಮಾನರಲ್ಲಿಯೂ ನಿಮಗಿಂತ ಕಡಿಮೆಯಾದವರಲ್ಲಿಯೂ ಯಥಾಯೋಗ್ಯವಾಗಿ ನಡತೆಯ ಬೆಳಯಿಸುವು

ದನ್ನು ಕಲಿತರೆ ಸಿಟ್ಟು ಮತ್ಸರ ಮುಂತಾದ ದುರ್ಗುಣಗಳಿಗೆ ನಿಮ್ಮ ಮನಸ್ಸಿನಲ್ಲಿ ಆಸ್ಪದ ದೊರೆಯದೆ ನಿಮ್ಮ ಮನಸ್ಸು ಪ್ರಸನ್ನವಾಗಿ ಇರುವುದು.

ಈ ಹತ್ತು ಲಕ್ಷಣಗಳುಳ್ಳ ಧರ್ಮವು ಮನುಷ್ಯಸಾಮಾನ್ಯದಿಂದ ಅಂಗೀಕೃತವಾಗಿದೆ. ಆದುದರಿಂದ ನೀವಾವ ಮತದವರಾಗಿ ಇದ್ದರೂ ದೇವರಲ್ಲಿ ವಿಶ್ವಾಸವಿಟ್ಟು ಈ ಧರ್ಮವನ್ನು ಕಾಪಾಡಿಕೊಂಡು ಬಂದರೆ ನೀವು ಎಲ್ಲರಲ್ಲಿಯೂ ಸನ್ಮಾನಿತರಾಗಿರುವಿರಿ.

ಇಂಥ ನಿರ್ಮಲ ಧರ್ಮದಿಂದ ಪವಿತ್ರವಾದ ನಡತೆಯುಳ್ಳ ಮನುಷ್ಯನಂತೆ ಸುಖಿಯಾಗಿಯೂ ಭಾಗ್ಯವಂತನಾಗಿಯೂ ಯಾರೂ ಇಲ್ಲ. ಈ ಸಂಸಾರವು ಬಹು ಭಯಂಕರವಾದುದು. ಈ ಸಂಸಾರಮಾರ್ಗದಲ್ಲಿ ಎಲ್ಲಿ ಭಯವಿದೆ, ಯಾವ ಮಾರ್ಗವು ಒಳ್ಳೆಯದು, ಯಾವುದು ಕೆಟ್ಟದು ಎಂಬುದು ನಿಮಗೆ ಗೊತ್ತಾಗುವುದಿಲ್ಲ. ಇದು ಒಳ್ಳೆಯದು, ಇದು ಕೆಟ್ಟುದು ಎಂಬುದನ್ನು ತಿಳಿಸಿ ಸಮಯೋಚಿತವಾಗಿ ನಿಮ್ಮನ್ನು ಎಚ್ಚರಿಸಿ ರಕ್ಷಿಸುವಂಥ ಧರ್ಮದಂತೆ ನಿಸ್ಪೃಹನಾದ ಮಿತ್ರನು ಪ್ರಪಂಚದಲ್ಲಿ ಯಾರೂ ಇಲ್ಲ. ಆದುದರಿಂದ ನಿಸ್ಪೃಹವಾಗಿಯೂ ಸರ್ವದಾ ಭಯದ ದೆಸೆಯಿಂದ ನಿಮ್ಮನ್ನು ಸಂರಕ್ಷಣೆ ಮಾಡುವಂಥದಾಗಿಯೂ ಇರುವ ಧರ್ಮವನ್ನು ನೀವು ಮರೆತು ಅದರಲ್ಲಿ ಅನಾದರ ಮಾಡುವುದು ಯುಕ್ತವಲ್ಲ. ಆದುದರಿಂದ ಧರ್ಮವನ್ನು ಅನುಸರಿಸಿ ಎಲ್ಲಾ ಕೆಲಸಗಳನ್ನು ಮಾಡುವಂತೆಯೂ, ಧರ್ಮದಲ್ಲಿ ತತ್ಪರರಾಗಿ ಇರುವಂತೆಯೂ, ನಿಮಗೆ ಬುದ್ಧಿಯನ್ನು ಕೊಡಬೇಕೆಂದು ದೇವರನ್ನು ನಿಷ್ಕಪಟವಾದ ಭಕ್ತಿಯಿಂದ ಪ್ರಾರ್ಥಿಸಬೇಕು.

---

## ೫ನೆಯ ಪರಿಚ್ಛೇದ.

---

### ವಧೂವೃತ್ತ.

ಮುಂದೆ ಒಳ್ಳೆಯ ಫಲವು ಉಂಟಾಗುವಂತೆ ನಿಮ್ಮ ಪ್ರಥಮ ವಯಸ್ಸಿನಲ್ಲಿ ನಡೆದುಕೊಳ್ಳಬೇಕಾದ ವಿಷಯವನ್ನು ಹೇಳಿದುದಾಯಿತು. ಇನ್ನು ಮೇಲೆ ನಿಮಗೆ ಪ್ರಾಪ್ತವಾಗುವ ನೂತನ ಸ್ಥಿತಿಯಲ್ಲಿ ನಡೆದುಕೊಳ್ಳತಕ್ಕ ಕ್ರಮವನ್ನು ವಿವರಿಸುತ್ತೇನೆ. ದೇವರು ಜಗತ್ತಿನಲ್ಲಿ

ಹೆಂಗಸು, ಗಂಡಸು ಎಂದು ಎರಡು ಜಾತಿಯನ್ನು ಸೃಷ್ಟಿಸಿದ್ದಾನೆ. ಇವರಿಬ್ಬರೂ ಹೊಂದಿಕೊಂಡು ಅನ್ಯೋನ್ಯವಾಗಿ ಸಹಾಯ ಮಾಡದೆ ಇದ್ದ ಪಕ್ಷದಲ್ಲಿ ಸಂಸಾರಕ್ಕೆ ನ್ಯೂನತೆಯುಂಟಾಗುತ್ತದೆ. ಸಂಸಾರಕ್ಕೆ ಸ್ತ್ರೀಪುರುಷರಿಬ್ಬರೂ ಅಂಗವಾಗಿದ್ದಾರೆ. ನಮ್ಮ ಶರೀರದಲ್ಲಿ ಯಾವು ದಾದರೂ ಒಂದು ಅವಯವ ಕಡಿಮೆಯಾಗಿದ್ದರೆ ಆ ಶರೀರವು ಚೆನ್ನಾಗಿ ಕಾಣುವುದಿಲ್ಲ. ಮತ್ತು ನಾವು ಮಾಡಬೇಕಾದ ಎಲ್ಲ ಕೆಲಸವೂ ನಮ್ಮಿಂ ದಾಗುವುದಿಲ್ಲ. ಹೀಗೆಯೇ ಪುರುಷನು ಎಂಥ ವಿದ್ವಾಂಸನಾದರೂ ಶೂರ ನಾದರೂ ಧನಿಕನಾದರೂ ನಿಸ್ಪೃಹನಾದರೂ ಸ್ತ್ರೀಯರ ಸಹಾಯವಿ ಲ್ಲದೆ ಆತನಿಗೆ ಪೂರ್ಣತ್ವವಿಲ್ಲ. ಆತನಿಂದ ಯಾವ ಕೆಲಸವೂ ಚೆನ್ನಾಗಿ ಆಗುವುದಿಲ್ಲ. ಸ್ತ್ರೀಯರ ಸಹಾಯವು ಅವಶ್ಯಕವಾಗಿ ಬೇಕಾಗಿರುವ ಕೆಲಸಗಳಲ್ಲಿ ಅವರ ಸಹಾಯ ದೊರೆಯದೆ ಹೋದರೆ ಎಲ್ಲಾ ಕೆಲಸವ ನ್ನೂ ಒಬ್ಬನೇ ಮಾಡಬೇಕಾಗುವುದರಿಂದ ಆತನ ಮನಸ್ಸು ವ್ಯಗ್ರವಾಗಿ ಹೆಚ್ಚು ಶ್ರಮದಿಂದ ಆತನ ದೇಹಸ್ಥಿತಿಯು ಕೆಟ್ಟುಹೋಗುವುದಲ್ಲದೆ ಅನೇಕ ಅನರ್ಥಗಳೂ ಉಂಟಾಗುತ್ತದೆ. ಸ್ತ್ರೀಯರ ವಿಷಯವೂ ಹೀಗೆ ಯೇ. ಸ್ತ್ರೀಪುರುಷರಿಬ್ಬರೂ ಪರಸ್ಪರ ಸಹಾಯಕರಾಗಿ ಇರಬೇಕೆಂ ಬುದೇ ದೈವನಿಬಂಧನೆ. ಈ ನಿಬಂಧನೆಯನ್ನು ಕೆಲವರು ಅಲಕ್ಷ್ಯ ಮಾಡಿ ಪಶುಗಳಂತೆ ಸ್ವೇಚ್ಛಾಚಾರಿಗಳಾಗಿರುತ್ತಾರೆ. ಇವರು ಹೀಗೆ ದೈವನಿಬಂಧನೆಯನ್ನು ಮೀರಿದಪಾಪಕ್ಕೆ ಫಲರೂಪವಾದ ದುಃಖವನ್ನೂ ಅನುತಾಪವನ್ನೂ ಅವಮಾನವನ್ನೂ ಅನುಭವಿಸಬೇಕಾಗುತ್ತದೆ. ಆದುದರಿಂದ ಬುದ್ಧಿವಂತರಾದ ಸ್ತ್ರೀಪುರುಷರು ಪರಮೇಶ್ವರನಿಂದ ಗೊತ್ತುಮಾಡಲ್ಪಟ್ಟಿರುವ ಧರ್ಮಕ್ಕೆ ಅನುಸಾರವಾಗಿಯೂ ಸುಖಕರ ವಾಗಿಯೂ ಇರುವ ಪರಸ್ಪರ ಸಂಬಂಧವನ್ನು ಇಟ್ಟುಕೊಂಡಿರಬೇಕು. ಈ ಸಂಬಂಧಕ್ಕೆ ವಿವಾಹವೆನ್ನುತ್ತಾರೆ.

ವಿವಾಹ ಮಾಡತಕ್ಕ ರೀತಿಗಳು ಅನೇಕ ದೇಶಗಳಲ್ಲಿ ಅನೇಕ ವಿಧಗಳಾಗಿವೆ. ಅವೆಲ್ಲವೂ ಚೆನ್ನಾಗಿವೆ ಎಂದು ಹೇಳಲಿಕ್ಕಾಗುವುದಿಲ್ಲ. ನಮ್ಮ ದೇಶದಲ್ಲಿ ಹೆಣ್ಣುಮಕ್ಕಳಿಗೆ 9-10 ವರ್ಷ ತುಂಬುವುದರೊಳಗೆ ಆವನಾದರೂ ಒಬ್ಬ ಅಪ್ರಬುದ್ಧನಾದ ಹುಡುಗನಿಗೆ ಲಗ್ನಮಾಡಿ ಕೊಡ ತಕ್ಕ ಸಂಪ್ರದಾಯವಿದೆ. ಈ ಕಾಲದಲ್ಲಿ ವಧೂವರರಿಬ್ಬರಿಗೂ ತಮ್ಮ

ಪರಸ್ಪರ ಸಂಬಂಧವೆಂಥದು, ಅವನ್ನು ಕಾಪಾಡಿಕೊಳ್ಳುವ ಕ್ರಮವೇನು, ಪರಸ್ಪರ ಐಕಮತ್ಯವೂ ಸನ್ಮಾನವೂ ಏತರಿಂದ ಉಂಟಾಗುತ್ತದೆ-ಎಂಬ ವಿಷಯಗಳಾವುವೂ ತಿಳಿದಿರುವುದಿಲ್ಲ. ಆದಕಾರಣ ಇವರಿಗಾವ ಸುಖ ಉಂಟಾಗಬೇಕೆಂದು ಹಿರಿಯರು ಇವರಿಗೆ ಲಗ್ನಮಾಡುತ್ತಾರೋ ಅದು ಪ್ರಾಯೇಣ ಲಭಿಸುವುದಿಲ್ಲ. ಅನೇಕ ಸಂದರ್ಭದಲ್ಲಿ ಪರಸ್ಪರ ವೈಷಮ್ಯ ಹುಟ್ಟಿ ಅನರ್ಥಗಳು ಉಂಟಾಗುತ್ತವೆ.

ಮನುಷ್ಯನು 8 ವರ್ಷದಿಂದ 20 ವರ್ಷದವರೆಗೆ ಜ್ಞಾನವನ್ನು ಸಂಪಾದಿಸತಕ್ಕ ಕಾಲವು. ಅಷ್ಟರಲ್ಲಿಯೇ ಲಗ್ನವಾದರೆ ಈ ಜ್ಞಾನ ಸಂಪಾದನೆ ನಿಂತುಹೋಗಿ ಇವರಿಬ್ಬರೂ ಸಂಸಾರದಲ್ಲಿ ಸಿಕ್ಕಿಕೊಳ್ಳು ತ್ತಾರೆ. ಅನಂತರ ಜ್ಞಾನಸಂಪಾದನೆಯನ್ನು ಮಾಡುವುದಕ್ಕೆ ಎಷ್ಟು ಯತ್ನಿಸಿದರೂ ಸಂಪೂರ್ಣವಾಗಿ ಸಿದ್ಧಿಸುವುದಿಲ್ಲ. ಜ್ಞಾನಾರ್ಜನೆಗೆ ಅನು ಕೂಲವಾದ ಪೂರ್ವವಯಸ್ಸಿನಂಥ ಅಮೂಲ್ಯವಾದ ಕಾಲವು ಮೀರಿ ಹೋದಮೇಲೆ ಏನು ಮಾಡಿದರೂ ತಿರುಗಿ ಸಿಕ್ಕುವುದಿಲ್ಲ. ಮನುಷ್ಯ ಜನ್ಮವನ್ನೆತ್ತಿ ಜ್ಞಾನವನ್ನು ಸಂಪಾದಿಸದೆ ಇದ್ದರೆ ಅವರನ್ನು ಪಶುವಿಗಿಂ ತಲೂ ಕಡೆಯೆಂದೆಣಿಸಬೇಕು. ಆದಕಾರಣ ಪೂರ್ವವಯಸ್ಸಿನಲ್ಲಿ ವಿವಾಹಮಾಡಿಕೊಳ್ಳುವುದು ಕೇವಲ ಅನುಚಿತವಾದ ಕಾರ್ಯವು.

ಸ್ತ್ರೀಪುರುಷರಿಗೆ ಪೂರ್ವವಯಸ್ಸಿನಲ್ಲಿಯೇ ಮಕ್ಕಳಾದಲ್ಲಿ ಆ ಮಕ್ಕಳೂ ಅವರ ಸಂತತಿಗಳೂ ಸಹ ಬಲಹೀನರಾಗಿಯೂ, ತೇಜೋ ಹೀನರಾಗಿಯೂ, ಬುದ್ಧಿಹೀನರಾಗಿಯೂ, ಆಗುವುದಲ್ಲದೆ ಆಯುಷ್ಯದ ಪೂರ್ಣಾನುಭವವನ್ನು ಮಾಡದೆ ತಾರುಣ್ಯದಲ್ಲಿಯೇ ಮೃತ್ಯುವಿನ ಮುಖ ದಲ್ಲಿ ಬೀಳುತ್ತಾರೆ. ಇದಕ್ಕೆ ಕಾರಣವೇನೆಂದರೆ ಅಲ್ಪವಯಸ್ಸಿನಲ್ಲಿ ಶರೀರದೊಳಗಣ ವ್ಯಾಪಾರಗಳೂ ಮತ್ತು ಬಲವನ್ನೂ ಬುದ್ಧಿಯನ್ನೂ ಸ್ವಾಸ್ಥ್ಯವನ್ನೂ ವೃದ್ಧಿಪಡಿಸುವ ರಕ್ತ, ಮಾಂಸ, ಮಜ್ಜ, ಮೇದಸ್ಸು ಮೊದಲಾದುವುಗಳೂ ಚೆನ್ನಾಗಿ ಬಲಿತಿರುವುದಿಲ್ಲ. ಇಂಥ ಅಪಕ್ವಸ್ಥಿತಿ ಯಲ್ಲಿ ಮಕ್ಕಳಾಗುವುದರಿಂದ ಅವರಿಗೂ ಅವರ ಸಂತತಿಗೂ ಬಲ ಮುಂತಾದುವು ಕಡಿಮೆಯಾಗಿ ಹೋಗುತ್ತವೆ.

ಕೆಲವರು ಧನವಾಗಲಿ ರೂಪವಾಗಲಿ ಇರುವುದನ್ನುಮಾತ್ರ ನೋಡಿ ಲಗ್ನಮಾಡುತ್ತಾರೆ. ಧನವೂ ರೂಪವೂ ಯಾರಲ್ಲಿಯೂ ಸ್ಥಿರವಾಗಿ

ಸಿಲ್ಲುವುದಿಲ್ಲ. ಆದುದರಿಂದ ಹೀಗೆ ಮಾಡುವುದು ಯುಕ್ತವಲ್ಲ. ಇಂಥ ಧನರೂಪುಗಳನ್ನು ಮಾತ್ರ ಅವಲಂಬಿಸಿರುವ ಮನಸ್ಸು ಇವುಗಳು ನಷ್ಟವಾದಬಳಿಕ ಅನ್ಯತ್ರ ಪ್ರವೃತ್ತವಾಗುವುದೇ ಸರಿ. ಇಂಥದರಲ್ಲಿ ಪರಸ್ಪರ ಪ್ರೇಮವು ಹೇಗೆ ನಿಂತೀತು? ಆದಕಾರಣ ಮುಖ್ಯವಾಗಿ ಸದ್ಗುಣವನ್ನೂ ವಿದ್ಯೆಯನ್ನೂ ಪ್ರೇಮವನ್ನೂ ಔದಾರ್ಯವನ್ನೂ ನೋಡಿ ಲಗ್ನಮಾಡಬೇಕು. ಇಂಥ ಉಪಯುಕ್ತಸಂಬಂಧವುಳ್ಳ ದಂಪತಿಗಳಲ್ಲಿ ಅತಿಶಯವಾದ ಪ್ರೇಮವು ಬೆಳೆದು ಇವರು ಪರಸ್ಪರ ಸುಖದುಃಖಗಳಲ್ಲಿ ಭಾಗಿಗಳಾಗಿರುತ್ತಾರೆ. ಇದರಿಂದ ಇಂಥ ಸಂಸಾರದಲ್ಲಿ ಸ್ವರ್ಗಸಮಾನ ಸುಖವುಂಟಾಗುವುದಲ್ಲದೆ ಸಂಸಾರವೂ ಉನ್ನತಿಯನ್ನು ಪಡೆಯುತ್ತದೆ. ಈ ಪ್ರಪಂಚದಲ್ಲಿ ಇಂಥ ಯೋಗ್ಯವಾದ ಸಂಬಂಧವುಳ್ಳ ಸ್ತ್ರೀ ಪುರುಷರೇ ಧನ್ಯರು. ಇವರಿಗೆ ಎಂಥ ವಿಪತ್ತಿನಲ್ಲಿಯೂ ಪರಸ್ಪರ ಪ್ರೇಮ ಕಡಿಮೆಯಾಗದೆ ಒಬ್ಬರನ್ನೊಬ್ಬರು ನೋಡಿಕೊಂಡು ಸುಖವಾಗಿಯೇ ಕಾಲಕ್ಷೇಪ ಮಾಡುತ್ತಾರೆ. ಜಗತ್ತಿನಲ್ಲಿ ಪ್ರೇಮವೇ ಸರ್ವವಿಧವಾದ ಸುಖಕ್ಕೂ ಉತ್ಪತ್ತಿಸ್ಥಾನವು. ಪ್ರೇಮವಿಲ್ಲದವರು ಎಂದಿಗೂ ಸುಖಿಗಳಾಗುವುದಿಲ್ಲ. ಪ್ರೇಮದ ಮಹಿಮೆಯಿಂದಲೇ ರಾಮಚಂದ್ರ ನಳಮಹಾರಾಯ ಮುಂತಾದವರು ಅಚಲವಾದ ತಮ್ಮ ಕೀರ್ತಿಯನ್ನು ಈ ಲೋಕದಲ್ಲಿ ನೆಲೆಗೊಳಿಸಿದ್ದಾರೆ. ಇವರಂತೆಯೇ ಸೀತೆ, ಸಾವಿತ್ರಿ, ಅರುಂಧತಿ, ದಮಯಂತಿ, ಅನಸೂಯೆ ಮುಂತಾದವರು ಅತಿಶಯವಾದ ತಮ್ಮ ಪಾತಿವ್ರತ್ಯದಿಂದ ಸರ್ವರಿಗೂ ಮನೋರಂಜಕವಾಗಿರುವಂತೆ ತಮ್ಮ ಪುಣ್ಯಕೀರ್ತಿಗಳನ್ನು ಸ್ಥಾಪಿಸಿದ್ದಾರೆ. ಆದುದರಿಂದ ಎಲ್ಲರೂ ತಮ್ಮ ಹೃದಯದಲ್ಲಿ ಸ್ವರ್ಗಸುಖಕ್ಕೆ ಸಮವಾದ ಸುಖವನ್ನು ಉಂಟುಮಾಡುವ ಪ್ರೇಮವನ್ನು ಬೆಳೆಯಿಸಬೇಕು. ಪ್ರೇಮವು ನಾನಾವಿಧವಾದುದು. ಮಕ್ಕಳು ಮುಂತಾದವರಲ್ಲಿ ಇರುವ ಪ್ರೇಮಕ್ಕೆ ವಾತ್ಸಲ್ಯವೆನ್ನುತ್ತಾರೆ. ತಾಯಿತಂದೆಗಳಲ್ಲಿಯೂ ಗುರುಜನಗಳಲ್ಲಿಯೂ ಈಶ್ವರನಲ್ಲಿಯೂ ಇರುವ ಪ್ರೇಮಕ್ಕೆ ಭಕ್ತಿಯೆಂದು ಹೆಸರು. ಅಣ್ಣತಮ್ಮಂದಿರು ಅಕ್ಕತಂಗಿಯರು ಸ್ನೇಹಿತರು ಮುಂತಾದವರಲ್ಲಿರುವ ಪ್ರೇಮಕ್ಕೆ ಸ್ನೇಹವೆಂದು ಹೆಸರು. ಔದಾರ್ಯವುಳ್ಳವರಿಗೆ ಬಡವರಲ್ಲಿರುವ ಪ್ರೇಮಕ್ಕೆ ದಯೆಯೆಂದು ಸಂಜ್ಞೆ. ಆದರೆ ಪರಸ್ಪರ ಸುಖದುಃಖಗಳಲ್ಲಿ

ಸಮಭಾಗಿಗಳಾಗಿ, ಶರೀರಗಳು ಎರಡಿದ್ದರೂ ಪ್ರಾಣಗಳು ಮಾತ್ರ ಒಂದಾಗಿರುವಂತೆ ವರ್ತಿಸುವ ದಂಪತಿಗಳಲ್ಲಿ ಇರುವ ಪ್ರೇಮಕ್ಕೆ ಪ್ರೇಮವೆಂದಲ್ಲದೆ ಬೇರೆ ಹೆಸರಿಲ್ಲ. ದಂಪತಿಗಳಲ್ಲಿ ಮಾತ್ರ ಪ್ರೇಮವು ಸಂಪೂರ್ಣವಾಗಿ ಇರುತ್ತದೆ. ಇತರಸ್ಥಳಗಳಲ್ಲಿ ಇದರ ಅಂಶಮಾತ್ರವಿರುರುತ್ತದೆಯೇ ಹೊರತು ಸಂಪೂರ್ಣವಾಗಿರುವುದಿಲ್ಲ. ಇಂಥ ಪ್ರೇಮವೆಂಬ ಧನವನ್ನು ಸದ್ವ್ಯಯಮಾಡಿ ಇನ್ನೂ ಅಭಿವೃದ್ಧಿಪಡಿಸಿಕೊಳ್ಳದೆ ಸಾವಿರಾರು ಜನರು ದುರ್ವ್ಯಯ ಮಾಡುವುದನ್ನು ನೋಡಿ ನಾನು ದುಃಖದಿಂದಲೂ ನಾಚಿಕೆಯಿಂದಲೂ ತಲೆಯನ್ನು ತಗ್ಗಿಸಬೇಕಾಗಿದೆ. ಜನರು ವಿಷಯಲಂಪಟರಾಗಿ ಅಯೋಗ್ಯವಾದ ಸ್ಥಾನದಲ್ಲಿ ಈ ಪ್ರೇಮಧನವನ್ನು ವಿನಿಯೋಗಿಸುತ್ತಾರೆ. ಇದರಿಂದ ಅವರಿಗೆ ಹಾನಿಯಲ್ಲದೆ ಶ್ರೇಯಸ್ಸುಂಟಾಗುವುದಿಲ್ಲ. ಮದುವೆಯಾದವರಲ್ಲಿ ವಿಶ್ವಾಸಘಾತುಕತನವನ್ನು ಮಾಡಿ ಪ್ರೇಮವನ್ನು ಕಳೆದುಕೊಳ್ಳಬಾರದೆಂಬುದೇ ವಿವಾಹದ ಮುಖ್ಯೋದ್ದೇಶವು. ಕೋಮಲತೆ, ಮಾಧುರ್ಯ ಮೊದಲಾದ ರಮಣೀಯವಾದ ಗುಣಗಳು ಸ್ತ್ರೀಯರಲ್ಲಿ ಸಹಜವಾಗಿರುತ್ತವೆ; ಪುರುಷರಲ್ಲಿರುವುದಿಲ್ಲ. ಇದರಂತೆಯೇ ಸಾಹಸ, ಸಹಿಷ್ಣುತೆ, ಧೈರ್ಯ ಮೊದಲಾದ ಗುಣಗಳು ಪುರುಷರಲ್ಲಿ ಸಹಜವಾಗಿರುತ್ತವೆ; ಸ್ತ್ರೀಜನರಲ್ಲಿ ಇರುವುದಿಲ್ಲ. ಈ ಎರಡು ವಿಧವಾದ ಗುಣಗಳೂ ಬೇರೆಬೇರೆಯಾಗಿರುವುದು ಸರಿಯಲ್ಲ. ಯಾವ ಪುರುಷನಲ್ಲಿ, ಸಾಹಸ, ಧೈರ್ಯ ಶೌರ್ಯ ಮೊದಲಾದ ಕಠೋರಗುಣಗಳೊಡನೆ ದಯೆ, ನಮ್ರತೆ, ಸ್ನೇಹ ಮೊದಲಾದ ಕೋಮಲ ಗುಣಗಳ ಮೇಳನವಿಲ್ಲವೋ ಆ ಪುರುಷನು ಅತಿ ಕ್ರೂರನಾಗಿರುತ್ತಾನೆ. ಇದರಂತೆಯೇ ಕೋಮಲತೆ, ನಮ್ರತೆ, ದಯೆ, ಮಮತೆ, ಲಜ್ಜೆ, ಮೊದಲಾದ ಗುಣಗಳುಳ್ಳ ಸ್ತ್ರೀಯರಲ್ಲಿ ಧೈರ್ಯ, ಸಹಿಷ್ಣುತೆ, ಸತ್ಯಪರತ್ವ ಮೊದಲಾದ ಗುಣಗಳ ಮೇಳನವಿಲ್ಲದೆ ಇದ್ದರೆ ಅವರು ಅತ್ಯಂತಭೀರುಗಳಾಗಿ ಯಾವ ಕೆಲಸವನ್ನು ಮಾಡಲಿಕ್ಕೂ ಅಶಕ್ತರಾಗಿರುತ್ತಾರೆ. ಆದಕಾರಣ ಸ್ತ್ರೀಪುರುಷರಿಬ್ಬರೂ ತಮ್ಮ ತಮ್ಮ ಗುಣಗಳ ಪರಸ್ಪರಮೇಳನವನ್ನು ಮಾಡಿದರೆ ಸಂಸಾರದಲ್ಲಿ ಸುಖಾಭಿವೃದ್ಧಿಯುಂಟಾಗುವುದು ನಿರಂತರ ಸಹವಾಸವಿಲ್ಲದೆ ಇದ್ದರೆ ಒಬ್ಬರ ಗುಣ ಮತ್ತೊಬ್ಬರಿಗೆ ಬರುವುದಿಲ್ಲ. ಇಂಥ ನಿರಂತರ ಸಹವಾ

ಸವು ಗಂಡಹೆಂಡರಲ್ಲಿ ಹೊರತು ಉಳಿದವರಲ್ಲಿ ಇದ್ದುದೇ ಆದರೆ ಅದು ಲೋಕಾಚಾರಕ್ಕೂ ಧರ್ಮಕ್ಕೂ ವಿರೋಧವಾದುದು.

ಪ್ರಾಣಿಗಳ ಹೃದಯವು ಬಹು ದುರ್ಬಲವಾದುದು. ಇದು ಸಮೀಪದಲ್ಲಿ ಮತ್ತೊಬ್ಬರ ಆಧಾರವಿಲ್ಲದೆ ನಿಲ್ಲುವುದಿಲ್ಲ. ಆದಕಾರಣ ಮನುಷ್ಯನಿಗೆ ಮತ್ತೊಬ್ಬರ ಜೊತೆ ಅವಶ್ಯಕವು. ಒಬ್ಬ ಮನುಷ್ಯನಿಗೆ ಎಲ್ಲಾ ಸುಖಸಾಧನಗಳನ್ನು ಕಲ್ಪಿಸಿಕೊಟ್ಟು ಅರಣ್ಯದಲ್ಲಿ ಏಕಾಂಗಿಯಾಗಿ ವಾಸಮಾಡಬೇಕೆಂದು ಕಟ್ಟು ಮಾಡಿದರೆ ಹಾಗೆ ವಾಸಮಾಡುವುದು ಅವನಿಂದ ಎಂದಿಗೂ ಆಗಲಾರದು; ಮತ್ತೊಬ್ಬರ ಜೊತೆ ಇದ್ದರೆ ಎಂಥ ಸಂಕಟ ಬಂದರೂ ತಾನು ಸುಖಿಯೆಂದೇ ಎಣಿಸುತ್ತಾನೆ. ಆದುದರಿಂದ ಸಂಸಾರದಲ್ಲಿ ಎಲ್ಲರಿಗೂ ಒಬ್ಬರ ಜೊತೆ ಅವಶ್ಯಕವಾಗಿ ಬೇಕಾಗಿದೆ. ಇಂಥ ಜೊತೆಯವನು ತನಗೆ ಶತ್ರುವಾಗಿಯಾಗಲಿ, ಉದಾಸೀನನಾಗಿಯಾಗಲಿ, ತನ್ನ ಮನಸ್ಸಿನಂತೆ ನಡೆಯದವನಾಗಲಿ ತನ್ನ ಸುಖದುಃಖಗಳಲ್ಲಿ ಭಾಗಿಯಾಗದವನಾಗಿಯಾಗಲಿ ಇದ್ದಪಕ್ಷದಲ್ಲಿ, ಅಂಥ ಜೊತೆಯವನು ಇದ್ದರೂ ಒಂದೇ, ಇಲ್ಲದೇ ಇದ್ದರೂ ಒಂದೇ. ಜೊತೆಯವನು ಯಾವಾಗಲೂ ತನ್ನಲ್ಲಿ ಪ್ರೇಮವುಳ್ಳವನಾಗಿಯೂ ಸುಖದುಃಖಗಳ ಸಮಯಗಳಲ್ಲಿ ಒಂದೇ ಸಮನಾಗಿ ಇರುವವನಾಗಿಯೂ ಇರಬೇಕು. ಇಂಥ ಜೊತೆಯು ಹೆಂಗಸಿಗೆ ಗಂಡನಲ್ಲದೆ ಮತ್ತೊಬ್ಬರಲ್ಲ; ಗಂಡಸಿಗೆ ಹೆಂಡತಿಯಲ್ಲದೆ ಮತ್ತೊಬ್ಬರಲ್ಲ. ದಂಪತಿಗಳಲ್ಲಿರುವ ಅಕೃತ್ರಿಮವಾದ ಪರಸ್ಪರಮೈತ್ರಿಯು ಇತರರಲ್ಲಿ ಇರುವುದಿಲ್ಲ.

ಅರ್ಧಂಭಾರ್ಯಾಮನುಷ್ಯಸ್ಯಭಾರ್ಯಾಶ್ರೇಷ್ಠತಮಸ್ಸಖಾ।
ಭಾರ್ಯಾಮೂಲಂ ತ್ರಿವರ್ಗಸ್ಯ ಭಾರ್ಯಾಮೂಲಂತರಿಷ್ಯತಃ॥

ಎಂದು ವಚನವಿರುವುದರಿಂದ ವಿವಾಹವಿಲ್ಲದೆ ಮನುಷ್ಯನಿಗೆ ತಕ್ಕ ಜೊತೆ ಸಿಕ್ಕುವುದಿಲ್ಲ. ಆದಕಾರಣ ವಿವಾಹವನ್ನು ಮಾಡಿಕೊಳ್ಳುವುದು ಉತ್ತಮವು.

ಇದುವರೆಗೆ ವಿವಾಹದ ಉದ್ದೇಶವನ್ನು ಹೇಳಿದುದಾಯಿತು. ಇನ್ನು ಮೇಲೆ ವಿವಾಹವಾದ ಬಳಿಕ ನೀವು ನಡೆಯತಕ್ಕ ಕ್ರಮವನ್ನು ವಿಚಾರಮಾಡೋಣ. ವಿವಾಹಿತರಾದ ದಂಪತಿಗಳಲ್ಲಿ ಪರಸ್ಪರ ಪ್ರೇಮವಿದ್ದರೆ ಸುಖಿಗಳಾಗಿರುತ್ತಾರೆ, ಇಲ್ಲದ ಪಕ್ಷದಲ್ಲಿ ಅವರ ದುಃಖಕ್ಕೆ

ಕೊನೆಯೇ ಇಲ್ಲ-ಎಂಬುದು ಎಲ್ಲರಿಗೂ ತಿಳಿದೇ ಇದೆ. ಸುಖದುಃಖಗಳಲ್ಲಿ ಯಾವಜ್ಜೀವವೂ ಭಾಗಿಯಾಗಿ, ಪತಿಯೇ ಸರ್ವಸ್ವವೆಂದೆಣಿಸಿ ಪತಿಯು ತನ್ನಲ್ಲಿ ಸ್ವಲ್ಪ ಒಳ್ಳೆಯಮಾತನಾಡಿದರೆ ಸ್ವರ್ಗವೇ ಕೈಸೇರಿದಂತೆ ಸಂತೋಷಪಡುತ್ತ ಇರುವ ಹೆಂಡತಿಯಲ್ಲಿ ಗಂಡನು ಯಾವುದಾದರೂ ಒಂದು ಸಣ್ಣಮಾತಿಗಾಗಿ ವೈಮನಸ್ಯವನ್ನು ಹೊಂದಿ ಆಕೆಯನ್ನು ನಿರಾಕರಿಸುವುದು, ಅಥವಾ ಆಕೆಯನ್ನು ಪರಿತ್ಯಾಗಮಾಡಿ ಎರಡನೆಯ ಮದುವೆಮಾಡಿಕೊಳ್ಳುವುದು, ಇವೇ ಮೊದಲಾದ ಪಾಪಾಚರಣೆಗಳು ನಮ್ಮ ಜನರಲ್ಲಿ ವಾಡಿಕೆಯಾಗಿವೆ.

ಪುರುಷರು ಸ್ತ್ರೀಯರಿಗಿಂತ ಬಲಿಷ್ಠರಾದುದರಿಂದ ಅವರು ಪಕ್ಷಿಮವನ್ನು ಪೂರ್ವವೆಂದರೂ ನಡೆಯುತ್ತದೆ. ಆದರೆ ಈ ರೀತಿಯಲ್ಲಿ ಅನ್ಯಾಯಮಾಡುವುದು ಪುರುಷರಿಗೆ ಸರ್ವಥಾ ನ್ಯಾಯವಲ್ಲ. ವೀರನಾದವನು, ದುರ್ಬಲನು ಮಾಡಿದ ಅಪರಾಧವನ್ನು ಕ್ಷಮಿಸಿ, ಮಮತೆಯಿಂದ ಆತನನ್ನು ಸ್ವಾಧೀನಪಡಿಸಿಕೊಳ್ಳಬೇಕು. ಇದು ಅವನ ಶಕ್ತಿಗೆ ಭೂಷಣವು ; ಹಾಗೆ ಮಾಡದೆ ದುರ್ಬಲರಾದವರನ್ನು ಕೊಲ್ಲುವದರಲ್ಲಿಯೇ ತನ್ನ ಪರಾಕ್ರಮವನ್ನು ವಿನಿಯೋಗಿಸಿದರೆ ಆತನನ್ನಾರುತಾನೆ ಕೊಂಡಾಡುವರು ? ಧರ್ಮವಿರುದ್ಧವಾದ ಇಂಥ ಆಚರಣೆಯಿಂದ ಅವನು ದೋಷಕ್ಕೆ ಪಾತ್ರನಾಗುತ್ತಾನೆ. ಸ್ತ್ರೀಯರ ವಿಷಯದಲ್ಲಿ ಅನ್ಯಾಯಮಾಡಿ ಅವರನ್ನು ದುಃಖಪಡಿಸುವುದಕ್ಕೋಸ್ಕರ ಪುರುಷರಿಗೆ ಈಶ್ವರನು ಸ್ತ್ರೀಯರಿಗಿಂತ ಹೆಚ್ಚು ಬಲವನ್ನು ಕೊಟ್ಟಿಲ್ಲ. ಆದುದರಿಂದ ಪುರುಷರು ಸ್ತ್ರೀಯರನ್ನು ಉದಾಸೀನ ಮಾಡದೆ ಮಮತೆಯಿಂದ ಸ್ವಾಧೀನಪಡಿಸಿಕೊಂಡು ಅವರಲ್ಲಿ ಸ್ಥಿರವಾದ ತಮ್ಮ ಪ್ರೇಮವನ್ನು ಇಡಬೇಕಾದುದು ಯುಕ್ತವಾಗಿದೆ.

ಹೆಂಗಸರಲ್ಲಿಯೂ ಕೆಲವು ಮೂರ್ಖರು ತಮ್ಮ ಗಂಡಂದಿರಿಗೆ ತಮ್ಮಲ್ಲಿ ಪ್ರೇಮವಿಲ್ಲವೆಂದು ತಿಳಿದುಕೊಂಡು ಅವರ ಮನಸ್ಸನ್ನು ತಮ್ಮ ಸ್ವಾಧೀನಪಡಿಸಿಕೊಳ್ಳುವುದಕ್ಕೆ ಉಪಾಯವನ್ನು ಹುಡುಕುತ್ತಾರೆ. ಇಂಥ ಸ್ತ್ರೀಯರಿಗೆ ಪಂಚಾಕ್ಷರಿ, ಅಷ್ಟಾಕ್ಷರಿ ಮೊದಲಾದ ಮಂತ್ರಗಳನ್ನು ಉಪದೇಶ ಮಾಡುವವರೂ ಭಸ್ಮ, ತಾಯಿತಿ, ಮುಂತಾದ ವಶೀಕರಣದ ಉಪಾಯಗಳನ್ನು ಅನುಕೂಲಪಡಿಸಿ ಕೊಡುವವರೂ ಬೇಕಾ

ದಷ್ಟುಜನ ಸಿಕ್ಕುತ್ತಾರೆ. ಇಂಥ ಮೋಸಗಾರರು ಹೇಳಿದುದನ್ನೆಲ್ಲಾ ಮಾಡಲಿಕ್ಕೆ ಈ ಹುಚ್ಚಹೆಂಗಸರು ಸಿದ್ಧರಾಗಿರುತ್ತಾರೆ. ಇದರಿಂದ ಶ್ರಮಪಟ್ಟು ಸಂಪಾದಿಸಿದ ದ್ರವ್ಯವೂ ವ್ಯಯವಾಗಿ ಈ ದುರ್ಜನರ ದುರ್ಬೋಧೆಯಿಂದ ಆ ಸ್ತ್ರೀಯರ ಮರ್ಯಾದೆಯೂ ಉಳಿವುದಿಲ್ಲ. ಸ್ತ್ರೀಯರು ಇವರ ಹೇಳಿಕೆಯಂತೆ ಅನೇಕ ಅಧರ್ಮದ ಕೆಲಸಗಳನ್ನು ಮಾಡಿ ಜನರಲ್ಲಿ ಅಪವಾದಕ್ಕೆ ಗುರಿಯಾಗುತ್ತಾರೆ. ಇಷ್ಟರಲ್ಲಿಯೇ ಇದರ ಪರ್ಯವಸಾನವಾಗುವುದಿಲ್ಲ. ಈ ಮೋಸಗಾರರು ತಾವು ಹೇಳುವುದು ನಿಜವೆಂದು ತೋರುವುದಕ್ಕೋಸ್ಕರ ಈ ಔಷಧವನ್ನು ಇಂಥ ಹೊತ್ತಿನಲ್ಲಿ ಈ ರೀತಿಯಲ್ಲಿ ಗಂಡನಿಗೆ ಕೊಡು ; ಇದರಿಂದ ನೀನು ಹೇಳಿದಂತೆ ಇವನು ನಡೆಯುತ್ತಾನೆ—ಎಂದು ಹೇಳಿ ಆವುದಾದರೂ ಒಂದು ವಿಧವಾದ ಕಲ್ಲು, ಮಣ್ಣು, ಬೂದಿ ಮುಂತಾದುವನ್ನು ಕೊಡುತ್ತಾರೆ. ಬುದ್ಧಿಹೀನರಾದ ಹೆಂಗಸರು ಇವುಗಳನ್ನು ಗಂಡಂದಿರಿಗೆ ಆವ ರೀತಿಯಲ್ಲಿಯಾದರೂ ತಿನ್ನಲಿಕ್ಕೆ ಕೊಡುತ್ತಾರೆ. ಈ ಔಷಧಗಳ ಸ್ವಭಾವವನ್ನು ಪರೀಕ್ಷಿಸತಕ್ಕಷ್ಟು ಬುದ್ಧಿ ಇವರಿಗೆ ಇರುವುದಿಲ್ಲ. ಇವುಗಳಲ್ಲಿ, ಒಂದೊಂದುವೇಳೆ "ವಾತರೋಗಕ್ಕೆ ವೈದ್ಯ! ಪಿತ್ತರೋಗಕ್ಕೆ ವೈದ್ಯ! ಬಾಣಂತಿರೋಗಕ್ಕೆ ವೈದ್ಯ! ಸರ್ವರೋಗಕ್ಕೂ ವೈದ್ಯ!!" ಎಂದು ತಿರುಗುತ್ತಿರುವವರಲ್ಲಿ ಇರುವ ತಾಮ್ರ, ಪಾದರಸ, ಪಾಷಾಣ ಮುಂತಾದುವುಗಳ ಅಪಕ್ವವಾದ ಭಸ್ಮಗಳು ಸೇರಿ ಇರುತ್ತವೆ. ಇವೇನಾದರೂ ಹೊಟ್ಟೆಗೆ ಹೋದರೆ ಸ್ವಲ್ಪ ದಿವಸದಲ್ಲಾಗಲಿ ಅಥವಾ ಕಾಲಕ್ರಮದಿಂದಾಗಲಿ ಆ ಮನುಷ್ಯನು ಯಮಪಟ್ಟಣವನ್ನು ನೋಡಬೇಕಾಗುತ್ತದೆ!! ಬುದ್ಧಿಹೀನರಾದ ಸ್ತ್ರೀಯರು ಆ ಮೋಸಗಾರರ ಸುಳ್ಳು ಮಾತುಗಳನ್ನು ನಂಬಿ, ಗಂಡಂದಿರನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು, ಇಂಥ ಅಪಾಯಕರವಾದ ವಸ್ತುಗಳನ್ನು ಅವರ ಹೊಟ್ಟೆಗೆ ಹಾಕಿ ಪ್ರಾಣಭಯವನ್ನು ಉಂಟುಮಾಡುತ್ತಾರೆ. ಇವಕ್ಕಾಗಿ ಮಂತ್ರತಂತ್ರಗಳು ಇರುವುದು ಸುಳ್ಳು ; ಈ ಮಂತ್ರತಂತ್ರಗಳನ್ನು ಯತ್ನಿಸುವ ಹೆಂಗಸರ ನಡತೆ ಅವರ ಗಂಡಸರಿಗೆ ಎಂದಿಗಾದರೂ ಗೊತ್ತಾಗದೆ ಹೋಗುವುದಿಲ್ಲ ; ಗೊತ್ತಾದ ಕೂಡಲೆ ಅದುವರೆಗೂ ಅವರಮೇಲೆ ಇದ್ದ ಅಭಿಮಾನ ಲೇಶವೂ ಇಲ್ಲದಂತಾಗುತ್ತದೆ.

ಗಂಡಂದಿರನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಕೆಲವು ಉಪಾಯಗಳು ಉಂಟು. ಅವುಗಳನ್ನು ಸರ್ವರೂ ಮಾಡಬೇಕು. ಅವುಗಳಾವುವೆಂದರೆ:—

ತಮ್ಮ ನಡತೆ ತಮ್ಮ ಗಂಡಂದಿರ ಮನಸ್ಸು ಒಪ್ಪುವಂತೆ ಇರಬೇಕು. ಅವರಿಗೆ ಬೇಡವಾದುದನ್ನು ಎಂದಿಗೂ ಮಾಡಬಾರದು. ಅವರ ಎದುರಿಗೆ ಗಟ್ಟಿಯಾಗಿ ಮಾತನಾಡಬಾರದು. ಅವರನ್ನು ಎಂದಿಗೂ ನಿರಾಕರಿಸಬಾರದು. ಅವರು ಧರ್ಮಕ್ಕೆ ಅನುಸಾರವಾಗಿದ್ದ ಏನಾದರೂ ಕೆಲಸಗಳನ್ನು ಹೇಳಿದರೆ ಅದು ಶ್ರಮಸಾಧ್ಯವಾದರೂ ಮಾಡಬೇಕು. ಅವರು ಆವ ಕೆಲಸಗಳನ್ನು ಆವ ವೇಳೆಯಲ್ಲಿ ಮಾಡಬೇಕೆಂದು ಹೇಳುತ್ತಾರೋ ಆ ಕೆಲಸವನ್ನು ಆ ಹೊತ್ತಿಗೆ ಸರಿಯಾಗಿ ತಪ್ಪದೆ ಮಾಡಬೇಕು. ಅವರು ಹೇಳಿದ ಕೆಲಸವು ತಮ್ಮಿಂದ ಆಗುವುದಿಲ್ಲವೆಂದಾಗಲಿ, ಅದನ್ನು ಮಾಡುವುದರಲ್ಲಿ ತಮಗೆ ಬೇಸರಿಕೆಯಾಗುವುದೆಂದಾಗಲಿ, ಉದ್ಧತತನದಿಂದ ಹೇಳಬಾರದು. ಆ ಕೆಲಸವು ತಮ್ಮಿಂದ ಆಗದಪಕ್ಷದಲ್ಲಿ ನಮ್ರತೆಯಿಂದ ಅದರ ಕಾರಣಗಳನ್ನು ಅವರಿಗೆ ತಿಳಿಯಪಡಿಸಬೇಕು. ಅವರಲ್ಲಾವ ವಿಧವಾದ ಸುಳ್ಳನ್ನೂ ಹೇಳಬಾರದು ಅವರ ಎದುರಿಗೆ ಇತರರ ನಿಂದೆಯನ್ನು ಮಾಡಬಾರದು, ಇತರರ ಎದುರಿಗೆ ಅವರ ನಿಂದೆಯನ್ನು ಮಾಡಬಾರದು. ನಿಷ್ಕಾರಣವಾಗಿ ಸಿಟ್ಟು ಮಾಡಿಕೊಂಡು ಅವರ ಎದುರಿಗೆ ಬಾಯಿಗೆಬಂದಂತೆ ಮಾತನಾಡಬಾರದು. ಅವರನ್ನು ಎಂದಿಗೂ ಮೋಸಗೊಳಿಸಬಾರದು. ಅವರು ಮಾಡುವ ಒಳ್ಳೆಯಕೆಲಸಕ್ಕೆ ಅಡ್ಡಿ ಮಾಡಬಾರದು. ಅವರ ಮನಸ್ಸು ನೋಯುವ ಕೆಲಸವನ್ನು ಮಾಡಬಾರದು. ಯಾವ ಕೆಲಸದಲ್ಲಾಗಲಿ ತಮ್ಮದು ತಪ್ಪಾಗಿದ್ದರೆ ಒಪ್ಪಿಕೊಂಡು ಕ್ಷಮೆಯನ್ನು ಕೇಳಿಕೊಳ್ಳಬೇಕು. ಅವರು ಮಾಡಿದುದು ತಪ್ಪಾಗಿದ್ದರೆ ಅದಕ್ಕೆ ಸಿಟ್ಟುಮಾಡಿಕೊಳ್ಳದೆ ಸಮಾಧಾನದಿಂದ ಅದನ್ನು ಅವರಿಗೆ ತಿಳಿಸಬೇಕು. ತಮ್ಮಿಂದ ಆದಷ್ಟು ಪ್ರೇಮದಿಂದ ಅವರ ಶುಶ್ರೂಷೆಯನ್ನು ಮಾಡಬೇಕು.

ಒಳ್ಳೆಯ ಬಟ್ಟೆಗಳನ್ನು ಉಟ್ಟುಕೊಂಡು ಒಡವೆಗಳನ್ನು ತೊಟ್ಟುಕೊಂಡು ಪತಿಗಳನ್ನು ಮೋಹಗೊಳಿಸುವ ಯತ್ನವನ್ನು ಎಂದಿಗೂ ಮಾಡಬಾರದು. ತಮ್ಮಲ್ಲಿ ಒಳ್ಳೆಯ ಮನಸ್ಸಿದ್ದರೆ ಅದರಿಂದಲೇ ಅವರ

ಮನಸ್ಸು ತಮ್ಮಕಡೆಗೆ ತಿರುಗುತ್ತದೆ. ನೀವು ನಿಮ್ಮ ಸದ್ಗುಣಗಳಿಂದ ನಿಮ್ಮ ಪತಿಗಳನ್ನು ಮೋಹಗೊಳಿಸಬೇಕು. ಯಾವ ವಿಷಯದಲ್ಲಿ ಯೂ ನೀವು ಅವರಿಗೆ ವಂಚನೆಯನ್ನು ಮಾಡಬಾರದು. ಪತಿಗೆ ಸಮಾ ನವಾದ ಸ್ನೇಹಿತನು ಈ ಜಗತ್ತಿನಲ್ಲಾರೂ ಇಲ್ಲ. ಆತನು ಗುರುವಿನಂತೆ ಸನ್ಮಾರ್ಗವನ್ನು ತೋರಿಸುತ್ತಾನೆ; ತಂದೆಯಂತೆ ಹಿತವನ್ನುಂಟುಮಾ ಡುತ್ತಾನೆ; ತಾಯಿಯಂತೆ ಮಮತೆಮಾಡಿ ವಿಶ್ವಾಸಕ್ಕೆ ಪಾತ್ರನಾಗಿ ಇರುತ್ತಾನೆ; ದೇವರಂತೆ ಪೂಜ್ಯನಾಗಿ ನಿಮ್ಮ ಪ್ರಾಣಕ್ಕಿಂತಲೂ ಪ್ರಿಯ ನಾಗಿರುತ್ತಾನೆ. ನೀವು ಇಂಥ ಅದ್ವಿತೀಯನಾದ ಸ್ನೇಹಿತನನ್ನೇ ವಂಚಿ ಸಿದ ಪಕ್ಷದಲ್ಲಿ ಇನ್ನಾರ ಜೊತೆಯಲ್ಲಿತಾನೇ ನಿಷ್ಕಪಟವಾದ ಮನಸ್ಸಿ ನಿಂದ ಇದ್ದು ಸುಖಪಡಬಹುದು? ಪತಿಯನ್ನು ವಂಚಿಸುವ ಹೆಂಗಸರು ಎಂಥ ಅಕೃತ್ಯವನ್ನು ಮಾಡಲಿಕ್ಕೂ ಹಿಂತೆಗೆವುದಿಲ್ಲ. ಆದುದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಪತಿಗಳ ಸಂಗಡ ನಿರ್ವಂಚನೆಯಿಂದ ನಡೆದು ಕೊಳ್ಳಬೇಕು. ಯಾವ ಕೆಲಸವು ನಿಮ್ಮ ಪತಿಗಳಿಗೆ ಬೇಡವಾಗಿದೆಯೋ ಆ ಕೆಲಸವು ನಿಮಗೆ ಎಷ್ಟು ಲಾಭಕರವಾದರೂ, ಅದರಿಂದ ಇತರರಿಗೆ ನಿಮ್ಮಲ್ಲಿ ಪ್ರೇಮ ಉಂಟಾಗುವಹಾಗೆ ಇದ್ದರೂ, ನೀವು ಆ ಕೆಲಸವನ್ನು ಮಾಡಬಾರದು. ನಿಮ್ಮ ಪತಿಯು ನಿಮ್ಮಲ್ಲಿ ಹೇಳಿರುವ ಗುಟ್ಟಿನ ಮಾ ತುಗಳನ್ನು ಇತರರ ಸಂಗಡ ಸರ್ವಥಾ ಹೇಳಬಾರದು. ಏಕಾಂತವಲ್ಲಿ ನಿಮ್ಮ ಪತಿಯು ನಿಮ್ಮ ವಿಷಯದಲ್ಲಿ ಸಣ್ಣ ಮಾತುಗಳನ್ನಾಡಿದ್ದಲ್ಲಿ ಅವ ನ್ನು ಹೊರಪಡಿಸಬಾರದು. ಈ ಪ್ರಕಾರ ನೀವು ಆಚರಣೆಯನ್ನು ಇಟ್ಟದ್ದರೆ ನಿಮ್ಮ ನಿಮ್ಮಲ್ಲಿ ಎಂದಿಗೂ ವಿರೋಧವುಂಟಾಗುವುದಿಲ್ಲ. ಕೆಲವು ಹೆಂಗಸರು ತಮ್ಮ ಭಾವಮೈದಂದಿರ ಮೇಲೂ, ಅತ್ತೆ ಮಾವಂದಿರ ಮೇಲೂ ನೆರೆ ಹೊರೆಯವರ ಮೇಲೂ, ತಮ್ಮ ಗಂಡಂದಿರಿಗೆ ಕ್ಷುದ್ರ ವನ್ನು ಹೇಳಿ ಗಂಡಂದಿರ ಪ್ರೇಮವನ್ನು ಸಂಪಾದಿಸಲಿಕ್ಕೆ ಯತ್ನಿಸು ತ್ತಾರೆ. ಹಾಗೆ ಮಾಡುವುದು ಅನುಚಿತವಾದ ಕಾರ್ಯವು. ಕ್ಷುದ್ರ ವನ್ನು ಹೇಳುವವರನ್ನಾರೂ ನಂಬುವುದಿಲ್ಲ. ತಮ್ಮಲ್ಲಿ ಇತರರ ನಿಂದೆ ಯನ್ನು ಮಾಡುವ ಜನರು ಇತರರಲ್ಲಿ ತಮ್ಮ ನಿಂದೆಯನ್ನೂ ಮಾಡಬ ಲ್ಲರೆಂದು ಎಲ್ಲರೂ ಬಲ್ಲರು. ನಿಮ್ಮ ವಿಷಯದಲ್ಲಿ ಯಾರಾದರೂ ನಿಷ್ಕಾರ ಣವಾಗಿ ಅಪವಾದವನ್ನಾಡಿದರೆ ಅದನ್ನು ಕೇಳಿಕೊಂಡು ಸುಮ್ಮನಿದ್ದು

ನಿಮ್ಮ ಆಚರಣೆಯನ್ನು ನಿರ್ಮಲವನ್ನಾಗಿ ಮಾಡಿಕೊಂಡು, ಸಮಾಧಾನ ದಿಂದ ಇರಬೇಕು. ಈ ಅಪವಾದವು ಸುಳ್ಳೆಂಬುದು ಕಾಲಕ್ರಮೇಣ ಎಲ್ಲರಿಗೂ ತಿಳಿದು ಆ ಅಪವಾದವನ್ನು ಹೇಳಿದವರ ಮುಖಭಂಗವು ಆಗ ದೆ ತಪ್ಪದು. ನಿಮ್ಮ ಗಂಡಂದಿರ ವಿಷಯದಲ್ಲಾದರೂ ಅಪವಾದವನ್ನು ನುಡಿದರೆ ಅದಕ್ಕಾಗಿ ಅವರ ಸಂಗಡ ವಿವಾದ ಮಾಡಬಾರದು. ಆ ಅಪ ವಾದವು ನಿಜವಾಗಿದ್ದ ಪಕ್ಷದಲ್ಲಿ ಅದನ್ನು ನಿವಾರಣೆಮಾಡುವ ಪ್ರಯತ್ನ ಮಾಡಬೇಕೇ ಹೊರತು ಅದಕ್ಕಾಗಿ ಜನರ ಸಂಗಡ ವಿವಾದ ಮಾಡಿದುದ ರಿಂದ ಏನೂ ಫಲವಿಲ್ಲ. ನಿಮ್ಮ ಗಂಡಂದಿರಿಗೆ ನೀವು ಎಲ್ಲಾ ಕೆಲಸದಲ್ಲಿ ಯೂ ನಿಂಮ್ಮಿಂದಾಗುವಷ್ಟು ಸಹಾಯವನ್ನು ಮಾಡಬೇಕು. ಮನೆ ಯಲ್ಲಿ ನಡೆಯತಕ್ಕ ಕೆಲಸವನ್ನೆಲ್ಲ ಪಾಲುಮಾರಿಕೆಯಿಲ್ಲದೆ ಕಾಲಕಾಲಕ್ಕೆ ಸರಿಯಾಗಿ ಮಾಡುತ್ತಾ, ನಿಮ್ಮ ಪತಿಯು ಮತ್ತು ಮನೆಯಲ್ಲಿರುವ ಇತರ ಜನರ ಉನ್ನತಿಯಾಗುವಂಥ ಕೆಲಸದಲ್ಲಿ ಅವ್ಯಗ್ರವಾದ ಮನಸ್ಸನ್ನು ಇಡ ಬೇಕು. ಯಜಮಾನರು ಮನೆಗೆ ಬಂದಕೂಡಲೆ ಅವರ ಸಂಗಡ ಕೆಲ ಸಕ್ಕೆ ಬಾರದ ಮಾತುಗಳನ್ನು ಆಡುತ್ತಾ ಹೊತ್ತು ಕಳೆಯಬಾರದು. ಒಂದು ದಿವಸದಲ್ಲಿ ಒಂದೆರಡು ಘಳಿಗೆಯ ಮಟ್ಟಿಗೆ ಅವರ ಸಂಗಡ ವಿನೋದದಿಂದ ಹೊತ್ತನ್ನು ಕಳೆವುದು ನ್ಯಾಯವು. ಪರಂತು ಇದ ಕ್ಕಿಂತ ಹೆಚ್ಚು ಹೊತ್ತನ್ನು ಈ ರೀತಿಯಲ್ಲಿ ಕಳೆವುದರಿಂದ ಅನೇಕ ದೊ ಡ್ಡ ಕೆಲಸಗಳು ಕೆಡುವುದಲ್ಲದೆ ಪಾಲುಮಾರಿಕೆಯಿಂದ ಹೊತ್ತು ಕಳೆವ ದಂಪತಿಗಳಲ್ಲಿ ಪರಸ್ಪರ ಕಲಹಕ್ಕೆ ಕಾರಣವಾದ ಸಂಗತಿಗಳು ಹುಟ್ಟಿ ಜಗಳವೂ ಉಂಟಾಗುತ್ತದೆ. ಇದರಿಂದ ಮನಸ್ಸೂ ಶರೀರವೂ ಅಸ್ವ ಸ್ಥವಾಗಿ ಯಾವ ಕೆಲಸ ಮಾಡಲಿಕ್ಕೂ ಉತ್ಸಾಹ ಉಂಟಾಗುವುದಿಲ್ಲ. ನಿಮ್ಮ ಗಂಡಂದಿರ ಸಂಗಡ ಮಾತನಾಡುವಾಗ ಹೆಚ್ಚು ಹರಟೆಯನ್ನು ಬಿಟ್ಟು ನೀತಿ, ಜ್ಞಾನ, ಧರ್ಮ, ಮತ್ತು ದೇವರು, ಈ ವಿಷಯದಲ್ಲಿ ಮಾತನಾಡಬೇಕು. ಸಂಸಾರಕ್ಕೆ ಬೇಕಾದ ವಿಷಯಗಳನ್ನು ಸಮಯ ನೋಡಿ ತಿಳಿಸುತ್ತಿರಬೇಕು. ಅವರ ಮನಸ್ಸು ಆವ ಕಾರಣದಿಂದಲಾ ದರೂ ಖಿನ್ನವಾಗಿದ್ದರೆ ಅವರ ಸಂಗಡ ಒಳ್ಳೆಯ ಮಾತುಗಳನ್ನಾಡಿ ಸಮಾಧಾನಪಡಿಸಬೇಕು. ಯಾವ ಕೆಲಸದಲ್ಲಿಯಾಗಲಿ ಆಶಾಭಂಗವಾಗಿ ಉತ್ಸಾಹಹೀನರಾದರೆ ಉತ್ಸಾಹವನ್ನು ಉಂಟುಮಾಡುವ ಮಾತುಗಳಿಂ

ದ ಸಮಾಧಾನಪಡಿಸಿ ಧೈರ್ಯವನ್ನು ಹೇಳಬೇಕು. ಆಪತ್ತಿನ ಕಾಲದಲ್ಲಿ ಪತಿಯು ಯಾವಸ್ಥಿತಿಯಲ್ಲಿ ಇರುತ್ತಾನೋ ನೀವು ಮನಃಪೂರ್ವಕವಾಗಿ ಆ ಸ್ಥಿತಿಯಲ್ಲೇ ಇರಬೇಕು. ಅವುದಕ್ಕೂ ಅಸಮಾಧಾನ ಪಡಬಾರದು. ಕೆಲವು ಹೆಂಗಸರು ಒಳ್ಳೆಯ ಸೀರೆ, ಕುಪ್ಪಸ ಒಡವೆ ಮುಂತಾದುವುಗಳಿಗಾಗಿ ತಮ್ಮ ಪತಿಗಳಿಗೆ ಬಹಳ ತೊಂದರೆಯನ್ನು ಕೊಟ್ಟು, ಅವುಗಳನ್ನು ಆತನು ತಂದು ಕೊಡಲಾರದ ಸ್ಥಿತಿಯಲ್ಲಿ ಇದ್ದ ಪಕ್ಷದಲ್ಲಿ ತಮ್ಮ ತಂದೆ, ಚಿಕ್ಕಪ್ಪ, ಅಣ್ಣ, ತಮ್ಮ ಮುಂತಾದ ತೌರು ಮನೆಯುವರ ಪ್ರಶಂಸೆಯನ್ನು ಮಾಡಿ ಗಂಡನು ನಾಚಿಕೊಳ್ಳುವಂತೆ ಮಾಡುತ್ತಾರೆ. ಇದರಿಂದ ಆತನಿಗೆ ಬಹಳ ವ್ಯಸನ ಉಂಟಾಗಿ ಇವರ ವಿಷಯದಲ್ಲಿದ್ದ ಮಮತೆಯೂ ಇಲ್ಲವಾಗುತ್ತದೆ. ಆದುದರಿಂದ ಉತ್ತಮ ಸ್ತ್ರೀಯರು ಇಂಥ ದುರಾಚಾರವನ್ನುಮಾಡಬಾರದು. ಗಂಡಸರು ತಮ್ಮ ತಂದೆಯಿಂದ ಹೆಸರುವಾಸಿಯನ್ನು ಪಡೆವಂತೆ ಹೆಂಗಸರೂ ತಮ್ಮ ಪತಿಗಳಿಂದ ಹೆಸರುವಾಸಿಯನ್ನು ಪಡೆಯುತ್ತಾರೆ. ಗಂಡನಸ್ಥಿತಿ ಒಳ್ಳೆಯದಾಗಲಿ, ಕೆಟ್ಟುದಾಗಲಿ, ಗಂಡನಿಗೆ ಐಶ್ವರ್ಯವಿರಲಿ, ಬಡತನವಿರಲಿ, ಅದನ್ನು ಹೆಂಡತಿಯೂ ಅನುಭವಿಸಬೇಕು. ಹೀಗಿರುವಲ್ಲಿ ಅನ್ಯರ ಐಶ್ವರ್ಯದ ಗೊಡವೆ ಇವರಿಗೇತಕ್ಕೆ ? ತನ್ನ ತಂದೆ ಧೊರೆಯಾಗಿದ್ದರೂ ಆತನ ಪದವಿಗೆ ಸ್ತ್ರೀಯು ಎಂದಿಗೂ ಅಧಿಕಾರಿಯಾಗುವುದಿಲ್ಲ. ಆದುದರಿಂದ ತನ್ನ ಗಂಡನ ಮಾನವನ್ನು ಕಾಪಾಡಿ ಅತನು ಇರುವ ಸ್ಥಿತಿಯಲ್ಲಿ ತಾನೂ ಸಂತೋಷದಿಂದ ಇರಬೇಕು. ಇಂಥ ಸ್ತ್ರೀಯೇ ಈ ಲೋಕದಲ್ಲಿ ಮಾನ್ಯಳಾಗಿಯೂ ಪೂಜ್ಯಳಾಗಿಯೂ ಇರುತ್ತಾಳೆ. ನಮ್ಮ ಭರತ ಖಂಡದಲ್ಲಿ ಸೀತೆ, ಸಾವಿತ್ರಿ, ಅರುಂಧತಿ, ಲೋಪಾಮುದ್ರೆ, ದಮಯಂತಿ ಮುಂತಾದ ಕುಲಸ್ತ್ರೀಯರ ಯಶಸ್ಸು ಇಂದಿನವರೆಗೂ ಬೆಳದಿಂಗಳಂತೆ ನಿಷ್ಕಳಂಕವಾಗಿ ಪ್ರಕಾಶಿಸುವುದಕ್ಕೆ ಕಾರಣವೇನು ? ಇವರು ತಮ್ಮ ತಮ್ಮ ಗಂಡಂದಿರಿಗೆ ಪರಮ ಭಕ್ತರಾಗಿ ಅವರಲ್ಲಿ ಅತ್ಯಂತವಾಗಿ ಪ್ರೇಮವನ್ನು ಇಟ್ಟು ಇದ್ದುದರಿಂದಲೇ ಇಂಥ ಕೀರ್ತಿಯನ್ನು ಪಡೆದಿದ್ದಾರೆ. ಅಗಸ್ತ್ಯಋಷಿಯ ಪತ್ನಿಯಾದ ಲೋಪಾಮುದ್ರೆ ಒಬ್ಬ ರಾಜನ ಮಗಳು; ಅಗಸ್ತ್ಯಋಷಿಯ ಆಸ್ತಿಯೆಲ್ಲಾ ಮುತ್ತುಗದ ದಂಡ, ಕಮಂಡಲು, ನಾರಬಟ್ಟೆಗಳು, ತರಗಿನ ಗುಡಿಸಲು; ಇವು ಹೊರತು ಇನ್ನೇ

ಸೂ ಇರಲಿಲ್ಲ. ಆದಾಗ್ಯೂ ಲೋಪಾಮುದ್ರೆಯು ಈ ಅಗಸ್ತ್ಯಋ ಷಿಗೆ ವಿವಾಹವಾದ ಕೂಡಲೇ ತನ್ನ ತಂದೆ ಕೊಟ್ಟಿದ್ದ ರಾಜಯೋಗ್ಯ ವಾದ ಅಮೂಲ್ಯವಾದ ವಸ್ತ್ರಾಭರಣಗಳನ್ನು ತ್ಯಜಿಸಿ, ತನ್ನ ಪತಿಯ ಸ್ಥಿತಿಗೆ ಅನುರೂಪವಾದ ವಲ್ಕಲವನ್ನು ಉಟ್ಟುಕೊಂಡು, ಸಕಲ ರಾಜ ಭೋಗಗಳ ವಿಷಯದಲ್ಲಿಯೂ ನಿಸ್ಪೃಹಳಾಗಿ, ತನ್ನ ಗಂಡನ ಹಿಂದೆ ಯೇ ಸಿಂಹ, ಹುಲಿ ಮೊದಲಾದ ದುಷ್ಟಮೃಗಗಳಿಂದ ಭಯಂಕರವಾದ ಅರಣ್ಯದಲ್ಲಿ ವಾಸಮಾಡುವುದಕ್ಕೆ ಹೊರಟುಹೋದಳು.

ಪ್ರಾತಃಕಾಲದಲ್ಲಿ ಸ್ಮರಿಸುವುದಕ್ಕೆ ಯೋಗ್ಯಳಾಗಿಯೂ ರಮಣೀ ಕುಲಶಿರೋಮಣಿಯಾಗಿಯೂ ಇರುವ ಪತಿವ್ರತೆಯಾದ ಸೀತೆಯ ವೃ ತ್ತಾಂತವನ್ನು ಆಬಾಲವೃದ್ಧರೂ ಬಲ್ಲರು. ಈಕೆಗೆ ಸಮಾನರಾದ ಸ್ತ್ರೀಯರು ಈ ಜಗತ್ತಿನಲ್ಲಿ ಯಾರೂ ಇಲ್ಲ. ಈ ಭೂಮಿಗೆ 'ರತ್ನಗ ರ್ಭ' ಎಂದು ಹೆಸರುಬಂದಿದೆ. ಇದು ಈ ಸೀತೆಯನ್ನು ಹೆತ್ತುದರಿಂ ದಲೇ ಎಂದು ಹೇಳಬೇಕು. ಸರ್ವರಿಂದಲೂ ಸನ್ಮಾನಿತಳಾದ ಈ ಸೀತೆ ಯು ರಾಮನಿಗೆ ಮದುವೆಯಾದಕಾಲದಲ್ಲಿ ಬಿಸಲಿನ ತಾಪವನ್ನೂ ಗಾಳಿ, ಶೀತ, ಮಳೆ ಮೊದಲಾದುದರಿಂದ ಉಂಟಾಗುವ ಕ್ಲೇಶವನ್ನೂ ಸ್ವಪ್ನದ ಲ್ಲಿಯೂ ಕಂಡವಳಾಗಿರಲಿಲ್ಲ. ಅಂಥವಳು ತಂದೆಯ ವಾಕ್ಯವನ್ನು ಪರಿ ಪಾಲಿಸುವುದಕ್ಕಾಗಿ ಹದಿನಾಲ್ಕುವರುಷ ವನವಾಸಕ್ಕೆ ಹೊರಟ ತನ್ನ ಪತಿ ಯೊಡನೆ ಹೊರಟು, ಬೇಡಬೇಡವೆಂದು ಹೇಳಿದಾಗ್ಯೂ ಕೇಳದೆ, ಕ್ರೂರ ವಾದ ರಾಕ್ಷಸರಿಂದ ಅತಿಭಯಂಕರವಾದ ದಂಡಕಾರಣ್ಯದಲ್ಲಿ ವಾಸಮಾ ಡುವುದಕ್ಕೆ ಹೋದಳು. ಆಗ ವನವಾಸಕ್ಕೆ ಯೋಗ್ಯವಾದ ನಾರುವಸ್ತ್ರ ವನ್ನು ಉಡುವುದಕ್ಕೆ ಬಾರದೆ ಕೈಯಲ್ಲಿಟ್ಟುಕೊಂಡು, ನೀರುತುಂಬಿದ ಕಣ್ಣುಗಳಿಂದ ತನ್ನ ಪತಿಯಾದ ರಾಮನ ಮುಖವನ್ನು ನೋಡಲು, ಆತ ನು ತನ್ನ ಪ್ರಿಯಪತ್ನಿಗೆ ಆ ನಾರುವಸ್ತ್ರವನ್ನು ತನ್ನ ಕೈಯಿಂದಲೇ ಉಡಿಸಿದನು. ಬಳಿಕ ತಂದೆಗೆ ನಮಸ್ಕರಿಸಿ ವನವಾಸಕ್ಕೆ ಹೊರಟ ರಾಮ ನ ಹಿಂದೆಯೇ ರಾಜಮಾರ್ಗದಲ್ಲಿ ಅಂಥ ಶೋಚನೀಯವಾದ ಅವಸ್ಥೆಯ ಲ್ಲಿಯೂ ಸೀತೆಯು ಬಹು ಸಂತೋಷದಿಂದ ಹೋಗುತ್ತಿದ್ದಳು. ಆ ಕಾ ಲದಲ್ಲಿ ಆಕೆಯನ್ನು ನೋಡಿದ ಎಂಥ ಪಾಷಾಣಹೃದಯರಿಗೂ ಕಣ್ಣಲ್ಲಿ ನೀರುಬಾರದೆ ಇರಲಿಲ್ಲ. ಆದರೆ ಸೀತೆಗೆ ಅಣುಮಾತ್ರವೂ ದುಃಖವಿರಲಿಲ್ಲ.

ಪತಿಯ ಅಗಲಿಕೆಯನ್ನು ನರಕಕ್ಕೆ ಸಮನಾಗಿಯೂ, ಪತಿಯ ಸಹವಾಸವನ್ನು ಸ್ವರ್ಗಕ್ಕೆ ಸಮನಾಗಿಯೂ, ಭಾವಿಸಿದ್ದ ಸೀತೆಗೆ ಪತಿಯಲ್ಲಿದ್ದ ಪ್ರೇಮವೂ ಭಕ್ತಿಯೂ ಇಂಥದೆಂದು ಹೇಳುವುದಕ್ಕೆ ಯಾರಿಂದಲೂ ಆಗುವುದಿಲ್ಲ. ದೈವವು ಸೀತೆಗೆ ತನ್ನಿಂದಾದಷ್ಟು ದುರವಸ್ಥೆಯನ್ನು ಉಂಟುಮಾಡಿದರೂ ಆಕೆ ತನ್ನ ಪತಿಭಕ್ತಿಯಿಂದಲೂ ಪ್ರೇಮದಿಂದಲೂ ಅದನ್ನು ಲಕ್ಷ್ಯಮಾಡಲಿಲ್ಲ. ರಾಮನು ಲೋಕಾಪವಾದಕ್ಕೆ ಭಯಪಟ್ಟು ಪೂರ್ಣಗರ್ಭಿಣಿಯಾದ ಸೀತೆಯನ್ನು ನಿರಪರಾಧಿನಿಯಾಗಿದ್ದರೂ ಕೂಡ ನಿರ್ಜನವಾದ ಅಡವಿಗೆ ಕಳುಹಿಸಿಬಿಟ್ಟನು. 'ಅಪಿಗ್ರಾವಾರೋದಿತ್ಯಪಿದಳತಿ ವಜ್ರಸ್ಯಹೃದಯಂ' ಎಂದು ಭವಭೂತಿ ಹೇಳಿರುವಂತೆ ಈಕೆಯ ದುರವಸ್ಥೆಯನ್ನು ನೋಡಿ ಕಲ್ಲುಗಳು ಕೂಡ ರೋದನ ಮಾಡಿದುವು!! ಇಂಥ ಕಷ್ಟ ದಶೆಯಲ್ಲಿಯೂ ಸೀತೆಗೆ ಪತಿಪ್ರೇಮವೂ ಪಾತಿವ್ರತ್ಯವೂ ಅಣುಮಾತ್ರವೂ ಕಡಮೆಯಾಗಲಿಲ್ಲ. ತನ್ನಲ್ಲಿ ಅಪರಾಧವಿಲ್ಲದಿದ್ದರೂ ರಾಮನು ತನ್ನನ್ನು ಕಾಡಿಗೆ ಕಳುಹಿಸಿಬಿಟ್ಟನೆಂದು ರಾಮನಮೇಲೆ ದೋಷವನ್ನು ಆರೋಪಿಸಲಿಲ್ಲ. ತನ್ನ ದುರದೃಷ್ಟದಿಂದ ಇಂಥ ಅವಸ್ಥೆ ತನಗೆ ಉಂಟಾಯಿತೆಂದು ಧೈರ್ಯವನ್ನು ಅವಲಂಬಿಸಿ, 'ತಾವು ನನ್ನನ್ನು ವನಕ್ಕೆ ಕಳುಹಿಸಿಬಿಟ್ಟರೂ ನಾನು ತಮ್ಮ ದಾಸಿಯು. ನಾನು ವನದಲ್ಲಿದ್ದರೂ ಇತರ ಪ್ರಜೆಗಳನ್ನು ರಕ್ಷಿಸುವಂತೆ ನನ್ನನ್ನೂ ಸಹ ರಕ್ಷಿಸತಕ್ಕವರು ತಾವೇ ; ತಮ್ಮ ಕೀರ್ತಿಯು ನಿರ್ಮಲವಾಗಿರುವುದನ್ನು ಕೇಳಿದರೆ ನಾನು ಅರಣ್ಯದಲ್ಲಿಯೂ ಸುಖದಿಂದಿರುವೆನು' ಎಂದು ನೀತಿಯಿಂದಲೂ ಧರ್ಮದಿಂದಲೂ ಕೂಡಿದ ಮಾತುಗನ್ನು ಲಕ್ಷ್ಮಣನ ಸಂಗಡ ಹೇಳಿ ಕಳುಹಿಸಿದಳು!! ಆಹ! ಈಕೆಯ ಧೈರ್ಯವನ್ನೂ ಪತಿಭಕ್ತಿಯನ್ನೂ ಎಷ್ಟು ವರ್ಣಿಸಿದರೂ ಸ್ವಲ್ಪವೇ.

ಇಂಥ ಉತ್ತಮ ಸ್ತ್ರೀಯರು ಹುಟ್ಟಿದ ದೇಶವು ಎಷ್ಟು ಚಿಕ್ಕದಾದರೂ ಎಂಥ ಹೀನ ಸ್ಥಿತಿಯಲ್ಲಿದ್ದರೂ ಲೋಕದಲ್ಲಿ ಪೂಜ್ಯವಾದುದು. ಅತ್ಯಂತ ದುರ್ದಶೆಯಿಂದ ಕೂಡಿರುವ ನಮ್ಮ ಹಿಂದೂ ದೇಶದ ಜನರ ದುಃಖಿತವಾದ ಮನಸ್ಸನ್ನು ಸಮಾಧಾನಪಡಿಸುವಂಥ ವಿಷಯವು ಈ ದೇಶದಲ್ಲಿ ಮತ್ತೊಂದಿಲ್ಲ. ಈ ದೇಶದಲ್ಲಿ ಹುಟ್ಟಿದ ಸೀತೆಯಂಥ ಉತ್ತಮ ಸ್ತ್ರೀಯರು ಇನ್ನಾವ ದೇಶದಲ್ಲಿಯೂ ಹುಟ್ಟಲಿಲ್ಲವೆಂದು ಹಿಂದೂ

ದೇಶವು ಸರ್ವರಿಂದಲೂ ಹೊಗಳಿಸಿಕೊಳ್ಳುವುದಕ್ಕೆ ಆಸ್ಪದವಾಗಿದೆ. ಇತರ ವಿಷಯದಲ್ಲಿ ಈ ಭರತಖಂಡವು ಉಳಿದ ದೇಶಗಳಿಗಿಂತ ಕಡಿಮೆಯಾಗಿದ್ದರೂ ಸೀತೆಯಂಥ ಪತಿವ್ರತೆಯರ ಸತ್ಕೀರ್ತಿಯ ವಿಷಯದಲ್ಲಿ ಇದಕ್ಕೆ ಸಮಾನವಾದ ದೇಶ ಮತ್ತೊಂದಿಲ್ಲ. ದಮಯಂತಿ, ಸಾವಿತ್ರಿ ಮುಂತಾದ ಉತ್ತಮ ಸ್ತ್ರೀಯರ ಚರಿತ್ರೆಗಳು ಇದರಂತೆಯೇ ಇವೆ. ತಮ್ಮ ಸ್ತ್ರೀ ಜನರ ಯೋಗ್ಯತೆಯನ್ನು ಅಭಿವೃದ್ಧಿ ಪಡಿಸುವುದಕ್ಕೆ ಅಪೇಕ್ಷೆಯುಳ್ಳ ಸ್ತ್ರೀಯರು, ಮೇಲೆ ಹೇಳಿದಂಥ ಪವಿತ್ರವಾದ ನಡತೆಯು ಮರಳಿ ಉಜ್ಜೀವಿತವಾಗುವಂತೆ ನಡೆದುಕೊಳ್ಳಬೇಕು.

ಪತಿಗೆ ಬೇಸರವಾಗುವ ಆಚರಣೆ ಮೊದಲಾದುದನ್ನು ಆಚರಿಸಬಾರದೆಂದು ಮೊದಲೇ ಹೇಳಿಯಿದೆ. ಆದರೆ ಪತಿಯು ಧರ್ಮಕ್ಕೆ ವಿರುದ್ಧವಾದ ನಡತೆಯನ್ನು ನಡೆದರೆ ಆತನಿಗೆ ಸದುಪದೇಶವನ್ನು ಮಾಡಿ ಆ ಮಾರ್ಗದಿಂದ ಆತನನ್ನು ಹಿಂದಕ್ಕೆ ತಿರುಗಿಸುವುದು ಸ್ತ್ರೀಯರಿಗೆ ಅವಶ್ಯಕವಾದ ಕೆಲಸವು. ಯಾವ ಹೆಂಗಸು ಗಂಡನ ಪ್ರೀತಿಯನ್ನು ಸಂಪಾದಿಸಿಕೊಳ್ಳುವುದಕ್ಕಾಗಿ ಆತನು ಅಹುದು ಎಂದುದನ್ನು ಅಹುದು ಎಂದು ಹೇಳಿ, ಆತನು ಮನಸ್ಸಿಗೆ ಬಂದಂತೆ ನಡೆಯುತ್ತಾ ಇದ್ದರೆ ಅದನ್ನು ಅನುಮೋದಿಸಿ, ಆತನ ದುರ್ಮಾರ್ಗದಲ್ಲಿ ಸಹಾಯವನ್ನು ಮಾಡುತ್ತಾಳೋ, ಆಕೆಯು ನಿಜವಾಗಿಯೂ ಉತ್ತಮಸ್ತ್ರೀಯೆನ್ನಿಸಿಕೊಳ್ಳುವುದಿಲ್ಲ; ಆಕೆಯನ್ನು ಸ್ವಪ್ರಯೋಜನಪರಳೆಂದು ಎಣಿಸಬೇಕು. ಸಂಸಾರದಲ್ಲಿ ಹೆಂಡತಿಯು ಗಂಡನಿಗೆ ಪರಮಾಪ್ತಳಾಗಿರುತ್ತಾಳೆ. ಆಕೆಗೆ ಸಮಾನರಾದ ಮಿತ್ರರು ಮತ್ತೊಬ್ಬರಿಲ್ಲ. ತನ್ನ ಸ್ನೇಹಿತನ ಮನಸ್ಸು ಆವುದಾದರೂ ಒಂದು ಕೆಟ್ಟ ವಿಷಯದಲ್ಲಿ ಪ್ರವೃತ್ತವಾದರೆ ಅದನ್ನು ಬಿಡಿಸುವುದಕ್ಕಾಗಿ ತಕ್ಕ ಮಾತನ್ನಾಡಬೇಕು. ಆತನ ಮನಸ್ಸಿಗೆ ವಿಷಾದವಾಗಲಿ ಕೋಪವಾಗಲಿ ಉಂಟಾಗಿ ಸ್ನೇಹಕ್ಕೆ ಭಂಗ ಬಂದೀತೆಂದು ಯೋಚಿಸಬಾರದು. ಆತನಿಗೆ ಹಿತವನ್ನು ಉಂಟುಮಾಡುವುದಕ್ಕಾಗಿ ತನ್ನ ಸುಖದ ಆಶೆಯನ್ನೂ ಬಿಟ್ಟು, ಹೇಳತಕ್ಕ ಮಾತುಗಳನ್ನು ಹೇಳಲೇಬೇಕು. ಭಾರವಿ ಎಂಬ ಮಹಾ ಕವಿಯು "ಹಿತಂ ಮನೋಹಾರಿಚ ದುರ್ಲಭಂ ವಚಃ" ಎಂದರೆ ಪರಿಣಾಮದಲ್ಲಿ ಹಿತವಾಗಿಯೂ ತತ್ಕಾಲದಲ್ಲಿ ಮನೋಹರವಾಗಿಯೂ ಇರುವಂಥ ಮಾತು ದುರ್ಲಭವೆಂದು ಹೇಳಿದ್ದಾ

ನೆ. ಧರ್ಮಸಮ್ಮತವಾಗಿಯೂ ಹಿತಕರವಾಗಿಯೂ ಇರುವ ಮಾತನ್ನು ಹೇಳುವದರಿಂದ ಪತಿಯ ಪ್ರೇಮ ಕಡಿಮೆಯಾದರೂ ಇತರರ ಪ್ರೇಮ ಕಡಿಮೆಯಾದರೂ ಭಯಪಡಕೂಡದು. ಸತ್ಯವನ್ನಾಡಿದರೆ ಎಂದಿಗೂ ಭಯವಿಲ್ಲ. ಮೊದಲು ಸ್ವಲ್ಪ ಕಷ್ಟ ಪ್ರಾಪ್ತವಾದರೂ ಧಾರ್ಮಿಕನಿಗೆ ಕೊನೆಯಲ್ಲಿ ಸುಖವುಂಟಾಗುವುದು. ಆದುದರಿಂದ ಪತಿಯ ಪ್ರೇಮವನ್ನೂ ಇತರರ ಪ್ರೇಮವನ್ನೂ ಸಂಪಾದಿಸುವುದಕ್ಕೋಸ್ಕರ ಧರ್ಮಕ್ಕೆ ವಿರುದ್ಧವಾದ ಮಾರ್ಗವನ್ನು ಎಂದಿಗೂ ಅವಲಂಬಿಸಬಾರದು; ಆ ಮಾರ್ಗವನ್ನು ಅನುಮೋದಿಸಲೂ ಬಾರದು.

ಅನ್ಯರ ವಸ್ತ್ರಾಭರಣಾದಿಗಳ ವೈಭವವನ್ನು ನೋಡಿ ತಾವೂ ಅವರಂತೆಯೇ ಇರಬೇಕೆಂದು ಅನೇಕ ಸ್ತ್ರೀಯರು ಅವುಗಳನ್ನು ತಂದು ಕೊಡೆಂದು ತಮ್ಮ ಪತಿಗಳನ್ನು ನಾನಾ ವಿಧವಾಗಿ ಪೀಡಿಸುತ್ತಾರೆ. ಪತಿಯು ಅಸಮರ್ಥನಾಗಿದ್ದರೆ ತಮ್ಮ ರಾಕ್ಷಸಸ್ವಭಾವವನ್ನು ಆತನ ಮೇಲೆ ತೋರಿಸಿ, ಬೈಗುಳಗಳಿಂದಲೂ ಸಣ್ಣಸಣ್ಣ ಮಾತುಗಳಿಂದಲೂ ಆತನ ಮನಸ್ಸನ್ನು ನೋಯಿಸಿ ಅನಾದರವನ್ನು ಮಾಡುತ್ತಾರೆ. ಹೀಗೆ ಮಾಡುವುದು ನೀತಿಗೆ ವಿರೋಧವಾಗಿಯೂ ಅನುಚಿತವಾಗಿಯೂ ಇರುವುದರಿಂದ ಇಂಥ ಕಾರ್ಯವನ್ನು ಎಂದಿಗೂ ಮಾಡಬಾರದು. ಲೋಭವು ಮನುಷ್ಯನಿಗೆ ಪ್ರಬಲವಾದ ಶತ್ರುವು. ಲೋಭಿಯು ಸ್ನೇಹವನ್ನಾರೂ ಮಾಡುವುದಿಲ್ಲ. ಲೋಭಿಯು ಒಂದು ಕಾಸಿನ ಪದಾರ್ಥಕ್ಕಾಗಿ ಜನ್ಮಾರಭ್ಯ ತನ್ನ ಹಿತಚಿಂತಕರಾಗಿರುವ ಕೃಪಾಳುಗಳಾದ ಮಿತ್ರರ ಸಂಗಡ ದ್ವೇಷವನ್ನು ಮಾಡುವುದಕ್ಕೂ ಹಿಂತೆಗೆವುದಿಲ್ಲ. ಆದಕಾರಣ ನೀವು ಲೋಭಗ್ರಸ್ತರಾಗಿ ನಿಮ್ಮ ಪ್ರಾಣವಲ್ಲಭರನ್ನು ನೋಯಿಸಬಾರದು. ಆಯಾ ಕಾಲಕ್ಕೆ ಏನು ದೊರೆವುದೋ ಅದರಿಂದಲೇ ಸಂತುಷ್ಟರಾಗಿರಬೇಕು. ಸಂತುಷ್ಟವಾದ ಸ್ವಭಾವವುಳ್ಳವರು ನರಕಯಾತನೆಗೆ ಸರಿಯಾದ ಸಂಕಟ ಬಂದರೂ ಸುಖವಾಗಿರುತ್ತಾರೆ. ಅಸಂತುಷ್ಟರು ಸ್ವರ್ಗದಲ್ಲಿದ್ದರೂ ಅವರಿಗೆ ಸುಖವಿಲ್ಲ. ನಿಮ್ಮ ಪತಿಯು ಪ್ರೀತಿಪೂರ್ವಕವಾಗಿ ಒಂದು ಕಡ್ಡಿಯನ್ನು ಕೈಯೆತ್ತಿ ಕೊಟ್ಟರೂ, ಅದನ್ನು ಅನಾದರ ಮಾಡದೆ ಪ್ರೇಮದಿಂದ ಸ್ವೀಕರಿಸಬೇಕು. ಸ್ಪರ್ಶಮಣಿ ಸೋಕಿದಮಾತ್ರಕ್ಕೆ ಕಬ್ಬಿಣವು ಭಂಗಾರವಾಗುವಂತೆ ಪ್ರೇಮದ ಸಂಸರ್ಗವಾದ ಮಾ

ತ್ರಕ್ಕೇ ಬೆಲೆಯಿಲ್ಲದ ಪದಾರ್ಥವೂ ಬೆಲೆಯುಳ್ಳುದಾಗುತ್ತದೆ. ಪ್ರೇಮವಿಲ್ಲದೆ ಕೊಟ್ಟ ಭಂಗಾರದ ಒಡವೆಗಳಿಗಿಂತಲೂ ಪ್ರೇಮದಿಂದ ಕೊಟ್ಟ ಕಲ್ಲುಗಳ ಬೆಲೆ ಹೆಚ್ಚು. ಅನೇಕ ಸ್ತ್ರೀಯರು ಲೋಭಗ್ರಸ್ತರಾಗಿ, ತಮ್ಮ ಪತಿಗಳು ತಮಗೆ ಬೇಕಾದ ವಸ್ತುಗಳನ್ನು ಸಂಪಾದಿಸಿ ತಂದು ಕೊಡಲಾರದೆ ಹೋದರೆ, ನಾನಾವಿಧವಾದ ಕೆಟ್ಟ ಕೆಲಸವನ್ನು ಮಾಡುವುದಕ್ಕೆ ಆರಂಭಿಸುತ್ತಾರೆ. ಇದರಿಂದ ಅವರಿಗೆ ತಾವು ಅಪೇಕ್ಷಿಸುವ ಸುಖವುಂಟಾಗದೆ ಅತ್ಯಂತ ದುಃಖ ಉಂಟಾಗುವುದಲ್ಲದೆ ಮಾನವೂ ಉಳಿವುದಿಲ್ಲ. ಹೋದ ಮಾನವು ಎಂದಿಗೂ ಬರುವುದಿಲ್ಲ. ಆದಕಾರಣ ಪ್ರಾಣವಿರುವವರೆಗೂ ದುಃಖವನ್ನು ಅನುಭವಿಸಿಕೊಂಡಿರಬೇಕಾಗುತ್ತದೆ. ಆದುದರಿಂದ ತಮ್ಮತಮ್ಮ ಪತಿಗಳ ಪ್ರಕೃತಸ್ಥಿತಿಯಲ್ಲಿ ಸಂತುಷ್ಟರಾಗಿದ್ದರೆ ಪ್ರತಿಷ್ಠೆಯೂ ಮಹತ್ತ್ವವೂ ಸುಖವೂ ಉಂಟು.

ಈ ಪ್ರಕಾರ ಪತಿಯ ಮನಸ್ಸನ್ನು ಅನುಸರಿಸಿ, ಧರ್ಮಕ್ಕೂ ಪಾಪಕ್ಕೂ ಹೆದರಿಕೊಂಡು, ತಮ್ಮ ನಡತೆಯನ್ನು ಪವಿತ್ರವಾಗಿ ಇಟ್ಟುಕೊಳ್ಳುವ ಪತಿವ್ರತೆಯರೇ ಸ್ತ್ರೀಯರೆನಿಸಿಕೊಳ್ಳುತ್ತಾರೆ. ಕೆಲವು ಸ್ತ್ರೀಯರು ಈ ಪ್ರಕಾರವಾಗಿ ಆಚರಿಸದೆ ಪತಿಯ ಎಂಜಲನ್ನು ಉಣ್ಣುವುದು, ಆತನ ಕಾಲುತೊಳೆದ ನೀರನ್ನು ಕುಡಿವುದು ಮೊದಲಾದ ಆಚರಣೆಗಳನ್ನುಮಾತ್ರ ಜನರು ಮೆಚ್ಚುವಂತೆ ಮಾಡುತ್ತಾ ಪತಿವ್ರತೆಯರಂತೆ ನಟಿಸುತ್ತಾರೆ. ಆದರೆ ಈ ನಟನೆಯು ಬಹುಕಾಲ ನಡೆಯಲಾರದು. ಶರತ್ಕಾಲದ ಮೇಘದಂತೆ ಬಹುಬೇಗ ಕಾಣಿಸದೆ ಹೋಗುತ್ತದೆ. ಬಳಿಕ ಆಯಾ ಸ್ತ್ರೀಯರ ನಿಜವಾದ ಸ್ವರೂಪವು ಸರ್ವರಿಗೂ ಗೋಚರವಾಗುತ್ತದೆ. ಆದುದರಿಂದ ಕೊನೆಯುವರೆಗೂ ನಿಶ್ಚಲವಾಗಿ ನಿಲ್ಲುವಂಥ ನಿಷ್ಕಪಟವಾದ ಪ್ರೇಮವನ್ನು ನಿಮ್ಮ ಪತಿಗಳಲ್ಲಿ ಇರಿಸಬೇಕು. ತಮಗೆ ಅದ್ವಿತೀಯಮಿತ್ರನಾದ ಪತಿಗೆ ಹೊರಗೆ ಭಕ್ತಿಯನ್ನು ತೋರಿಸಿ, ಕಪಟ ಪ್ರೇಮದಿಂದ ಅವನನ್ನು ಮೋಸಗೊಳಿಸುವ ಸ್ತ್ರೀಯರಂಥ ನೀಚರು ಪ್ರಪಂಚದಲ್ಲಿ ಯಾರೂ ಇಲ್ಲ. ಹೀಗೆ ಮೋಸ ಮಾಡುವ ಸ್ತ್ರೀಯರು ಕೊನೆಗೆ ತಾವೇ ಮೋಸಹೋಗುತ್ತಾರೆ. ಅನೇಕ ಸ್ತ್ರೀಯರು 'ನನ್ನ ಗಂಡನಿಗೆ ನನ್ನಮೇಲೆ ಪ್ರೇಮವಿಲ್ಲ. ನನಗೆ ಬಹಳ ಅವಮಾನ ಮಾಡುತ್ತಾನೆ' ಎಂದು ಹೇಳಿಕೊಳ್ಳುತ್ತಾರೆ. ಹೀಗೆ ಹೇಳಿಕೊಳ್ಳುವುದು

ಕೆಲವರಲ್ಲಿ ನಿಜವಾದರೂ ವಿಚಾರಮಾಡಿ ನೋಡಿದರೆ ಅನೇಕ ಕಡೆಗಳಲ್ಲಿ ಆ ಪ್ರಕಾರ ಇರುವುದಿಲ್ಲ. ಸ್ತ್ರೀಯರು ಮೂರ್ಖರಾಗಿ ವಿರೋಧವಾದ ಆಚರಣೆಯನ್ನು ಮಾಡುವುದರಿಂದಲೇ ದಂಪತಿಗಳಲ್ಲಿ ಪರಸ್ಪರ ವಿರೋಧ ಉಂಟಾಗುತ್ತದೆ. ಆದಕಾರಣ ಯಾವ ಕಾಲದಲ್ಲಿ ಯಾವ ಮಾತುಗಳನ್ನು ಆಡಿದರೆ ತಮ್ಮತಮ್ಮಲ್ಲಿ ವಿರೋಧವುಂಟಾಗುತ್ತದೋ ಅಂಥ ಮಾತುಗಳನ್ನು ಆಡದೆ ಬಿಡಬೇಕು. ಯಾವಾಗಲೂ ತಮಗೆ ಯೋಗ್ಯವಲ್ಲದ ಕೆಲಸವನ್ನು ಮಾಡದೆ ಇದ್ದರೆ ಎಂದಿಗೂ ಮಾನಹಾನಿಯಾಗುವುದಿಲ್ಲ. ಪತಿಗೆ ಕೋಪ ಬಂದ ಕಾಲದಲ್ಲಿಯೂ ಅಥವಾ ವ್ಯಾಧಿ, ಶೋಕ ಮುಂತಾದುವುಗಳಿಂದ ಆತನ ಮನಸ್ಸು ಅಸ್ವಸ್ಥವಾಗಿರುವ ಕಾಲದಲ್ಲಿಯೂ, ಆತನ ಸಂಗಡ ಹೆಚ್ಚು ಕಡಿಮೆ ಮಾತುಗಳನ್ನಾಡಬಾರದು. ಕೋಪದ ಸಮಯದಲ್ಲಿ ಸಮಾಧಾನದಿಂದ ಮಾತನಾಡಿ ಆತನ ಕೋಪವನ್ನು ಹೋಗಲಾಡಿಸಬೇಕು. ವ್ಯಾಧಿ, ಶೋಕ ಮುಂತಾದುವು ಪ್ರಾಪ್ತವಾದ ಕಾಲದಲ್ಲಿ ಸಮಯೋಚಿತವಾದ ಮಧುರ ವಚನಗಳಿಂದ ಆತನ ಸಂತಾಪವನ್ನು ನಿವಾರಣೆ ಮಾಡಬೇಕು. ಯತ್ನಿಸಿದ ಕೆಲಸ ಸಿದ್ಧಿಸದೆ ಹೋದರೆ ಮನುಷ್ಯನು ಉತ್ಸಾಹಹೀನನಾಗಿ, ಆವ ಕೆಲಸವನ್ನೂ ಮಾಡದೆ ಸುಮ್ಮನೆ ಕುಳಿತುಕೊಳ್ಳುತ್ತಾನೆ. ಅಂಥ ಸಮಯದಲ್ಲಿ ಉತ್ಸಾಹವುಂಟಾಗುವಂತೆ ಮಾತನಾಡಬೇಕು.

ಹೀಗೆ ಎಲ್ಲಾ ಕೆಲಸದಲ್ಲಿಯೂ ಎಲ್ಲಾ ಕಾಲದಲ್ಲಿಯೂ ಪತಿಯ ಮನಸ್ಸನ್ನು ಅನುಸರಿಸಿ ಆತನಿಗೆ ಸಹಾಯ ಮಾಡುವುದು ಸ್ತ್ರೀಯರ ಮುಖ್ಯಧರ್ಮವಾಗಿದೆ. ಈ ಪ್ರಕಾರ ಆಚರಿಸುವ ಸ್ತ್ರೀಯರೇ ತಮ್ಮ ಪತಿಗಳ ಅರ್ಧಾಂಗವೆನ್ನಿಸಿಕೊಳ್ಳುತ್ತಾರೆ. ತಮ್ಮ ಸ್ವಾರ್ಥವನ್ನು ಮಾತ್ರ ನೋಡಿಕೊಂಡು ಪತಿಗಳಿಗೆ ಯಾವ ಸಹಾಯವನ್ನೂ ಮಾಡದೆ ಇರುವ ಸ್ತ್ರೀಯರನ್ನು ಪತಿವ್ರತೆಯರೆನ್ನಕೂಡದು. ಯಾವ ಸ್ತ್ರೀಯು ನಿಸ್ಪೃಹಳಾಗಿ ಪ್ರತಿಕ್ಷಣದಲ್ಲಿಯೂ ತನ್ನ ಪತಿಗೆ ಸಹಾಯ ಮಾಡುತ್ತಾ ಇರುತ್ತಾಳೋ ಆಕೆಯಮೇಲೆ ಆಕೆಯ ಪತಿಯ ಪ್ರೇಮವು ಇದ್ದೇ ಇರುತ್ತದೆ; ಆಕೆಯ ವಿಷಯದಲ್ಲಿ ಆತನು ಸನ್ಮಾನವನ್ನು ಮಾಡಿಯೇ ಮಾಡುತ್ತಾನೆ. ತಮ್ಮ ಮನೆಯಲ್ಲಿ ಇಷ್ಟ ಸಾಧನಸಂಪತ್ತು ಇರುವಾಗ ಇದನ್ನು ಬಿಟ್ಟು ಅನ್ಯತ್ರ ಹೋಗುವಂಥ ಪುರುಷಾಧಮರು ಆರು

ತಾನೇ ಇದ್ದಾರೆ. ಮೇಲೆ ವಿವರಿಸಿದಂತೆ ನೀವು ನಡೆದುಕೊಂಡರೆ ನಿಮ್ಮ ಪತಿಯು ನಿಮ್ಮ ವಶನಾಗುತ್ತಾನೆ. ನಿಷ್ಕಪಟವಾಗಿ ಮಾತನಾಡುವುದು, ಪತಿಯ ಮನಸ್ಸಿನಂತೆ ನಡೆವುದು, ಇವೆರಡೂ ಪತಿಯ ವಶೀಕರಣಕ್ಕೆ ಉತ್ತಮವಾದ ಮಂತ್ರಗಳೆಂದು ಎಣಿಸಬೇಕು. ರಾಕ್ಷಸ ಸ್ವಭಾವವುಳ್ಳ ಪುರುಷರೂ ಕೂಡಾ ಈ ಮಂತ್ರಗಳಿಂದ ಸ್ವಾಧೀನರಾಗುತ್ತಾರೆ. ಜನರಲ್ಲಿ ಸನ್ಮಾನಿತರಾಗುವುದೂ, ಪ್ರೀತಿಪಾತ್ರರಾಗುವುದೂ, ತಮ್ಮ ತಮ್ಮ ಕೈಯಲ್ಲಿಯೇ ಇವೆ. ನಾವು ಇತರರಲ್ಲಿ ಎಂಥ ನಡತೆಯನ್ನು ಇಡುತ್ತೇವೋ ಅವರೂ ನಮ್ಮಲ್ಲಿ ಅಂಥ ನಡತೆಯನ್ನು ಇಡುತ್ತಾರೆ. ಎಂಬುದನ್ನು ಚೆನ್ನಾಗಿ ನೆನಪಿನಲ್ಲಿ ಇಟ್ಟುಕೊಂಡು ನಡೆದರೆ ಸರ್ವಥಾ ಅವಮಾನ ಪ್ರಾಪ್ತಿಯಾಗಲಾರದು; ಇದರಮೇಲೂ ಪ್ರಾಪ್ತವಾದರೆ ಧೈರ್ಯವನ್ನು ಬಿಡಬಾರದು. ಇನ್ನುಮೇಲೆ ಸ್ತ್ರೀಯರು ತಮ್ಮ ಗೃಹಕೃತ್ಯವನ್ನು ನಡಿಸುವ ಕ್ರಮವನ್ನು ಹೇಳುತ್ತೇನೆ.

---

## ೬ನೆಯ ಪರಿಚ್ಛೇದ.

---

### ಗೃಹಕೃತ್ಯ.

ಪೂರ್ವಿಕರಾದ ದೊಡ್ಡ ವಿದ್ವಾಂಸರು, ಮನುಷ್ಯರಿಗೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸವೆಂದು ನಾಲ್ಕು ಆಶ್ರಮಗಳನ್ನು ಕಲ್ಪಿಸಿ ಇವುಗಳಲ್ಲಿ ಗೃಹಸ್ಥಾಶ್ರಮವೇ ದೊಡ್ಡದೆಂದು ನಿಶ್ಚಯಿಸಿ ಇದ್ದಾರೆ. ಈ ಗೃಹಸ್ಥಾಶ್ರಮದಿಂದಲೇ ಮಿಕ್ಕ ಮೂರು ಆಶ್ರಮದವರಿಗೂ ಸಂರಕ್ಷಣೆಯಾಗುತ್ತದೆ. ಪ್ರಪಂಚದಲ್ಲಿ ಪರೋಪಕಾರಕ್ಕಿಂತಲೂ ಹೆಚ್ಚಾದ ಪುಣ್ಯದ ಕೆಲಸ ಮತ್ತೊಂದಿಲ್ಲ. ಇದು ಗೃಹಸ್ಥಾಶ್ರಮದವರಿಂದ ಆದಷ್ಟು ಇತರ ಆಶ್ರಮದವರಿಂದ ಆಗುವುದಿಲ್ಲ. ಆದುದರಿಂದ ಗೃಹಸ್ಥರೇ ದೊಡ್ಡವರೆನ್ನಿಸಿಕೊಳ್ಳುತ್ತಾರೆ. ಯುಕ್ತಪ್ರಕಾರದಲ್ಲಿ ಮದುವೆಯಾಗಿ ಗಂಡಹೆಂಡಿರು ಪರಸ್ಪರ ಪ್ರೀತಿಯಿಂದ ನಡೆದುಕೊಳ್ಳುವುದೇ ಗೃಹಸ್ಥಾಶ್ರಮವು. ವಿವಾಹವಾದಮೇಲೆ ಪತಿಯನ್ನು ಪತ್ನಿಯು ಹೇಗೆ

ಅನುವರ್ತಿಸಿಕೊಂಡು ಇರಬೇಕೋ ಅದನ್ನು ಮೊದಲೇ ಹೇಳಿದ್ದೇನೆ. ಸ್ತ್ರೀಯು ತನ್ನ ಪತಿಗೆ ಸರ್ವಕಾರ್ಯಗಳಲ್ಲಿಯೂ ಸಹಾಯಕಳಾಗಿರಬೇಕು. ಈಕೆ ಸಹಾಯ ಮಾಡಬೇಕಾದ ಕೆಲಸಗಳು ಬಹಳವಾಗಿವೆ. ಇವುಗಳಲ್ಲಿ ಕೆಲವನ್ನು ಮೊದಲು ಹೇಳಿದ್ದೇನೆ. ಮುಖ್ಯವಾಗಿ ಗೃಹಕೃತ್ಯದಲ್ಲಿ ಈಕೆಯ ಸಹಾಯ ಅವಶ್ಯಕವಾಗಿರಬೇಕು.

ಗೃಹಕೃತ್ಯವೆಂಬುದು ಮುಖ್ಯವಾಗಿ ಹೆಂಗಸರ ಕೆಲಸವು. ಇದರಲ್ಲಿ ಅವರು ಸೋಲುಮಾರಿಕೆಯನ್ನು ಮಾಡಕೂಡದು. ಸ್ತ್ರೀಯರು ತಮ್ಮ ಕೆಲಸವನ್ನು ಮಾಡದೆ ಇರುವ ಮನೆಯಲ್ಲಿ ಸುಖವಿರುವುದಿಲ್ಲ. ಪಂಡಿತರು 'ಗೃಹಿಣೀ ಗೃಹಂ' ಎಂದು ಹೇಳಿದ್ದಾರೆ. ಹೆಂಗಸರಾಗಿ ಹುಟ್ಟಿದ ಮಾತ್ರದಿಂದಾಗಲಿ ಅಥವಾ ಯಾರನ್ನಾದರೂ ಮದುವೆಯಾದ ಮಾತ್ರದಿಂದಾಗಲಿ ಹೆಂಗಸು ಗೃಹಿಣಿ ಯೆನ್ನಿಸಿಕೊಳ್ಳುವುದಿಲ್ಲ. ಈ ಹೆಸರಿಗೆ ಯೋಗ್ಯರಾಗಬೇಕಾದರೆ ಬಹಳ ಶ್ರಮಪಡಬೇಕು. ಅಲ್ಪಬುದ್ಧಿಯುಳ್ಳ ಸ್ತ್ರೀಯರಿಗೆ ಈ ಹೆಸರು ಬರುವುದಿಲ್ಲ. ಈ ಹೆಸರನ್ನು ಪಡೆಯಲಪೇಕ್ಷೆಯುಳ್ಳವರು ಬುದ್ಧಿವಂತರಾಗಿ ಮನೆಯಲ್ಲಿ ಸರ್ವರ ಸಂಗಡಲೂ ಪ್ರೇಮದಿಂದ ನಡೆದುಕೊಳ್ಳಬೇಕು.

ಮನುಷ್ಯನು ಮೊದಲು ಸೋಲುಮಾರಿಕೆಯನ್ನು ಬಿಡಬೇಕು. ಮನುಷ್ಯನಿಗೆ ಸೋಲುಮಾರಿಕೆಯು ಒಂದು ಶತ್ರುವು. ಸೋಲುಮಾರಿಕೆಯ ಅಧಿಕಾರವು ಯಾರ ಮನಸ್ಸಿನಮೇಲೆ ನಡೆಯುತ್ತದೋ ಅವನನ್ನು ಮನುಷ್ಯನೆಂದು ಹೇಳುವುದಕ್ಕಾಗುವುದಿಲ್ಲ. ಮನುಷ್ಯತ್ವಕ್ಕೆ ಯೋಗ್ಯವಾದ ಆವ ಕೆಲಸವೂ ಅವನಿಂದ ನಡೆವುದಿಲ್ಲ. ಇದರಂತೆಯೇ ಅಹಂಕಾರ, ಕೋಪ, ದ್ವೇಷ, ಲೋಭ, ಹಿಂಸೆ, ನಿಂದಕತೆ, ಕಪಟ, ಅಸತ್ಯ, ಅವಸರ, ದುರಭಿಮಾನ, ಡಂಭ, ಸ್ವಾರ್ಥಪರತೆ, ಈರ್ಷ್ಯೆ, ಅಮಿತಾಚರಣೆ ಮೊದಲಾದ ದುರ್ಗುಣಗಳಿಗೆ ತಮ್ಮಲ್ಲಿ ಅವಕಾಶವನ್ನು ಕೊಡಕೂಡದು. ಇವುಗಳಿಂದ ಉಂಟಾಗುವ ನಷ್ಟಗಳನ್ನು ಹೇಳುತ್ತೇನೆ.

ಆಲಸ್ಯವು.—ಈ ದುರ್ಗುಣವು ಮನುಷ್ಯನಲ್ಲಿ ಪ್ರವೇಶಮಾಡಿದ ಕೂಡಲೇ ಅತಿ ದುರ್ಲಭವಾದ ಮನುಷ್ಯನ ಆಯುಸ್ಸು ವ್ಯರ್ಥವಾಗಿ ಕಳೆದುಹೋಗುತ್ತದೆ. ಸೋಲುಮಾರಿಕೆಯ ಜನರು ಹೊತ್ತಿಗೆ ಸರಿಯಾಗಿ

ಆವ ಕೆಲಸವನ್ನೂ ಮಾಡುವುದಿಲ್ಲ. ಅವರು ಈಗ ಮಾಡಬೇಕಾದ ಕೆಲಸವನ್ನು ಒಂದು ಘಳಿಗೆ ಬಿಟ್ಟು ಮಾಡೋಣವೆನ್ನುತ್ತಾರೆ. ಬಳಿಕ ಘಳಿಗೆಯಮೇಲೆ ದಿವಸ, ದಿವಸದಮೇಲೆ ತಿಂಗಳು, ಹೀಗೆ ಕಾಲಕಳೆದು ಕೆಲಸವೇ ಸಿಂತುಹೋಗುತ್ತದೆ. ಈ ರೀತಿಯಲ್ಲಿ ಹೋದ ಹೊತ್ತು ಭೂಮಂಡಲವನ್ನೆಲ್ಲಾ ಕೊಟ್ಟು ತಿರುಗಿ ಸಂಪಾದಿಸಬೇಕೆಂದರೂ ಸಾಧ್ಯವಾಗುವುದಿಲ್ಲ. ಸತ್ತ ಮನುಷ್ಯರು, ಕಳೆದುಹೋದ ಹೊತ್ತು, ಹರಿದು ಹೋದ ನೀರು—ಇವು ಎಷ್ಟು ಪ್ರಯತ್ನ ಮಾಡಿದರೂ ಹಿಂದಕ್ಕೆ ತಿರುಗುವುದಿಲ್ಲ. ಆಯಾ ಹೊತ್ತಿನಲ್ಲಿ ಮಾಡಬೇಕಾದ ಕೆಲಸವನ್ನು ಮಾಡುವುದಕ್ಕೆ ಪೋಲುಮಾರಿದರೆ, ಹೊತ್ತು ವ್ಯರ್ಥವಾಗಿ ಹೋಗುವುದಲ್ಲದೆ, ಕಾರ್ಯವೂ ಕೆಟ್ಟು ಒಂದೊಂದುವೇಳೆ ಇತರವಿಧವಾದ ನಷ್ಟವೂ ಸಂಭವಿಸುವುದುಂಟು. ಆದುದರಿಂದ ಹೊತ್ತಿಗೆ ಸರಿಯಾಗಿ ಎಲ್ಲಾ ಕೆಲಸವನ್ನೂ ಮಾಡಬೇಕು. ಮಳೆ ಬರುವುದಕ್ಕೆ ಮುಂಚೆ ಒಕ್ಕಲಿಗನು ಉಕ್ಕೆ ಹೊಡೆದುಕೊಂಡಿದ್ದು ಮಳೆಬಿದ್ದ ಕೂಡಲೆ ಹದವರಿತು ಬೀಜವನ್ನು ಬಿತ್ತದೆ ಇದ್ದರೆ ಅವನಿಗೆ ಬೆಳೆ ಹೇಗಾದೀತು? ಪ್ರತಿದಿವಸವೂ ಯಾವ ಯಾವ ಹೊತ್ತಿನಲ್ಲಿ ಯಾವ ಯಾವ ಕೆಲಸವನ್ನು ಮಾಡಬೇಕೋ ಅದನ್ನು ಗೊತ್ತುಮಾಡಿಕೊಂಡು, ಅದರಂತೆ ತಪ್ಪದೆ ಕೆಲಸವನ್ನು ಮಾಡಬೇಕು. ಹೀಗೆ ಪ್ರತಿದಿನದಲ್ಲಿಯೂ ಸ್ವಲ್ಪಸ್ವಲ್ಪ ಕೆಲಸ ಮಾಡುವುದರಿಂದ ಕಾಲಕ್ರಮೇಣ ಬಹಳ ಕೆಲಸವಾಗುತ್ತದೆ; ಹಾಗೆ ಮಾಡದೆ ಪೋಲುಮಾರಿದರೆ ಕೊನೆಗೆ ಕೆಲಸವು ಗುಡ್ಡದಹಾಗೆ ಬೆಳೆದುಹೋಗುತ್ತದೆ. ಆಗ ಅದನ್ನು ಮಾಡದೆಯಿದ್ದರೆ ನಿರ್ವಾಹವಿಲ್ಲದ ಪಕ್ಷದಲ್ಲಿ ಬಹಳ ಶ್ರಮಪಡಬೇಕಾಗುತ್ತದೆ. ಇದರಿಂದ ಅವರ ದೇಹಸ್ಥಿತಿಯೂ ಕೆಡುವುದಲ್ಲದೆ ಅವಸರದಲ್ಲಿ ಮಾಡುವುದರಿಂದ ಕೆಲಸವೂ ಚೆನ್ನಾಗಿ ಆಗುವುದಿಲ್ಲ. ಹೀಗೆ ಆಲಸ್ಯದಿಂದ ನಾನಾಪ್ರಕಾರವಾದ ಹಾನಿಯೂ, ಜನರ ಅಪಹಾಸ್ಯವೂ, ದೇಹಾಯಾಸವೂ, ಮನೋವ್ಯಥೆಯೂ ಉಂಟಾಗುವವು. ಆದುದರಿಂದ ಇದಕ್ಕೆಲ್ಲಾ ಕಾರಣವಾದ ಆಲಸ್ಯವನ್ನು ಬಿಡಬೇಕು.

ಅಹಂಕಾರ.—ಅಹಂಕಾರವುಳ್ಳ ಮನುಷ್ಯನಿಗೆ ಎಂದಿಗಾದರೂ ಮಾನಚ್ಯುತಿಯಾಗುವುದೇ ನಿಶ್ಚಯವೆಂದು ಬಲ್ಲವರು ಗೊತ್ತುಮಾಡಿದ್ದಾರೆ. ಇದಕ್ಕೆ ಸಾವಿರಾರು ನಿದರ್ಶನಗಳಿದ್ದರೂ ಜನರು ಅಜ್ಞಾನದಿಂದ

ಕಣ್ಣುಮುಚ್ಚಿಕೊಂಡು ಅವುಗಳನ್ನು ನೋಡುವುದಿಲ್ಲ. ಧನ, ಮಾನ, ಬಲ, ಐಶ್ವರ್ಯ, ಸಹಾಯ ಮೊದಲಾದುವುಗಳು ಇದ್ದಮಾತ್ರಕ್ಕೆ ನೀವು ಗರ್ವ ಪಡಬಾರದು. ಇವುಗಳಲ್ಲಾವುದೂ ಕೊನೆಯವರೆಗೂನಿಲ್ಲು ವುದಿಲ್ಲ. ರಾವಣ, ಹೈಹಯ, ದುರ್ಯೋಧನ, ನೆಪೋಲಿಯನ್, ಔರಂಗಜೇಬ್ ಮುಂತಾದ ಚಕ್ರವರ್ತಿಗಳಲ್ಲಿ ಶೌರ್ಯ, ಔದಾರ್ಯ, ಸತ್ಯಪ್ರತಿಜ್ಞತೆ, ಬಲ ಮುಂತಾದ ಗುಣಗಳಿದ್ದರೂ ಕೊನೆಗೆ ಅವರು ಅಹಂಕಾರದಿಂದಲೇ ನಿಂದೆಗೆ ಒಳಗಾದರು. 'ನಾನು ಏನು ಬೇಕಾದರೂ ಮಾಡಬಲ್ಲೆನು, ನನಗಾರೂ ಸರಿ ಇಲ್ಲ' ಎಂಬ ಅಹಂಕಾರವು ಎಂದಿಗೂ ನಡೆವುದಿಲ್ಲ. ಅಹಂಕಾರವು ಅಜ್ಞಾನಕ್ಕೆ ಮುಖ್ಯಲಕ್ಷಣವಾಗಿಯೂ ಅಧಃಪತನಕ್ಕೆ ಪೂರ್ವಸೂಚನೆಯಾಗಿಯೂ ಇದೆ. ಈ ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ. ಇದಕ್ಕೆ ನೀವೇ ಸಾಕ್ಷಿ. ನೀವು ಚಿಕ್ಕವ ರಾಗಿರುವಾಗ ನಿಮ್ಮ ಶರೀರ, ಮನಸ್ಸು, ಆಶೆ ಸಹ ಚಿಕ್ಕವುಗಳಾಗಿದ್ದುವು. ಆಗ ನಿಮ್ಮ ಮನಸ್ಸು ಸರಳವಾಗಿಯೂ ನಿರ್ಮಲವಾಗಿಯೂ ಇದ್ದಿತು. ನಿಮಗಾವ ಚಿಂತೆಯೂ ಇರಲಿಲ್ಲ. ನೀವು ತಿಳಿಯದಂತೆಯೇ ಕಾಲವು ಕಳೆದುಹೋಗಿ ನೀವು ಯೌವನಸ್ಥರಾದಿರಿ. ಈಗ ನಿಮ್ಮ ಮನಸ್ಸಿನಲ್ಲಿ ನಾನಾವಿಧವಾದ ಯೋಚನೆಗಳು ಹುಟ್ಟಿದುವು. ನಿಮ್ಮ ಆಶೆಯೂ ಬೆಳೆ ಯಿತು. ನಿಮ್ಮ ಅದೃಷ್ಟದಿಂದ ನಿಮಗೆ ಧನ, ಮಾನ, ಸಹಾಯ, ಸ್ವಜನ, ಸುಖ ಮೊದಲಾದ ಅನುಕೂಲಗಳುಂಟಾಗಿರಬಹುದು. ಯೌವನ ದಿಂದ ಮದಿಸಿ ನಿಮ್ಮ ತಲೆಯಮೇಲೆ ನಾಲ್ಕು ಬೆರಳಿಟ್ಟು ದೂರದಲ್ಲಿಯೇ ಸ್ವರ್ಗವಿದೆಯೆಂದು ನೀವು ಎಣಿಸಬಹುದು. ನಿಮಗೆ ನಾನಾವಿಧವಾದ ಸು ಖದಸ್ವಪ್ನಗಳೂ ಬೀಳಬಹುದು. ಆದಾಗ್ಗೂ ನಿಮ್ಮ ಈ ಸ್ಥಿತಿಯು ಶಾಶ್ವತವಲ್ಲವೆಂದು ಚೆನ್ನಾಗಿ ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು. ಭೂಮಿ, ಚಂದ್ರ, ಸೂರ್ಯ, ನಕ್ಷತ್ರಗಳು, ಕಾಲ, ಪ್ರಕೃತಿ, ವಾಯು ಜಲ ಮುಂತಾದ ದೇವಾಂಶಭೂತಗಳಾದ ಪದಾರ್ಥಗಳಿಗೂ ಪರಿವರ್ತನೆ ಇರುವಲ್ಲಿ ಪರಮಾಣುಸಮಾನರಾದ ನಮ್ಮ ನಿಮ್ಮ ಪಾಡೇನು? ನಾವು ಏತಕ್ಕಾಗಿ ಅಹಂಕಾರ ಪಡಬೇಕು? ನಮ್ಮ ಧನ ಮೊದಲಾದುವು ಮಂಜಿ ನಂತೆ ಕಣ್ಣು ಮುಚ್ಚಿ ತೆರೆವಷ್ಟರಲ್ಲಿ ನಷ್ಟವಾಗಿ ಅನಂತವಾದ ಆಕಾಶ ಗರ್ಭದಲ್ಲಿ ಎಲ್ಲಿ ಸೇರಿಹೋಗುತ್ತವೊ ಹೇಳುವುದಕ್ಕಾಗುವುದಿಲ್ಲ.

ಕ್ರೋಧ, ಈರ್ಷ್ಯೆ, ದ್ವೇಷ, ಹಿಂಸೆ ಇವುಗಳಿಂದ ಆಗುವ ನಷ್ಟವನ್ನು ನಾಲ್ಕನೆಯ ಪರಿಚ್ಛೇದದಲ್ಲಿ ಹೇಳಿದೇನೆ. ಆದಾಗ್ಯೂ ಮರಳಿ ಸಂಕ್ಷೇಪವಾಗಿ ಹೇಳುತ್ತೇನೆ. ಸಂಸಾರವನ್ನು ನಡೆಸುವ ಭಾರವನ್ನು ವಹಿಸಿಕೊಂಡಿರುವ ಸ್ತ್ರೀಯರು, ಸರ್ಪಗಳನ್ನು ಕಂಡಂತೆ ಈ ದುರ್ಗುಣಗಳಿಗೆ ಹೆದರಿಕೊಳ್ಳಬೇಕು. ಸಂಸಾರದಲ್ಲಿ ನಾನಾವಿಧವಾದ ಸ್ವಭಾವದವರು ಸೇರುತ್ತಾರೆ. ಅವರೆಲ್ಲರ ಸಂಗಡಲೂ ವಿರೋಧವಿಲ್ಲದೆ ನಡೆದುಕೊಳ್ಳುವುದಕ್ಕೆ ಧೈರ್ಯ, ಕ್ಷಮೆ, ಸಹಿಷ್ಣುತೆ, ಪ್ರೇಮ ಮೊದಲಾದ ಸದ್ಗುಣಗಳು ನಿಮ್ಮಲ್ಲಿರಬೇಕು. ನಿಂದಕತೆ, ಡಂಭ, ಲೋಭ, ಕಪಟ ಇವು ಯಾರಲ್ಲಿ ಇರುತ್ತವೋ ಅವನು ಮನುಷ್ಯನಲ್ಲ. ಅವನಲ್ಲಿ ಮನುಷ್ಯಶಬ್ದವನ್ನು ಪ್ರಯೋಗಿಸಿದರೆ ಅಪಪ್ರಯೋಗ ಮಾಡಿದಂತೆ ಆಗುತ್ತದೆ. ಅಂಥ ಮನುಷ್ಯನನ್ನು ಆರೂ ನಂಬುವುದಿಲ್ಲ. ಸಜ್ಜನರ ನಿಂದೆಯನ್ನು ಮಾಡಿ ಮಾಡಿ ಅವನ ನಾಲಿಗೆ ಯಾವಾಗಲೂ ದೂಷಿತವಾಗಿರುತ್ತದೆ. ಅವನು ಮುಂದಕ್ಕೂ ಬರುವುದಿಲ್ಲ. ಉತ್ತಮರು ಆತನ ನೆರಳಿಗೆ ಕೂಡ ಹೆದರಿಕೊಳ್ಳುತ್ತಾರೆ. ಅಂಥವನು ಮನುಷ್ಯನಾಗಿ ಹುಟ್ಟಿದುದೇ ವ್ಯರ್ಥವು.

ಅವಸರ, ಅಮಿತಾಚಾರ ಇವುಗಳು ಕೂಡ ಹೀಗೆಯೇ ಅಹಿತಕಾರಿಗಳು. ಅವಸರ ಪಡುವವನಿಗೆ ಯಾವ ಕೆಲಸದಲ್ಲಿಯೂ ಸ್ಥೈರ್ಯವಿರುವುದಿಲ್ಲ. ಸ್ಥೈರ್ಯವಿಲ್ಲದವನ ಮಾತಿನಲ್ಲಿ ಜನರಿಗೆ ನಂಬಿಕೆ ಹುಟ್ಟುವುದಿಲ್ಲ. ಅಮಿತಾಚಾರಿಯಾದವನ ಧನವೂ, ಕಾಲವೂ, ವ್ಯರ್ಥವಾಗಿ ಹೋಗುತ್ತವೆ. ಅವನಿಂದ ಯಾವಕೆಲಸವೂ ಆಗುವುದಿಲ್ಲ.

ಪ್ರತಿನಿತ್ಯವೂ ಉಷಃಕಾಲದಲ್ಲಿ ಎಂದರೆ ಹೊತ್ತು ಹುಟ್ಟುವುದಕ್ಕೆ ನಾಲ್ಕು ಗಳಿಗೆಗೆ ಮುಂಚೆಯೇ ಏಳಬೇಕು. ಆಗ ಇನ್ನೂ ನಿದ್ರೆ ಬರುವಂತೆ ಇದ್ದರೂ ನಿದ್ರೆ ಮಾಡಬಾರದು. ಪ್ರಾತಃಕಾಲದಲ್ಲಿ ನಿದ್ರೆ ಮಾಡುವುದರಿಂದ ಶರೀರದಲ್ಲಿ ಆಲಸ್ಯ ತುಂಬಿಕೊಂಡು ಪ್ರತಿನಿತ್ಯವೂ ಹೀಗೆ ಆಗುತ್ತಾ ಕೊನೆಗೆ ರೋಗಗಳು ಹುಟ್ಟುತ್ತವೆ. ಆದುದರಿಂದ ಪ್ರತಿನಿತ್ಯವೂ ಹೊತ್ತಿಗೆ ಸರಿಯಾಗಿ ಮಲಗಿಕೊಂಡು ರಾತ್ರಿ ಇನ್ನೂ ಐದು ಗಳಿಗೆ ಇರುವಾಗಲೇ ಏಳುವ ಅಭ್ಯಾಸವನ್ನು ಮಾಡಬೇಕು. ಹೀಗೆ ಮಾಡಿದರೆ ಕೆಲಸವೆಲ್ಲವೂ ಹೊತ್ತಿಗೆ ಸರಿಯಾಗಿ ನಿರಾಯಾಸವಾಗಿ ನಡೆ

ದುಹೋಗುತ್ತದೆ; ಇಲ್ಲದೆಹೋದರೆ ಕೆಲಸವೆಲ್ಲಾ ಏಕಕಾಲದಲ್ಲಿ ಒದಗಿ ಆವುದನ್ನೂ ಸರಿಯಾಗಿ ಮಾಡುವುದಕ್ಕೆ ಅವಕಾಶವಾಗದೆ ಒಂದು ದಿವಸದಲ್ಲಿ ಒಂದು ಗಳಿಗೆಯಾದರೂ ವಿಶ್ರಮಿಸಿಕೊಳ್ಳುವುದಕ್ಕೆ ತೆರಪು ಇರುವುದಿಲ್ಲ. ಪ್ರತಿನಿತ್ಯವೂ ಆಯಾಕಾಲಕ್ಕೆ ಮಾಡತಕ್ಕ ಕೆಲಸವನ್ನು ಸರಿಯಾದ ಹೊತ್ತಿನಲ್ಲಿ ಮಾಡುವ ಅಭ್ಯಾಸವಿದ್ದರೇ ಆದರೆ ಮನುಷ್ಯನಿಗೆ ರೋಗಗಳು ಸಂಭವಿಸುವುದಿಲ್ಲ. ಶರೀರವು ಸ್ವಸ್ಥವಾಗಿರುವ ಕಾಲದಲ್ಲಿ ಆರು ಏಳು ಗಂಟೆಗಿಂತ ಹೆಚ್ಚು ನಿದ್ರೆಯನ್ನು ಮಾಡಬಾರದು. ರಾತ್ರಿ ೯ ಘಂಟೆಗೆ ಮಲಗುವ ಅಭ್ಯಾಸವಿಟ್ಟು ಇರುವವರಿಗೆ ೬ ಗಂಟೆ ಅವಿಚ್ಛಿನ್ನವಾಗಿ ನಿದ್ರೆ ಬಂದು ಎಚ್ಚರಿಕೆಯಾಗುತ್ತದೆ. ಕೂಡಲೆ ಎದ್ದರೆ ಶರೀರದ ಆಯಾಸವು ಕಳೆದುಹೋಗಿ, ಲವಲವಿಕೆಯುಂಟಾಗಿ ಮನಸ್ಸು ಶಾಂತವಾಗಿ ಕೆಲಸವನ್ನು ಮಾಡುವುದಕ್ಕೆ ತಿರುಗಿ ಉತ್ಸಾಹವುಂಟಾಗುತ್ತದೆ. ಎದ್ದಕೂಡಲೇ ತಣ್ಣೀರಿನಿಂದ ಮುಖವನ್ನೂ ಬಾಯನ್ನೂ ಮುಖ್ಯವಾಗಿ ಕಣ್ಣುಗಳನ್ನೂ ತೊಳೆದುಕೊಳ್ಳಬೇಕು. ಮನುಷ್ಯನು ಮಲಗಿ ನಿದ್ರೆಮಾಡುವಾಗ ಆಯಾ ಅವಯವಗಳಿಂದ ನಡೆಯಬೇಕಾದ ಕೆಲಸಗಳು ಸರಿಯಾಗಿ ನಡೆವುದಿಲ್ಲ. ಆದಕಾರಣ ಬಾಯಲ್ಲಿಯೂ ಕಣ್ಣಿನಲ್ಲಿಯೂ ಮಲದ ಅಂಶಗಳು ಕೂಡಿರುತ್ತವೆ. ಕಣ್ಣಿನಲ್ಲಿ ಕೊಳೆತ ನೀರೂ, ಇತರ ಮಲವೂ ಸಹ ಸೇರಿ, ಅದರ ಕಾಂತಿಯೂ ಕಡಮೆಯಾಗಿರುತ್ತದೆ. ಅದನ್ನು ತಣ್ಣೀರಿನಿಂದ ತೊಳೆಯದೆ ಇದ್ದರೆ ದಿನಕ್ರಮದಲ್ಲಿ ಅದರ ಕಾಂತಿಯು ಕಡಿಮೆಯಾಗುತ್ತಾ ಹೋಗುತ್ತದೆ. ಆದುದರಿಂದ ಎದ್ದಕೂಡಲೆ ಬಾಯನ್ನೂ ಕಣ್ಣುಗಳನ್ನೂ ತಣ್ಣೀರಿನಿಂದ ತೊಳೆದುಕೊಂಡು ಬಳಿಕ ಇತರ ಯಾವ ಕೆಲಸವನ್ನಾದರೂ ಮಾಡಬೇಕು. ಈ ಉಷಃಕಾಲದಲ್ಲಿ ಮನಸ್ಸು ನಿರುಪಾಧಿಕವಾಗಿಯೂ ಪ್ರಸನ್ನವಾಗಿಯೂ ಇರುತ್ತದೆ. ಜನರ ಗದ್ದಲವಾಗಲಿ ಅವಸರವಾಗಲಿ ಇರುವುದಿಲ್ಲ. ಆದುದರಿಂದ ಈ ಕಾಲದಲ್ಲಿ ಆವ ಕೆಲಸ ಮಾಡಬೇಕಾದರೂ ಅದರಲ್ಲಿ ಮನಸ್ಸೂ ಬುದ್ಧಿಯೂ ಬೇಗ ಲಗ್ನವಾಗುತ್ತವೆ. ಇಂಥ ಕಾಲದಲ್ಲಿ ಭಕ್ತಿಪೂರ್ವಕವಾಗಿ ಸರ್ವಸಂರಕ್ಷಕನಾಗಿಯೂ, ಜಗತ್ಪತಿಯಾಗಿಯೂ, ಇರುವ ಪರಮೇಶ್ವರನ ಭಜನೆಯನ್ನು ಮಾಡಬೇಕು. ಉಸಿರು ಬಿಡುವುದಕ್ಕೂ ಸಹ ಅವಕಾಶವಿಲ್ಲದ ತಾಯ ಗರ್ಭವೆಂಬ ಅಂಧಕೂಪದಲ್ಲಿ ಸಂರಕ್ಷಣೆ ಮಾಡಿ,

ಹುಟ್ಟಿದ ಕೂಡಲೆ ಇತರ ಪದಾರ್ಥಗಳನ್ನು ಸೇವಿಸುವುದಕ್ಕೆ ಯೋಗ್ಯತೆ ಇಲ್ಲವಾದಕಾರಣ ಪ್ರೇಮಭರಿತವಾದ ತಾಯಿ ಹೃದಯದಲ್ಲಿ ಅಮೃತಕ್ಕೆ ಸದೃಶವಾದ ಹಾಲನ್ನು ನಿರ್ಮಿಸಿ, ನಾವು ದೊಡ್ಡವರಾದಹಾಗೆಲ್ಲಾ ನಮ್ಮ ನಮ್ಮ ಉತ್ಕರ್ಷಕ್ಕೆ ತಕ್ಕ ಸಾಧನಗಳನ್ನು ಕಲ್ಪಿಸಿ, ನಮಗಾವುದಕ್ಕೂ ಕೊರತೆ ಇಲ್ಲದಂತೆ ತಾಯಿತಂದೆಗಳಂತೆ ನಮ್ಮನ್ನು ಕಾಪಾಡಿ, ನಾವು ತಿಳಿಯದ ಹಾಗೆ ನಮಗೆ ಬರುವ ಆಪತ್ತುಗಳನ್ನು ಪರಿಹರಿಸಿ ನಮಗೆ ಹಿತವನ್ನು ಆಲೋಚಿಸುವ ಕರುಣಾಸಮುದ್ರನಾದ ಭಗವಂತನ ಅಗಣಿತವಾದ ಉಪಕಾರವನ್ನು ಸ್ಮರಣೆಗೆ ತಂದುಕೊಂಡು ಆತನಲ್ಲಿ ಅನನ್ಯಶರಣರಾಗಿ ಆತನ ಚರಣಗಳಲ್ಲಿ ತಮ್ಮ ಸರ್ವಸ್ವವನ್ನೂ ಸಮರ್ಪಿಸಿ, ಕೃತಜ್ಞರಾಗಿರಬೇಕಾದುದು ಸರ್ವರಿಗೂ ಕರ್ತವ್ಯವಾಗಿದೆ. ಹೀಗೆ ಮಾಡದೆ ಇರುವ ಮನುಷ್ಯನಿಗೆ ಸಮಾನನಾದ ಕೃತಘ್ನನೂ ಪಾತಕಿಯೂ ಪ್ರಪಂಚದಲ್ಲಾರೂ ಇಲ್ಲ. ಆದುದರಿಂದ ಪ್ರಾತಃಕಾಲದಲ್ಲಿ ಏಕಾಂತಸ್ಥಳದಲ್ಲಿ ಕುಳಿತು ದೇವರ ಸ್ಮರಣೆಯನ್ನು ಮಾಡಬೇಕು. ಏಕಾಗ್ರಚಿತ್ತದಿಂದ ಆತನಲ್ಲಿ ನಿಮ್ಮ ಆತ್ಮಸಮರ್ಪಣವನ್ನು ಮಾಡಿ ನೀವು ಮಾಡಿದ ಅಪರಾಧಗಳಿಗಾಗಿ ಅತಿ ನಮ್ರತೆಯಿಂದ ಕ್ಷಮೆಯನ್ನು ಬೇಡಿಕೊಳ್ಳಬೇಕು. ಆತನ ಇಚ್ಛೆಗೆ ವಿರುದ್ಧವಾಗದಂತೆ ನಿಮ್ಮ ಬಂಧುಬಳಗಕ್ಕೂ, ನೆರೆಹೊರೆಯವರಿಗೂ, ನಿಮ್ಮ ಶತ್ರುಗಳಿಗೂ, ಶ್ರೇಯಸ್ಸನ್ನು ಉಂಟುಮಾಡಬೇಕೆಂದೂ, ಸಂಸಾರದ ಎಲ್ಲಾ ಕೆಲಸದಲ್ಲಿಯೂ ಒಳ್ಳೆಯಬುದ್ಧಿಯೂ ಧರ್ಮವಾಸನೆಯೂ ನಿಮ್ಮಲ್ಲಿ ಅಚಲವಾಗಿ ಇರುವಂತೆ ನಿಮಗೆ ಧೈರ್ಯವನ್ನು ಉಂಟುಮಾಡಬೇಕೆಂದೂ, ದೇವರನ್ನು ಪ್ರಾರ್ಥಿಸಬೇಕು. ದೇವರು ನಿಮಗೆ ಮಾಡುವ ಉಪಕಾರಕ್ಕೆ ಪ್ರತ್ಯುಪಕಾರವು ನಿಮ್ಮಿಂದ ಎಂದಿಗೂ ಆಗಲಾರದು. ಆತನಲ್ಲಿ ಅಚಲವಾದ ಭಕ್ತಿಯನ್ನು ಇಟ್ಟರೇ ಆದರೆ ಸ್ವಲ್ಪಮಟ್ಟಿಗಾದರೂ ಮಾಡಿದಂತೆ ಆಗುತ್ತದೆ. ಈ ಮೇರೆಗೆ ದೇವರ ಸ್ಮರಣೆ ಮಾಡಿದ ಬಳಿಕ ಮುಂದೆ ಮಾಡಬೇಕಾದ ಕೆಲಸವನ್ನು ವಿಚಾರಪೂರ್ವಕವಾಗಿ ಮಾಡಬೇಕು. ವಿಚಾರವಿಲ್ಲದೆ ಮಾಡಿದ ಯಾವ ಕೆಲಸವೂ ಚೆನ್ನಾಗಿ ಆಗುವುದಿಲ್ಲ. ಮಾಡಿದ ಕೆಲಸವು ಒಂದುವೇಳೆ ಸಿದ್ಧಿಸಿದರೂ ಅದು ಬಹುಕಾಲ ನಿಲ್ಲುವುದಿಲ್ಲ. ಅಸ್ತಿವಾರವನ್ನು ಹಾಕದೆ ಕಟ್ಟಿದ ಮನೆಯಂತೆ ಕಾಲಕ್ರಮದಿಂದ ಆ ಕೆ

ಲಸ ಕೆಟ್ಟುಹೋಗುತ್ತದೆ. ಇದರಿಂದ ದುಃಖವುಂಟಾಗಿ ವಿಚಾರವಿಲ್ಲದೆ ಮಾಡಿದ ಕೆಲಸಕ್ಕಾಗಿ ಪಶ್ಚಾತ್ತಾಪ ಉಂಟಾಗುತ್ತದೆ. ಆದುದರಿಂದ ಎಲ್ಲಾಕೆಲಸಗಳಲ್ಲಿಯೂ ಪೂರ್ವಾಪರವಿಚಾರಮಾಡಿ ಕೆಲಸವನ್ನು ಮಾಡ ಬೇಕು. ಈ ಪ್ರಕಾರ ವಿಚಾರಮಾಡಿ ತನ್ನಿಂದ ಈ ಕೆಲಸ ಸಾಧ್ಯ ವೆಂದು ನಿಶ್ಚಯಿಸಿದ ಬಳಿಕ ಕೆಲಸವನ್ನು ಆರಂಭಿಸಿ ಎಷ್ಟು ಅಭ್ಯಂತರ ಗಳು ಬಂದರೂ ಬಿಡದೆ ಕೆಲಸವನ್ನು ಮುಗಿಸುವುದಕ್ಕೆ ದೃಢಸಂಕಲ್ಪ ರಾಗಿರಬೇಕು. ಪ್ರತಿನಿತ್ಯವೂ ಇಂಥ ಕೆಲಸವನ್ನು ಮಾಡಬೇಕು, ಇಂಥ ಕೆಲಸವನ್ನು ಮಾಡಬಾರದು ಎಂಬುದನ್ನು ನಿಶ್ಚಯಿಸಿ ಅದರಂತೆ ನಡೆದುಕೊಳ್ಳುತ್ತಾ ಬಂದರೆ ಮಾಡಿದ ಸಂಕಲ್ಪವನ್ನು ನೆರವೇರಿಸುವ ಅಭ್ಯಾಸ ವುಂಟಾಗುತ್ತದೆ. ಹೀಗೆ ಮಾಡುವುದರಿಂದ ಬಹು ಶ್ರಮಸಾ ಧ್ಯವಾದ ಕೆಲಸವನ್ನು ಆರಂಭಿಸಿದರೂ ಅದನ್ನು ನೆರವೇರಿಸುವುದಕ್ಕೆ ಬಹಳ ಶ್ರಮ ಉಂಟಾಗುವುದಿಲ್ಲ. ಮನುಷ್ಯನು ತನ್ನ ಮನಸ್ಸನ್ನು ನಿಗ್ರಹಿಸುವುದರಿಂದ ತನ್ನ ಯೋಗ್ಯತೆಗೆ ಮೀರಿದ ಕೆಲಸದಲ್ಲಿ ಪ್ರವರ್ತಿ ಸುವುದಿಲ್ಲ. ಆದಕಾರಣ ಎಲ್ಲಾ ಕೆಲಸದಲ್ಲಿಯೂ ಆತ್ಮಸಂಯಮನವನ್ನು ಮಾಡಬೇಕು. ಈ ಸಂಯಮನವು ಸಂಸಾರಿಗಳೆಲ್ಲರಿಗೂ ಆವಶ್ಯಕವು. ಅನೇಕರು ಆವುದಾದರೂ ಒಂದು ಕೆಲಸವನ್ನು ಮಾಡುವುದಕ್ಕೆ ಉಪಕ್ರ ಮಿಸಿ ಸ್ವಲ್ಪ ವಿಘ್ನಬಂದ ಕೂಡಲೆ ಅವನ್ನು ಬಿಟ್ಟುಬಿಡುತ್ತಾರೆ. ಹೀಗೆ ಮಾಡುತ್ತಾ ಬಂದರೆ ಅವರಿಗೆ ಸಣ್ಣ ಸಣ್ಣ ಕೆಲಸಗಳಲ್ಲಿಯೂ ಪ್ರತಿಜ್ಞೆ ಯನ್ನು ಭಂಗಪಡಿಸಿಕೊಳ್ಳುವ ಅಭ್ಯಾಸ ಉಂಟಾಗುತ್ತದೆ. ಮುಂದೆ ಅವರ ಕೈಯಿಂದ ಯಾವ ಕೆಲಸವೂ ನಡೆವುದಿಲ್ಲ. ಆದುದರಿಂದ ಹಿಡಿದ ಕೆಲಸ ಸಣ್ಣದಾಗಲಿ ದೊಡ್ಡದಾಗಲಿ ಅದನ್ನು ಪಾಲುಮಾರಿಕೆಯಿಲ್ಲದೆ ಮುಗಿಸಬೇಕು. ಹಿಡಿದ ಕೆಲಸವನ್ನು ಮುಗಿಸುವುದಕ್ಕೆ ಒಂದು ಉಪಾ ಯವಿದೆ, ಅದು ಯಾವುದೆಂದರೆ:—ಒಂದು ಕೆಲಸಕ್ಕೆ ಒಂದು ಕಾಲ ವನ್ನು ಗೊತ್ತುಮಾಡಿ ಆಕಾಲ ಮುಗಿವವರೆಗೂ ತಪ್ಪದೆ ಆ ಕೆಲಸವನ್ನೇ ಮಾಡಬೇಕು. ಆ ಹೊತ್ತಿನಲ್ಲಿ ಮತ್ತೊಂದು ಕೆಲಸದ ಕಡೆಗೆ ಮನ ಸ್ಸನ್ನು ಬಿಡಬಾರದು. ಒಂದು ಕೆಲಸವನ್ನು ಮಾಡುವ ಹೊತ್ತಿನಲ್ಲಿ ಇನ್ನೊಂದನ್ನು ಮಾಡುವುದಕ್ಕೆ ಹೋದರೆ ಅದೂ ಆಗುವುದಿಲ್ಲ; ಇದೂ ಆಗುವದಿಲ್ಲ. ಎಲ್ಲಾ ಕೆಲಸದಲ್ಲಿಯೂ ಸ್ವಬುದ್ಧಿಯಿಂದಲೇ ನಡೆಯಬಾರದು..

ಆವುದಾದರೂ ಹೊಸಕೆಲಸವನ್ನು ಮಾಡಬೇಕಾದರೆ ಅಂಥ ಕೆಲಸಗಳನ್ನು ಬಹಳವಾಗಿಮಾಡಿ ಅನುಭವವಿರುವವರನ್ನು ಕೇಳಿ ಚೆನ್ನಾಗಿ ತಿಳಿದುಕೊಂಡು ಮಾಡಬೇಕು. ಅನೇಕರು ತಮಗೆ ತಿಳಿಯದೆ ಇರುವುದನ್ನು ಇತರರಿಂದ ತಿಳಿದುಕೊಳ್ಳುವುದು ಅವಮಾನವೆಂದು ಎಣಿಸುತ್ತಾರೆ. ಇದು ಯುಕ್ತವಲ್ಲ. ಬೆಳಗ್ಗೆ ಎದ್ದಮೇಲೆ ಮೊದಲು ಮನೆಯ ಎಲ್ಲಾ ಭಾಗದಲ್ಲಿಯೂ ಕಸವನ್ನು ಗುಡಿಸಬೇಕು. ಮನುಷ್ಯನ ಶರೀರದ ಕೊಳೆಯನ್ನು ಅನೇಕ ದಿವಸಗಳವರೆಗೂ ತೊಳಯದೆ ಇದ್ದರೆ ಅದರಿಂದ ರೋಗಗಳು ಹುಟ್ಟುವಂತೆ ಮನೆಯ ಮೂಲೆಮೂಲೆಗಳಲ್ಲಿಯೂ ಮಲಗುವಮನೆ, ಅಡಿಗೆಮನೆ, ಬಚ್ಚಲುಮನೆ ಇವುಗಳಲ್ಲಿಯೂ ಕಸವನ್ನು ಕೂಡಲೇ ತೆಗೆಯದೆ ಹೋದರೆ, ಅದರಿಂದ ಮನೆಯ ಗಾಳಿ ಕೆಟ್ಟುಹೋಗಿ, ಅದು ಉಚ್ಛ್ವಾಸದಿಂದ ಶರೀರದೊಳಕ್ಕೆ ವಿಷದಂತೆ ಹೊಕ್ಕು ಶರೀರಸ್ಥಿತಿಯನ್ನು ಕೆಡಿಸಿ ರೋಗವನ್ನು ಹುಟ್ಟಿಸುತ್ತದೆ. ಆದುದರಿಂದ ಸ್ತ್ರೀಯರೆಲ್ಲರೂ ತಮ್ಮ ತಮ್ಮ ಮನೆಯನ್ನು ನಿರಂತರವೂ ನಿರ್ಮಲವಾಗಿ ಇಟ್ಟುಕೊಂಡಿರಬೇಕು. ಮನೆಯಲ್ಲಿ ಗಂಡಸರು ಬಹಳ ಹೊತ್ತು ಇರುವುದಿಲ್ಲ; ಹೆಂಗಸರೇ ಇರುತ್ತಾರೆ. ಆದುದರಿಂದ ಇದರ ಲಾಭನಷ್ಟಗಳು ಇವರಿಗೇ ಹೆಚ್ಚಾಗಿ ಸಂಭವಿಸುತ್ತವೆ. ಮನೆಯಲ್ಲಿರುವ ಎಲ್ಲರ ದೇಹಾರೋಗ್ಯವನ್ನೂ ಸ್ತ್ರೀಯರು ಮುಖ್ಯವಾಗಿ ನೋಡಿಕೊಳ್ಳಬೇಕು. ರೋಗವನ್ನು ಹುಟ್ಟಿಸುವ ನಾನಾವಿಧವಾದ ಪದಾರ್ಥಗಳೊಳಗೆಲ್ಲಾ ದುರ್ಗಂಧಯುಕ್ತವಾದ ವಾಯುವು ಮುಖ್ಯವಾದುದು. ಆದುದರಿಂದ ಮನೆಯ ವಾಯುವು ವಿಷಪರಮಾಣುಗಳಿಂದ ಕೂಡಿ ದುಷ್ಟವಾಗದಂತೆ ನೋಡಿಕೊಳ್ಳಬೇಕು. ಇದಕ್ಕಾಗಿ ಮನೆಯಲ್ಲಿ ಎಲ್ಲಿಯೂ ಕಸದ ರಾಶಿ ಬೀಳದಂತೆ ನೋಡಿಕೊಳ್ಳಬೇಕು. ಮನೆಯಲ್ಲಿ ಅಲ್ಲಲ್ಲಿ ಕಸವನ್ನು ಕೂಡಿಹಾಕುವುದರಿಂದ ಗಾಳಿ ಕೆಡುವುದು ಮಾತ್ರವೇ ಅಲ್ಲದೆ ನೋಡುವುದಕ್ಕೂ ಚೆನ್ನಾಗಿ ಇರುವುದಿಲ್ಲ. ಚೇಳು ಜರಿ ಮುಂತಾದ ಹುಳುಗಳು ಸೇರಿಕೊಳ್ಳುತ್ತವೆ. ಮನೆಯ ಕಸ, ಕೊಟ್ಟಿಗೆಯ ಸಗಣಿ, ಮತ್ತು ಕೊಳೆತ ಹುಲ್ಲು ಮುಂತಾದುವನ್ನು ತೆಗೆದು ಮನೆಯ ಸಮೀಪದಲ್ಲಿಯೇ ಹಾಕಬಾರದು. ಬೀದಿಯನ್ನು ಗುಡಿಸುವವನು ಪ್ರತಿನಿತ್ಯವೂ ಯಾವ ಸ್ಥಳದಿಂದ ತೆಗೆದುಕೊಂಡು ಹೋಗುತ್ತಾನೋ ಆ ಸ್ಥಳದಲ್ಲಿಯಾಗಲಿ ಅಥವಾ ಯಾವ ಸ್ಥಳದಲ್ಲಿ ಹಾಕಿದರೆ

ಮನೆಯು ಕಡೆಗೆ ದುರ್ವಾಸನೆ ಬರುವುದಿಲ್ಲವೋ ಅಂಥ ಸ್ಥಳದಲ್ಲಿಯಾಗಲಿ ಹಾಕಬೇಕು. ಕೈಗೆ ಸಿಕ್ಕಿದ ಕೆಲಸವನ್ನು ಹೇಗಾದರೂ ಮಾಡಿದರೆ ಸರಿಯೆಂದು ತಿಳಿಯಬಾರದು. ಎಲ್ಲ ಕೆಲಸವನ್ನೂ ಮನಃಪೂರ್ವಕವಾಗಿ ಶ್ರದ್ಧೆಯಿಂದ ಮಾಡಬೇಕು. ನಮ್ಮ ದೇಶದಲ್ಲಿ ಮನೆಯನ್ನು ಸಾರಿಸುವ ವಾಡಿಕೆ ಇದೆ. ಇದು ಉತ್ತಮವಾದುದು. ಆದರೆ ಇದನ್ನು ಸರಿಯಾಗಿ ಮಾಡದೆ ಇರುವುದರಿಂದ ರೋಗಗಳಿಗೆ ಆಸ್ಪದವಾಗುತ್ತದೆ. ಸಗಣಿ ೧೫ ದಿವಸದದೇ ಆಗಲಿ, ಅಥವಾ ತಿಂಗಳದೇ ಆಗಲಿ, ಅದರಿಂದ ಸಾರಿಸಿದ ಮಾತ್ರದಿಂದ ಮನೆಯು ಪವಿತ್ರವಾಗುತ್ತದೆಯೆಂದು ತಿಳಿದು, ದುರ್ವಾಸನೆಯಿಂದ ಕೂಡಿ ಹುಳ ಬಿದ್ದಿರುವ ಸಗಣಿಯನ್ನು ಸಹ ಸಾರಿಸುವುದಕ್ಕೆ ಉಪಯೋಗಿಸುತ್ತಾರೆ. ಇದರಿಂದ ಮನೆಯ ವಾಯುವು ಕೆಟ್ಟುಹೋಗುತ್ತದೆ. ಮನೆಯನ್ನು ಸಾರಿಸಲಿಕ್ಕೆ ಹೊಸ ಸಗಣಿಯನ್ನು ತಂದು ಅದರ ಜೊತೆಯಲ್ಲಿ ಸ್ವಲ್ಪ ಬಳ್ಳೆಯ ಸ್ಥಳದ ಮಣ್ಣನ್ನು ಬೆರಸಿ ಸಾರಿಸಬೇಕು. ಮಣ್ಣಿನ ಯೋಗದಿಂದ ಸಗಣಿಯು ದುರ್ಗಂಧವೂ ಇತರ ದೋಷವೂ ಹೋಗುತ್ತವೆ. ಹೀಗೆ ಪ್ರತಿನಿತ್ಯವಾಗಲಿ ಅಥವಾ ನಾಲ್ಕುದಿವಸಕ್ಕೆ ಒಂದಾವೃತ್ತಿಯಾಗಲಿ ನೆಲವನ್ನು ಸಾರಿಸಬೇಕು. ಗೋಡೆಗೆ ಸುಣ್ಣವನ್ನು ಹಚ್ಚದೆ ಇದ್ದರೆ ಅದರಲ್ಲಿ ತಿಗಣೆ ಮುಂತಾದವುಗಳು ಸೇರುತ್ತವೆ. ಗೋಡೆಗೆ ಸುಣ್ಣವನ್ನು ಹಚ್ಚಬೇಕಾದರೆ ಆರು ತಿಂಗಳಿಗೆ ಒಂದುಸಾರಿ ಹಚ್ಚಿದರೆ ಸಾಕು. ಸುಣ್ಣದಲ್ಲಿ ಒಂದು ವಿಧವಾದ ತೀಕ್ಷ್ಣವಾದ ರಸವಿರುತ್ತದೆ. ಅದರಿಂದ ದುರ್ಗಂಧವು ನಷ್ಟವಾಗಿ ವಾಯುವು ನಿರ್ಮಲವಾಗುತ್ತದೆ. ಕಶ್ಮಲದಿಂದ ಹುಟ್ಟುವ ಸೊಳ್ಳೆ ಮುಂತಾದುವುಗಳು ನಾಶವಾಗುತ್ತವೆ. ಗೋಡೆ, ಕಂಭ, ಚೌಕಟ್ಟು, ಬಾಗಿಲು ಮೊದಲಾದುವುಗಳಿಗೆ ಜಿಡ್ಡಿನ ಕೈಯನ್ನು ಒರಸುವುದು, ಇದ್ದಲಿಸಿಂದ ಬರೆವುದು, ಉಗಿವುದು, ಸಿಂಬಳವನ್ನು ತೆಗೆದು ಒರಸುವುದು ಇವೇ ಮೊದಲಾದ ಅಸಹ್ಯವಾದ ಕೆಲಸವನ್ನು ಮಾಡಬಾರದು. ಇದು ನೋಡುವುದಕ್ಕೂ ಚೆನ್ನಾಗಿ ಕಾಣುವುದಿಲ್ಲ; ರೋಗಗಳು ಸಹ ಹುಟ್ಟುತ್ತವೆ. ಮನೆಯ ಅಂಗಳದಲ್ಲಿ ಅಥವಾ ಹಿತ್ತಲಲ್ಲಿ ಮಲ್ಲಿಗೆ, ಜಾಜಿ, ಗುಲಾಬಿ, ಸುಗಂಧರಾಜ, ತುಳಸಿ, ಪಾರಿಜಾತ ಮುಂತಾದ ಗಿಡಗಳನ್ನು ಹಾಕಬೇಕು. ನೋಡಲಿಕ್ಕೆ ಅಂದವಾಗಿರುವಂತೆ ಇವುಗಳನ್ನು ಬಾಸಿಯಲ್ಲಿ

ಹಾಕಿ ಇಡಬೇಕು. ಈ ಗಿಡಗಳ ಬುಡದಲ್ಲಿಯೂ ಕೊಳಗಳು ಸೇರದಂತೆ ನೋಡಿಕೊಳ್ಳಬೇಕು. ಈ ಗಿಡಗಳ ಸಂಬಂಧದಿಂದಲೂ ದುರ್ಗಂಧವು ನಾಶವಾಗಿ ಗಾಳಿ ತಂಪಾಗಿಯೂ ಸುಗಂಧಯುಕ್ತವಾಗಿಯೂ ಇರುತ್ತದೆ. ಮನೆಯನ್ನು ನಿರ್ಮಲವಾಗಿ ಇಟ್ಟುಕೊಳ್ಳುವುದೇ ಮುಂತಾದ ಕೆಲಸವನ್ನು ಸ್ತ್ರೀಯರು ಸ್ವತಃ ಮಾಡಬೇಕು.

ಸಂಬಳದವರನ್ನು ಇಟ್ಟುಕೊಳ್ಳುವುದಕ್ಕೆ ಶಕ್ತಿಯುಳ್ಳವರು ಅವರ ಕಡೆಯಿಂದ ಮಾಡಿಸಬಹುದು. ಆದರೆ ಅನೇಕ ಸಂಗತಿಗಳಲ್ಲಿ ಸಂಬಳದವರು ಮನೆಯ ಯಜಮಾನಿತಿಯನ್ನು ಲಕ್ಷಿಸದೆ ಅವರ ಮೇಲೆಯೇ ತಮ್ಮ ಅಧಿಕಾರವನ್ನು ನಡೆಸುವ ವಾಡಿಕೆಯಿದೆ. ಇದು ಈ ಸಂಬಳದವರ ದೋಷವಲ್ಲ. ಇವರ ಕೈಯಲ್ಲಿ ಕೆಲಸವನ್ನು ತೆಗೆದುಕೊಳ್ಳುವವರ ದೋಷವೇ. ಇಂಥ ಸಣ್ಣ ಕೆಲಸಗಳಿಗೆ ಪ್ರಾಯೇಣ ಕುಲೀನರಾಗಿಯೂ ಮರ್ಯಾದಸ್ಥರಾಗಿಯೂ ಇರುವವರು ಸೇರುವುದಿಲ್ಲ. ಅವರಿಗೆ ದುಸ್ಸಹವಾಸದಿಂದ ಬುದ್ಧಿಯೂ ನೀಚವಾಗಿರುತ್ತದೆ. ಅವರನ್ನು ಒಳ್ಳೆಯ ಮಾರ್ಗಕ್ಕೆ ತಂದು ನಮ್ಮ ಗೌರವವನ್ನು ಕಾಪಾಡಿಕೊಳ್ಳುವುದು ನಮ್ಮ ಕೈಯಲ್ಲೇ ಇರುತ್ತದೆ. ಅವರ ಸಂಗಡ ನಾವು ವ್ಯವಹಾರವನ್ನು ಇಟ್ಟಂತೆಯೇ ಅವರು ಸಹ ನಮ್ಮ ಸಂಗಡ ಇಡುತ್ತಾರೆ. ಸೇವಕರ ಸಂಗಡ ಕೆಲಸಕ್ಕೆ ಎಷ್ಟು ಅವಶ್ಯಕವೋ ಅಷ್ಟೇ ಮಾತನಾಡಬೇಕು; ಹೆಚ್ಚು ಮಾತನಾಡಬಾರದು. ಅವರ ಸಂಗಡ ಹಾಸ್ಯಮಾಡುವುದನ್ನೂ, ಅಕಾರಣವಾಗಿ ನಗುವುದನ್ನೂ, ಲಜ್ಜಾಸ್ಪದಗಳಾದ ಮಾತುಗಳನ್ನಾಡುವುದನ್ನೂ ನಿಲ್ಲಿಸಬೇಕು. ಪರಂತು, ಸರ್ವಕಾಲದಲ್ಲಿಯೂ ಮುಖವನ್ನು ಗಂಟು ಹಾಕಿಕೊಂಡು ಕೋಪದಿಂದ ಗದ್ದರಿಸುತ್ತಾ ಮಾತನಾಡಬಾರದು. ಅವರಿಗೆ ಏನಾದರೂ ಹೇಳಬೇಕಾದರೆ ಸೌಮ್ಯತೆಯಿಂದ ಪ್ರಸನ್ನಮುಖರಾಗಿ ಹೇಳಬೇಕು. ಅವರಿಂದ ಏನಾದರೂ ತಪ್ಪಿತದ ಕೆಲಸ ನಡೆದರೆ ಒಳ್ಳೆಯ ಮಾತಿನಿಂದ ಅವರ ತಪ್ಪನ್ನು ಅವರಿಗೆ ಒಪ್ಪಿಸಿ ಅದಕ್ಕಾಗಿ ಸ್ವಲ್ಪ ತಿರಸ್ಕಾರಮಾಡಬೇಕು. ಇದರಿಂದ ಸೇವಕರು ಮಾರ್ಗಕ್ಕೆ ಬರುವಂತೆ ಇನ್ನಾವರೀತಿಯಿಂದಲೂ ಬರುವುದಿಲ್ಲ. ಕೆಲವು ಯಜಮಾನರು ಯಜಮಾನಿತಿಯರು ಸಹ ಅತಿಕಠೋರವಾದ ಮಾತುಗಳನ್ನಾಡಿ ಸೇವಕರನ್ನು ಹೊಡೆವುದು ಸಹ ಉಂಟು. ಇದು ಕೇವಲ ನಿಂದ್ಯವಾದ

ಕೆಲಸವು. ಇದರಿಂದ ಸೇವಕರು ಮೊಂಡರಾಗಿ ಯಾವುದಕ್ಕೂ ಹೆದರದಂತೆ ಆಗುತ್ತಾರೆ. ಮತ್ತೊಬ್ಬರನ್ನು ತಮ್ಮ ಸ್ವಾಧೀನ ಮಾಡಿಕೊಳ್ಳುವುದಕ್ಕೆ ಮೃದುವಾದ ವ್ಯಾಪಾರ ಹೊರತು ಮತ್ತೊಂದು ಉಪಾಯವಿಲ್ಲ. ಇದರಿಂದ ಸಿಂಹ, ಹುಲಿ, ಮುಂತಾದ ಕ್ರೂರ ಮೃಗಗಳು ಕೂಡ ಸಾಧುವಾಗುತ್ತವೆ. ಮನುಷ್ಯನು ಮಾರ್ಗಕ್ಕೆ ಬರುವುದೇನಾಶ್ಚರ್ಯ? ಸೇವಕರ ಮನಸ್ಸನ್ನು ನೋಯಿಸುವಂಥ ಕಠಿನವಾದ ಮಾತುಗಳನ್ನು ಎಂದಿಗೂ ಆಡಬಾರದು. ಅವರನ್ನು ಪ್ರೀತಿಯಿಂದ ಕಂಡರೆ ಅವರೂ ಹಾಗೆಯೇ ನಡೆದುಕೊಳ್ಳುತ್ತಾರೆ. ಗರ್ವದಿಂದ ಎಂದಿಗೂ ಅವರನ್ನು ಅನಾದರ ಮಾಡಬಾರದು. ಸೇವಕರನ್ನು ಇಟ್ಟುಕೊಳ್ಳುವಂಥ ಉತ್ತಮ ಸ್ಥಿತಿಯು ನಮಗೆ ಈಶ್ವರಕೃಪೆಯಿಂದ ಬಂದಿದೆ. ಈಶ್ವರಾನುಗ್ರಹವಿಲ್ಲದೆ ಇರುವುದರಿಂದಲೇ ಈ ಸೇವಕರಿಗೆ ಈ ದುರ್ದಶೆ ಪ್ರಾಪ್ತವಾಗಿದೆ- ಎಂಬುದನ್ನು ಚೆನ್ನಾಗಿ ಮನಸ್ಸಿನಲ್ಲಿ ಇಡಬೇಕು. ಈ ಸ್ಥಿತಿಯು ಉಭಯತ್ರರಿಗೂ ಶಾಶ್ವತವಲ್ಲ. ಐಶ್ವರ್ಯವಾಗಲಿ ದರಿದ್ರತೆಯಾಗಲಿ ಯಾವ ಕಾಲಕ್ಕೆ ಬರುವುದೋ ಅದನ್ನು ತಿಳಿವುದಕ್ಕಾರಿಂದಲೂ ಆಗದು. ನಾವು ಭಾಗ್ಯಹೀನರಾಗಿ, ನಮ್ಮಲ್ಲಿ ಸೇವಕರಾಗಿ ಇದ್ದವರು ಕಾಲಕ್ರಮೇಣ ಭಾಗ್ಯವಂತರಾಗಿ, ಅವರಲ್ಲಿ ನಾವು ಉಪಸರ್ಪಣೆ ಮಾಡುವ ಕಾಲವು ಬಂದುವೇಳೆ ಬರಬಹುದು. ಆದುದರಿಂದ ಸೇವಕರಲ್ಲಿ ಅಹಂಕಾರವನ್ನು ತೋರಿಸುವುದು, ಕ್ರೂರವಾಗಿ ನಡೆವುದು, ಅಯೋಗ್ಯವಾದ ಕೆಲಸದಲ್ಲಿ ಅವರನ್ನು ನಿಯೋಗಿಸುವುದು, ಇವೇ ಮುಂತಾದ ಅಸಭ್ಯವಾದ ಕೆಲಸವನ್ನು ಮಾಡಬಾರದು. ಅವರಲ್ಲಿ ದಯಾಶೀಲರಾಗಿಯೂ ಮಮತೆಯುಳ್ಳವರಾಗಿಯೂ ಇರಬೇಕು. ಅವರಿಗೆ ದುಃಖ ಪ್ರಾಪ್ತವಾದ ಕಾಲದಲ್ಲಿ ಸಮಾಧಾನಪಡಿಸಬೇಕು. ಅವರಿಗೆ ವ್ಯಾಧಿಯುಂಟಾದಲ್ಲಿ ತಾಯಿತಂದೆಗಳಂತೆ ಆದರಿಸಿ ಆರೈಕೆ ಮಾಡಬೇಕು. ಅವರು ಅಲ್ಪಜನರೆಂದು ಅವರನ್ನು ಅನಾದರ ಮಾಡಬಾರದು. ಅವರು ಅಸ್ವಸ್ಥರಾಗಿ ಮಲಗಿದ್ದರೆ ಆ ಸ್ಥಳಕ್ಕೆ ಹೋಗುವುದಕ್ಕೆ ಅಸಹ್ಯಪಟ್ಟುಕೊಳ್ಳಬಾರದು. ಸೇವಕರಿಗೂ ಯಜಮಾನರಿಗೂ ತಾಯಿ ಮಕ್ಕಳಿಗೆ ಇರುವಂತೆ ಸಂಬಂಧವಿರುವುದರಿಂದ ಪರಸ್ಪರ ವ್ಯವಹಾರವೂ ಹಾಗೆಯೇ ಇರಬೇಕು. ಕೆಲವು ಸೇವಕರು ಯಜಮಾನನ ಗುಣವನ್ನು ತಿಳಿದು ಅದಕ್ಕೆ ತಕ್ಕಹಾಗೆ ನಡೆದು

ಕೊಳ್ಳುತ್ತಾ ಯಾರಮೇಲಾದರೂ ದೂರು ಹೇಳಿ, ಅದರಿಂದ ತಮ್ಮ ಧಣಿಯ ಮನಸ್ಸನ್ನು ಸಂತೋಷಪಡಿಸಿ, ತಮ್ಮ ಕಡೆಗೆ ತಿರುಗಿಸಿಕೊಂಡು, ಮತ್ತೊಬ್ಬರಲ್ಲಿ ವೈರವನ್ನು ಉಂಟುಮಾಡುವುದಕ್ಕೆ ಯತ್ನಿಸುತ್ತಾರೆ. ಇಂಥವರ ಮಾತುಗಳಲ್ಲಿ ನಂಬಿಕೆಯನ್ನು ಇಟ್ಟು ತಾವು ಪ್ರತ್ಯಕ್ಷವಾಗಿ ನೋಡದೆ ಯಾರಮೇಲೂ ದೋಷವನ್ನು ಆರೋಪಿಸಬಾರದು. ನಮ್ಮನ್ನು ಸಂತೋಷಪಡಿಸುವುದಕ್ಕಾಗಿ ಇತರರ ಮೇಲೆ ಚಾಡಿಯನ್ನು ಹೇಳುವವರು ಸ್ವಪ್ರಯೋಜನಕ್ಕಾಗಿಯೇ ಹೇಳುತ್ತಾರೆಂದು ತಿಳಿಯಬೇಕು. ಸಮಯಬಿದ್ದ ಕಾಲದಲ್ಲಿ ಇವರು ಇತರರ ಸಂಗಡ ನಮ್ಮನ್ನು ನಿಂದೆ ಮಾಡುವುದಕ್ಕೂ ಹಿಂತೆಗೆಯಲಾರರು. ಮುಖಸ್ತುತಿಯನ್ನು ಮಾಡುವ ಸೇವಕರು ಎದುರಿಗೆ ಸ್ತೋತ್ರಮಾಡಿ, ದಯವನ್ನು ಸಂಪಾದಿಸಿ, ಗೃಹಕೃತ್ಯದ ಅಂತರಂಗವನ್ನು ತಿಳಿದುಕೊಂಡು, ಅದನ್ನು ಪ್ರಕಟಪಡಿಸುತ್ತಾರೆ. ಇದರಿಂದ ಮುಂದೆ ಅಸಂಗತಗಳು ಉಂಟಾದರೆ ಆಗ ತಾವು ನಿರ್ಲಿಪ್ತರಾಗಿ ತಮ್ಮ ಮುಖಸ್ತುತಿಗೆ ಮೋಸಹೋದ ಹೆಂಗಸರನ್ನು ಬಯಲಿಗೆ ಎಳೆದು ಅವರನ್ನೇ ನಿಂದಿಸುವುದಕ್ಕೆ ಆರಂಭಿಸುತ್ತಾರೆ. ಆದಕಾರಣ ಇಂಥವರ ದೆಸೆಯಿಂದ ತಮ್ಮ ಮಾನವನ್ನು ಬಹು ಜಾಗರೂಕತೆಯಿಂದ ಸಂರಕ್ಷಣೆ ಮಾಡಿಕೊಳ್ಳಬೇಕು. ತನ್ನ ಪತಿ, ಅತ್ತೆ, ಮಾವಂದಿರು, ಭಾವಮೈದುನರು ಮುಂತಾದವರ ವಿಷಯಕವಾದ ಗುಟ್ಟಿನಮಾತುಗಳನ್ನು ಈ ಸೇವಕರ ಸಂಗಡ ಸರ್ವಥಾ ಹೇಳಬಾರದು; ಅವರಮೇಲಿನ ಚಾಡಿಯನ್ನೂ ಕೇಳಬಾರದು. ಸೇವಕರಿಗೆ ಸಂತೋಷದಿಂದ ಏನಾದರೂ ಕೊಡಬೇಕಾದಲ್ಲಿ ಯಜಮಾನ, ಅತ್ತೆ ಮುಂತಾದವರ ಸಮ್ಮತಿಯನ್ನು ಕೇಳಿ ಯುಕ್ತಾಯುಕ್ತವಿಚಾರವನ್ನು ಮಾಡಿ ಕೊಡಬೇಕು. ಆವ ಸೇವಕನಾದರೂ ಬಹುಮಾನವನ್ನು ಪಡೆವಂಥ ಕೆಲಸವನ್ನು ಮಾಡಿದರೆ ಹಬ್ಬ ಹುಣ್ಣಿವೆ ಮುಂತಾದ ದಿವಸಗಳಲ್ಲಿ ಸರ್ವರೂ ಸಂತೋಷದಿಂದಿರುವ ಕಾಲದಲ್ಲಿ ನಿಮ್ಮ ಯೋಗ್ಯತೆಗೂ ಅವನ ಯೋಗ್ಯತೆಗೂ ತಕ್ಕಹಾಗೆ ಏನಾದರೂ ಬಹುಮಾನವನ್ನು ಅವಶ್ಯಕವಾಗಿ ಕೊಡಬೇಕು. ಇಂಥ ಸಮಯಗಳಲ್ಲಿ ತನಗೆ ಏನೂ ದೊರೆಯದೆ ಇದ್ದರೆ ಅವನ ಮನಸ್ಸು ಖಿನ್ನವಾಗುತ್ತದೆ. ಸಮಯದಲ್ಲಿ ಕಷ್ಟಪಟ್ಟು ಕೆಲಸಮಾಡಿದುದಕ್ಕಾಗಿ ತಕ್ಕ ಬಹುಮಾನವನ್ನು ಕೊಡದೆ

ಸರ್ವದಾ ನಿಷ್ಕರುಣಿಯಾಗಿರುವ ಯಜಮಾನನಲ್ಲಿ ಸೇವಕನಿಗೆ ಭಕ್ತಿಯೂ ಕೃತಜ್ಞತೆಯೂ ಇರುವುದಿಲ್ಲ. ಆಪತ್ತಿನ ಕಾಲದಲ್ಲಿ ಇಂಥ ಧಣಿಗಳಿಗೆ ಸೇವಕರು ಶತ್ರುಗಳು ಕೂಡ ಆಗುತ್ತಾರೆ.

ಸೇವಕರ ಜೊತೆಯಲ್ಲಿ ಸರಿಯಾಗಿ ಕುಳಿತುಕೊಳ್ಳಬಾರದು; ಅವರ ಹಾಸಿಗೆಯ ಮೇಲೆ ಕುಳಿತುಕೊಳ್ಳಬಾರದು. ತಮ್ಮ ಬಟ್ಟೆಗಳನ್ನು ಅವರಿಗೆ ಉಡುವುದಕ್ಕೆ ಕೊಡಬಾರದು. ಆವ ರೀತಿಯಿಂದಲೂ ತಮ್ಮ ಗೌರವಕ್ಕೆ ಹಾನಿ ಬರದಂತೆ ಜಾಗರೂಕರಾಗಿರಬೇಕು. ಅವರು ಮಾಡಿದ ಸಣ್ಣ ತಪ್ಪಿಗೆ ದೊಡ್ಡ ಶಿಕ್ಷೆಯನ್ನು ಮಾಡಬಾರದು. ಅವರಿಂದ ಅಪರಾಧವಿರದೆ ಇರುವಾಗ ಸಣ್ಣ ಮಾತುಗಳನ್ನು ಆಡಬಾರದು; ಇತರ ವಿಧವಾಗಿ ಶಿಕ್ಷೆಯನ್ನೂ ಮಾಡಬಾರದು. ತಾವು ಮಾಡಿದ ತಪ್ಪಿಗೂ, ಅಥವಾ ಇತರರು ಮಾಡಿದ ತಪ್ಪಿಗೂ, ಸೇವಕರನ್ನು ಗುರಿಮಾಡಬಾರದು. ಹೀಗೆ ಮಾಡಿದರೆ ಸೇವಕರಲ್ಲಿ ಸ್ವಾಮಿಭಕ್ತಿಯೂ ಪ್ರೀತಿಯೂ ಶುದ್ಧಾಂಗವಾಗಿ ಇಲ್ಲವಾಗುತ್ತದೆ. ಸೇವಕರಲ್ಲಿ ಹೆಚ್ಚಾದ ವಿಶ್ವಾಸವನ್ನೂ ಇಡಬಾರದು. ಧಣಿಯ ಪ್ರೀತಿ ತಮ್ಮ ಮೇಲೆ ಸಂಪೂರ್ಣವಾಗಿ ಇದೆಯೆಂದು ತಿಳಿದ ಕೂಡಲೇ ಅವರು ಸುಮ್ಮನೆ ಕುಳಿತು ಕಾಲಕ್ಷೇಪಮಾಡುತ್ತಾರೆ. ಅಂಗಡಿಯಿಂದ ದಿನಸಿ ಮುಂತಾದುದನ್ನು ಸೇವಕರಿಂದ ತರಿಸುವಾಗ ಅವರ ಧಾರಣೆ ಮುಂತಾದುದನ್ನು ಚೆನ್ನಾಗಿ ವಿಚಾರಿಸಿ ಇರಬೇಕು. ಸೇವಕರಲ್ಲಿ ಅನೇಕರು ಮನೆಯ ಯಜಮಾನಿತಿಗೆ ಧಾರಣೆ ತಿಳಿಯದೆಂದು ಒಂದಕ್ಕೆರಡು ಧಾರಣೆಯನ್ನು ಹೇಳಿ ದುಡ್ಡನ್ನು ಕಳುತ್ತಾರೆ. ತಂದ ದಿನಸಿಯಲ್ಲಿ ಅಲ್ಪಸ್ವಲ್ಪ ಕಳುವುದೂ ಉಂಟು. ಈ ವಿಷಯದಲ್ಲಿ ಯಜಮಾನಿತಿಯು ಸಂಪೂರ್ಣವಾಗಿ ಲಕ್ಷ್ಯವನ್ನು ಇಟ್ಟಿರಬೇಕು. ಸೇವಕರ ಯೋಗ್ಯತೆಯನ್ನು ಆಗಾಗ್ಗೆ ಪರೀಕ್ಷಿಸುತ್ತಾ ಇರಬೇಕು. ಆವುದಾದರೂ ತಿನ್ನತಕ್ಕ ಪದಾರ್ಥವನ್ನಾಗಲಿ, ಅಥವಾ ಆವುದಾದರೂ ಸಣ್ಣ ಒಡವೆಯನ್ನಾಗಲಿ, ಅಥವಾ ಕೆಲವು ದುಡ್ಡುಗಳನ್ನಾಗಲಿ, ಒಂದು ಕಡೆಯಲ್ಲಿಟ್ಟು ಅವನ್ನು ನೋಡದೆ ಇರುವಂತೆಯೂ ಅವನ್ನು ಮರತಂತೆಯೂ ಇರಬೇಕು. ಸೇವಕರು ಅಲ್ಪ ಬುದ್ಧಿಯವರಾದರೆ ಕಳುತ್ತಾರೆ; ಇಲ್ಲವಾದರೆ ಅವು ಇದ್ದಂತೆ ಇರುತ್ತವೆ. ಇಂಥ ಉಪಾಯಗಳಿಂದ ಸೇವಕರ ಯೋಗ್ಯತೆಯನ್ನು ತಿಳಿದುಕೊಂಡು ಜಾಗ

ರೂಕರಾಗಿರಬೇಕು. ಸಣ್ಣಸಣ್ಣ ತಪ್ಪಿಗಾಗಿ ಅವರನ್ನು ಕೆಲಸದಿಂದ ತೆಗೆದುಹಾಕಬಾರದು. ಕೆಟ್ಟ ನಡತೆಯುಳ್ಳ ಅನೇಕ ಸೇವಕರು ಧಣಿಯ ಒಳ್ಳೆಯ ನಡತೆಯಿಂದಲೂ ನೀತಿಪರವಾದ ಉಪದೇಶದಿಂದಲೂ ಮಾರ್ಗಕ್ಕೆ ಬರುವುದುಂಟು ಸೇವಕರ ಯೋಗ್ಯತೆಯನ್ನು ಸ್ವಲ್ಪ ದಿವಸದಲ್ಲಿಯೇ ನಿಶ್ಚಯಿಸುವುದಕ್ಕಾಗುವುದಿಲ್ಲ. ಕೆಲವರು ಮೊದಲು ನಂಬಿಕೆಯುಳ್ಳವರ ಹಾಗೆ ಇದ್ದು ಸಮಯ ಸಿಕ್ಕಿದ ಕೂಡಲೇ ಕೃತಘ್ನರಾಗುತ್ತಾರೆ. ಆದುದರಿಂದ ಇವರ ವಿಷಯದಲ್ಲಿ ಸರ್ವದಾ ಜಾಗರೂಕರಾಗಿರಬೇಕು. ಮುಖ್ಯವಾಗಿ ಸೇವ್ಯಸೇವಕರಲ್ಲಿ ತಾಯಿ ಮಕ್ಕಳ ನ್ಯಾಯವಿರುವುದರಿಂದ ಮಮತೆಯಿಂದ ನಡೆದುಕೊಳ್ಳಬೇಕು.

ಮನೆಯ ಪದಾರ್ಥಗಳನ್ನೆಲ್ಲ ಹರಡಬಾರದು. ಒಂದಕ್ಕೊಂದನ್ನು ಬೆರಸಬಾರದು. ಬೇಕಾದ ಕೂಡಲೇ ಸಿಕ್ಕುವಂತೆ ಅವುಗಳನ್ನು ತಕ್ಕ ಸ್ಥಳದಲ್ಲಿ ಅಚ್ಚುಕಟ್ಟಾಗಿ ಇಟ್ಟಿರಬೇಕು. ಅವುಗಳನ್ನು ಇಡುವ ಸ್ಥಳದಲ್ಲಿ ಕಸವನ್ನು ಸೇರಗೊಡಬಾರದು ; ಆಗಿಂದಾಗ್ಗೆ ಗುಡಿಸುತ್ತಾ ಇರಬೇಕು. ಅಂಗಡಿಯಿಂದ ತಂದ ಧಾನ್ಯಾದಿಗಳನ್ನು ಕುಟ್ಟಿ, ಕೇರಿ, ಕಸ ಮುಂತಾದುವನ್ನು ತೆಗೆದು ಇಲಿ, ಬೆಕ್ಕು, ಮಕ್ಕಳು ಮುಂತಾದವರು ಹಾಳು ಮಾಡದಂತೆ ಜೋಪಾನವಾಗಿ ಮುಚ್ಚಿ ಅಥವಾ ಕಟ್ಟಿ ಇಡಬೇಕು. ಆವ ಪದಾರ್ಥವನ್ನೂ ತೆರೆದು ಇಟ್ಟಿರಬಾರದು ; ತೆರೆದಿಟ್ಟರೆ ನೊಣ, ಇರುವೆ, ಹುಳು ಮುಂತಾದುವು ಸೇರುತ್ತವೆ. ಇಂಥ ಪದಾರ್ಥಗಳು ಮನುಷ್ಯನ ಹೊಟ್ಟೆಗೆ ಸೇರಿದರೆ ರೋಗಗಳು ಪ್ರಾಪ್ತವಾಗುತ್ತವೆ. ಆದುದರಿಂದ ಅಕ್ಕಿ, ಬೇಳೆ ಮುಂತಾದುವುಗಳನ್ನು ಕುಟ್ಟಿ, ಕೇರಿ, ಒನೆದು, ಇಟ್ಟಿರಬೇಕು. ಬೆಲ್ಲ, ಸಕ್ಕರೆ ಮುಂತಾದುದರಲ್ಲಿ ಕಸವನ್ನು ಆರಿಸಿ ಇಡಬೇಕು. ಈ ಪ್ರಕಾರ ಮನೆಯನ್ನೂ ಪದಾರ್ಥಗಳನ್ನೂ ನಿರ್ಮಲವಾಗಿ ಇಟ್ಟುಕೊಂಡಿರಬೇಕು. ಮನೆಯನ್ನು ನೋಡಿದರೆ ಮನೆಯ ಯಜಮಾನಿತಿಯ ಯೋಗ್ಯತೆ ಎಲ್ಲರಿಗೂ ಗೊತ್ತಾಗುತ್ತದೆ. ಯಾವ ಮನೆಯಲ್ಲಿ ಎಲ್ಲಾ ಪದಾರ್ಥಗಳೂ ತಕ್ಕ ಸ್ಥಳದಲ್ಲಿ ಅಚ್ಚುಕಟ್ಟಾಗಿ ಇಡಲ್ಪಟ್ಟಿರುತ್ತವೋ ಆ ಮನೆಯ ಯಜಮಾನಿತಿಯು ಚತುರಳೆಂಬುದಕ್ಕೆ ಬೇರೆ ದೃಷ್ಟಾಂತ ಬೇಕಾಗುವುದಿಲ್ಲ. ಯಾವ ಮನೆಯಲ್ಲಿ ಕಂಡಕಂಡ ಕಡೆಯಲ್ಲಿ ಪದಾರ್ಥಗಳು ಹರಡಿಕೊಂಡು

ಕಸದಿಂದ ಕೂಡಿ ಬಿದ್ದಿರುತ್ತವೋ ಆ ಮನೆಯನ್ನು ನೋಡಿದರೆ ಅವರ ಯಜಮಾನಿತಿಗೆ ಗೃಹಣೀರೋಗ ಸಂಭವಿಸಿರುವುದೆಂದು ತಿಳಿಯಬೇಕು. ಮನೆಯಲ್ಲಿ ಸಿಕ್ಕಿದ ಕಡೆಯಲ್ಲಿ ನೀರುಚೆಲ್ಲಿ ತೇವವನ್ನು ಮಾಡಬಾರದು. ಬಚ್ಚಲಲ್ಲಿ ಕಸ ಕಡ್ಡಿ ತುಂಬಿ ದುರ್ವಾಸನೆ ಬಾರದಂತೆ ನೋಡಿಕೊಳ್ಳಬೇಕು. ಆಗಿಂದಾಗ್ಗೆ ಬಚ್ಚಲಿಗೆ ನೀರು ಹಾಕಿ ತೊಳದು ನಿರ್ಮಲವಾಗಿ ಇಟ್ಟಿರಬೇಕು. ಕುಳಿತುಕೊಳ್ಳುವ ಸ್ಥಳದಲ್ಲಿಯೂ ಮಲಗುವ ಸ್ಥಳದಲ್ಲಿಯೂ ನಾನಾವಿಧವಾದ ಪದಾರ್ಥಗಳನ್ನು ತುಂಬಿ ಇರಿಸಬಾರದು. ಈ ಸ್ಥಳವನ್ನು ಸಾಧ್ಯವಾದ ಮಟ್ಟಿಗೂ ತೆರಪು ಮಾಡಿಕೊಂಡಿರಬೇಕು. ಹಾಗೆ ತೆರಪಾಗಿಲ್ಲದೆ ಇಕ್ಕಟ್ಟಾಗಿದ್ದಲ್ಲಿ ಅಲ್ಲಿ ಕುಳಿತುಕೊಳ್ಳುವವರ ಮತ್ತು ಮಲಗುವವರ ಉಚ್ಛ್ವಾಸಗಳಿಂದ ಅಲ್ಲಿನ ಗಾಳಿಯು ಕೆಟ್ಟುಹೋಗುತ್ತದೆ. ಅಂಥ ಕೆಟ್ಟ ಗಾಳಿಯು ಪುನಃ ಅವರ ಶರೀರಕ್ಕೆ ಪ್ರವೇಶಿಸುವುದರಿಂದ ರೋಗ ಉಂಟಾಗುತ್ತದೆ. ಆದಕಾರಣ ಕುಳಿತುಕೊಳ್ಳುವ ಮನೆಯೂ ಮಲಗುವ ಮನೆಯೂ ತೆರಪಾಗಿಯೂ ವಿಸ್ತಾರವಾಗಿಯೂ ಇರಬೇಕು. ನಾನಾವಿಧವಾದ ಪದಾರ್ಥಗಳು ಇಕ್ಕಟ್ಟಾಗಿ ತುಂಬಿರುವ ಸ್ಥಳದಲ್ಲಿ ಬಹಳ ಹೊತ್ತು ನಿಲ್ಲಬಾರದು.

ಅಡಿಗೆ ಮಾಡುವ ಪಾತ್ರೆಗಳನ್ನೂ ನೀರು ಬಳಸುವ ಪಾತ್ರೆಗಳನ್ನೂ ಹಾಲು, ಮೊಸರು, ಮಜ್ಜಿಗೆ ಮೊದಲಾದುವನ್ನು ತುಂಬಿಡುವ ಪಾತ್ರೆಗಳನ್ನೂ ಚೆನ್ನಾಗಿ ತೊಳೆಯಬೇಕು. ತೊಳೆಯದೆ ಹೋದರೆ ಅವುಗಳಲ್ಲಿ ಸೇರುವ ಕಿಲುಬು, ಕೊಳೆ ಮುಂತಾದುವು ಆಹಾರದ ಸಂಗಡ ಹೊಟ್ಟೆಗೆ ಸೇರಿ ರೋಗಗಳನ್ನು ಉಂಟುಮಾಡುತ್ತವೆ. ಹಾಸಿಕೆಯನ್ನೂ, ಹೊದಿಕೆಯನ್ನೂ, ಉಡುವ ವಸ್ತ್ರಗಳನ್ನೂ ನಿರ್ಮಲವಾಗಿ ಇಟ್ಟುಕೊಂಡಿರಬೇಕು. ಬೆವರಿನಿಂದ ಮಾಸಿದ ಬಟ್ಟೆಗಳನ್ನು ತೊಟ್ಟುಕೊಳ್ಳಕೂಡದು. ಅವುಗಳನ್ನು ತೊಟ್ಟುಕೊಂಡರೆ ಅವುಗಳ ಕೊಳೆಯು ಬೆವರಿನ ದ್ವಾರಗಳಿಂದ ಶರೀರಕ್ಕೆ ಪ್ರವೇಶಿಸಿ ರಕ್ತವನ್ನು ಕೆಡಿಸುತ್ತದೆ. ಆದುದರಿಂದ ಬಳಸುವ ವಸ್ತ್ರಗಳನ್ನು ಶುಭ್ರವಾಗಿಟ್ಟುಕೊಂಡಿರಬೇಕು. ಉಟ್ಟುಕೊಳ್ಳುವ ವಸ್ತ್ರಗಳನ್ನು ಪ್ರತಿದಿನವೂ ಒಗೆಯಬೇಕು. ಹಾಸಿಕೊಳ್ಳುವ ಮತ್ತು ಹೊದೆಯುಕೊಳ್ಳುವ ಬಟ್ಟೆಗಳನ್ನು ನಾಲ್ಕು ದಿವಸಕ್ಕೆ ಒಂದಾವೃತ್ತಿಯಾದರೂ ಒಗೆಯಬೇಕು.

ಈ ಪ್ರಕಾರ ಮನೆಯ ಎಲ್ಲಾ ಪದಾರ್ಥಗಳನ್ನು ಶುದ್ಧಿಮಾಡಿ ಸೂರ್ಯೋದಯಕ್ಕೆ ಮುಂಚೆಯೇ ಸ್ನಾನಮಾಡಬೇಕು. ನಿತ್ಯವೂ ಪ್ರಾತಃಸ್ನಾನ ಮಾಡುವವರಿಗೆ ಶರೀರದಲ್ಲಿ ಬಲವೂ ಸ್ಫೂರ್ತಿಯೂ ಇರುತ್ತವೆ. ಶರೀರಕ್ಕೆ ಬಗ್ಗಿದ್ದರೆ ತಣ್ಣೀರಿನಲ್ಲಿ ಸ್ನಾನಮಾಡುವುದು ಒಳ್ಳೆಯದು. ಇದರಿಂದ ಶರೀರಕ್ಕೆ ಬಲ ಬರುತ್ತದೆ. ಬಹಳ ಶೀತಕಾಲವಾಗಿದ್ದರೆ ನೆಗಡಿ, ಜ್ವರ ಮುಂತಾದುವು ಹುಟ್ಟುತ್ತವೆ. ಆದುದರಿಂದ ಇಂಥ ಕಾಲದಲ್ಲಿ ನೀರನ್ನು ಸ್ವಲ್ಪ ಕಾಯಿಸಿಕೊಂಡು ಸ್ನಾನಮಾಡಬೇಕು. ಸ್ನಾನಮಾಡುವ ನೀರು ಮೈಯಮೇಲೆ ಬಿದ್ದರೆ ಸುಡುವಂತೆ ಇರಬಾರದು. ಅನುಕೂಲವಿದ್ದರೆ ನಿತ್ಯವೂ ಶಿರಸ್ಸ್ನಾನ ಮಾಡಬೇಕು. ಇಲ್ಲವಾದರೆ ನಿತ್ಯವೂ ಕಂಠಸ್ನಾನ ಮಾಡಿ ಎರಡುಮೂರು ದಿನಕ್ಕೆ ಒಂದಾವರ್ತಿ ಶಿರಸ್ಸ್ನಾನವನ್ನು ಮಾಡಬೇಕು. ಮೈಯಮೇಲೆ ನೀರು ಹಾಕಿಕೊಳ್ಳುವುದಕ್ಕೆ ಮುಂಚೆ ತಲೆಯ ಮೇಲೆ ಸ್ವಲ್ಪ ನೀರನ್ನು ಹಾಕಿ ತಟ್ಟಿಕೊಂಡು ಕೂಡಲೇ ಮೈಯಮೇಲೆ ನೀರನ್ನು ಹಾಕಿಕೊಳ್ಳಬೇಕು. ಹಾಗೆ ಮಾಡದೆ ಮೈಯಮೇಲೆ ನೀರು ಹಾಕಿಕೊಂಡರೆ ಶರೀರದ ಕಾವು ತಲೆಗೆ ಏರಿ ತಲೆ ನೋವು ಮುಂತಾದುವು ಬರುತ್ತವೆ. ನೀರನ್ನು ಸುಮ್ಮನೆ ಮೈಯಮೇಲೆ ಸುರಿದುಕೊಂಡು ಕಾಕಸ್ನಾನ ಮಾಡಬಾರದು. ಮೊದಲು ಮೈಯನ್ನು ತೋಯಿಸಿ ಒದ್ದೆ ಬಟ್ಟೆಯಿಂದ ಮೈಯನ್ನು ಚೆನ್ನಾಗಿ ತಿಕ್ಕಿಕೊಂಡು ಬಳಿಕ ನೀರು ಹಾಕಿಕೊಳ್ಳಬೇಕು. ಸ್ನಾನಮಾಡಿದ ಕೂಡಲೇ ಒಣಗಿದ ಬಟ್ಟೆಗಳನ್ನು ಉಟ್ಟುಕೊಳ್ಳಬೇಕು. ಒದ್ದೆಯನ್ನು ಉಡಬಾರದು. ನೀರಿನಲ್ಲಿ ಬಹಳ ಹೊತ್ತು ನೆನೆಯಬಾರದು. ಇದರಿಂದ ಮೈನೋಯುವುದು; ಕೀಲುಗಳು ಹಿಡಿದುಕೊಳ್ಳುವುವು; ಜ್ವರ ಬರುವುದೂ ಉಂಟು. ಮೈಯೆಲ್ಲಾ ಮುಚ್ಚುವಂತೆ ಬಟ್ಟೆಯನ್ನು ಉಡಬೇಕು. ಕೆಲವರು ಮಡಿಯುಡುವುದೆಂಬ ನೆಪದಿಂದ ಬಟ್ಟೆಯನ್ನು ಅಡ್ಡಸೆರಗು ಹಾಕಿಕೊಳ್ಳುವರು. ಕೆಲವರು ಅಂಗಗಳು ಕಾಣುವಂತೆ ಸೆರಗನ್ನು ಮೇಲಕ್ಕೆ ಸಿಕ್ಕಿಸಿಕೊಳ್ಳುವರು, ಕೆಲವರು ನಿರಿಗೆಯನ್ನು ಮೇಲಕ್ಕೆ ಕಟ್ಟಿಕೊಳ್ಳುವರು, ಕೆಲವರು ಏರುಕಚ್ಚೆಯನ್ನು ಹಾಕಿಕೊಳ್ಳುವರು, ಲಜ್ಜೆಯುಳ್ಳ ಕುಲೀನ ಸ್ತ್ರೀಯರು ಹೀಗೆ ಅಂಗಗಳು ಕಾಣುವಂತೆ ಸೀರೆಯನ್ನು ಉಟ್ಟುಕೊಳ್ಳಬಾರದು. ಲಜ್ಜೆಗಾಗಿಯಲ್ಲವೇ ವಸ್ತ್ರವನ್ನುಡುವುದು? ೧೬-೧೭

ಮೊಳದ ಉದ್ದವೂ ೨|| ಅಥವಾ ೩ ಮೊಳ ಅಗಲವೂ ಇರುವ ಸೀರೆಗಳಿರುವಾಗ ಯಾಕೆ ಮೈತುಂಬಾ ಬಟ್ಟೆಯನ್ನು ಉಟ್ಟುಕೊಳ್ಳಬಾರದು? ಅನೇಕರು ಮಡಿಯನ್ನುಟ್ಟುಕೊಳ್ಳುವದಾಗಿ ೨-೩ ಮೊಳದ ತುಂಡನ್ನು ಅಥವಾ ಸಹಸ್ರ ಛಿದ್ರವಾದ ಬಟ್ಟೆಗಳನ್ನು ಸುತ್ತಿಕೊಂಡು ರಾಜಬೀದಿಯಲ್ಲಿ ಎಲ್ಲರ ಎದುರಿಗೂ ಹೋಗುತ್ತಾರೆ. ಅಮ್ಮಂದಿರು ಇನ್ನೂ ಹೆಚ್ಚು ಮಾಡುತ್ತಾರೆ. ಇದು ಕುಲೀನರಾದ ಸ್ತ್ರೀಯರಿಗೆ ಅನುಚಿತವಾದ ಕೆಲಸವು. ಈ ವಿಷಯವು ಪುಸ್ತಕದಲ್ಲಿ ಬರೆಯತಕ್ಕದಲ್ಲವಾದರೂ ನಮ್ಮವರ ಆಚರಣೆಯನ್ನು ನೋಡಿ ನಾಚಿಕೆಯಿಂದ ತಲೆಯನ್ನು ತಗ್ಗಿಸಬೇಕಾಗಿರುವಕಾರಣ ಸಹಿಸದೆ ಬರೆದು ಇದ್ದೇನೆ. ಇದನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ.

ಬೀದಿಯಲ್ಲಿ ನೀರು ಮುಂತಾದುದನ್ನು ತರುವಾಗಲೂ ಮೈಯಮೇಲಿನ ವಸ್ತ್ರಗಳ ವಿಷಯದಲ್ಲಿ ಜಾಗರೂಕರಾಗಿರಬೇಕು. ನೀರು ತರುವಾಗಲೂ ಇತರ ಕೆಲಸಗಳನ್ನು ಮಾಡುವಾಗಲೂ ವಸ್ತ್ರಗಳನ್ನು ಸ್ವಲ್ಪ ಮುದುರಿಕೊಳ್ಳಬೇಕಾಗುತ್ತದೆ; ಆದರೂ ಶರೀರದ ಯಾವ ಭಾಗವೂ ಕಾಣಿಸದಹಾಗೆ ನೋಡಿಕೊಂಡು ಮುದುರಿಕೊಳ್ಳಬೇಕು. ಮೈಯಮೇಲೆ ಎರಡನೆಯ ವಸ್ತ್ರವಿಲ್ಲದೆ ಬೀದಿಯಲ್ಲಿ ನಮ್ಮ ಸ್ತ್ರೀಜನರು ಧಾರಾಳವಾಗಿ ಹೋಗುತ್ತಾರೆ. ಹೀಗೆಯೇ ಪರಪುರುಷರ ಎದುರಿಗೂ ನಾಲ್ಕು ಜನ ಸೇರಿದ ಸ್ಥಳದಲ್ಲಿಯೂ ತಲೆಯ ಮೇಲೆ ಹೊದೆಯದೆ, ಅಡ್ಡಸೆರಗು ಮುಂತಾದುದನ್ನು ಹಾಕಿಕೊಂಡು ಹೋಗುವ ವಾಡಿಕೆ ಇರುವುದರಿಂದ ಇದರಲ್ಲಿ ಯಾರಿಗೂ ವ್ಯಂಗ್ಯ ಕಾಣುವುದಿಲ್ಲ. ವಿಚಾರಮಾಡಿದಲ್ಲಿ ಮಾತ್ರ ಇದು ಅನಾಚಾರವೆಂದು ತಿಳಿಯಬಹುದು. ಕುಲಸ್ತ್ರೀಯರಾದವರು ಇದನ್ನು ಬಿಟ್ಟುಬಿಡಬೇಕು. ಹೊರಕ್ಕೆ ಹೋಗಬೇಕಾದ ಕಾಲದಲ್ಲಿಯೂ, ಅಥವಾ ಪರಕೀಯರನ್ನು ನೋಡಬೇಕಾದ ಕಾಲದಲ್ಲಿಯೂ, ಶಿರಸ್ಸಿನಿಂದ ಕಾಲಿನವರೆಗೂ, ಮುಚ್ಚುವಂತೆ ಉತ್ತರೀಯವನ್ನು ಹಾಕಿಕೊಳ್ಳಬೇಕು. ಉತ್ತರ ಹಿಂದೂಸ್ಥಾನದಲ್ಲಿ ಈ ಪ್ರಕಾರ ಉತ್ತರೀಯವನ್ನು ಹೊದೆವ ಸಂಪ್ರದಾಯವಿದೆ. ಈ ಒಳ್ಳೆಯ ಸಂಪ್ರದಾಯವನ್ನು ನಮ್ಮವರೂ ಅನುಸರಿಸಬೇಕಾದುದು ನ್ಯಾಯವು. ಅತಿ ನೀಚರಾದವರಲ್ಲಿಯೂ ಒಳ್ಳೆಯ ಗುಣಗಳಿದ್ದರೆ ಅವನ್ನು ಸ್ವೀಕರಿ

ಸಬೇಕೆಂದು ದೊಡ್ಡವರು ಹೇಳುತ್ತಾರೆ. ನಮ್ಮಲ್ಲಿ ಲಗ್ನಕಾಲದಲ್ಲಿ ಮದ ವಣಗಿತಿಗೂ ಬೀಗಿತಿಗೂ ಉತ್ತರೀಯವೆಂಬ ನೆಪದಿಂದ ೬-೭ ಮೊಳದ ತುಂಡನ್ನು ಮೈಯಮೇಲೆ ಹಾಕಿರುತ್ತಾರೆ. ಅವರು ಇದರ ಕಾರಣ ವನ್ನು ಅರಿಯದೆ ಇದನ್ನು ಒಂದು ಆಭರಣದಂತೆ ಎಣಿಸುತ್ತಾರೆ.

ಸ್ನಾನವಾದಮೇಲೆ ಸ್ತ್ರೀಯರು ತಾವು ಮಾಡಬೇಕಾದ ನಿತ್ಯ ಕಟ್ಟಳೆಯ ಕೆಲಸಗಳನ್ನೆಲ್ಲ ಸಾವಕಾಶಮಾಡದೆ ಅಚ್ಚುಕಟ್ಟಾಗಿ ಮಾಡ ಬೇಕು. ಯಾವುದಾದರೂ ಒಂದು ಕೆಲಸವನ್ನು ಹಿಡಿದು ಅದರಲ್ಲಿಯೇ ಕಾಲವನ್ನು ಕಳೆಯಬಾರದು. ಇದರಿಂದ ಮಾಡುವ ಕೆಲಸವೂ ತಪ್ಪು ವುದಿಲ್ಲ, ಕ್ಷಣದ ವಿರಾಮವೂ ಸಿಕ್ಕುವುದಿಲ್ಲ. ಮಾಡಬೇಕಾದ ಕೆಲಸ ಗಳನ್ನೆಲ್ಲ ಬೇಗ ತೀರಿಸುವುದರಿಂದ ವಿಶ್ರಾಂತಿಗೆ ಹೊತ್ತು ಸಿಕ್ಕುತ್ತದೆ. ತಮ್ಮ ಕೈಯಿಂದ ಆಗಬಹುದಾದ ಯಾವ ಕೆಲಸ ಕಣ್ಣಿಗೆ ಬಿದ್ದಾಗ್ಯೂ ಅದನ್ನು ಕೂಡಲೆ ಮಾಡಬೇಕು; ಅತ್ತೆ, ಅತ್ತಿಗೆ, ನಾದಿನಿ ಮುಂತಾದ ವರು ಮಾಡಲಿ ಎಂದು ಸುಮ್ಮನಿರಬಾರದು; ಸಣ್ಣದಾಗಲಿ ದೊಡ್ಡದಾಗಲಿ ತಮ್ಮಿಂದ ಆಗತಕ್ಕ ಕೆಲಸಕ್ಕೆ ಇತರರಿಗೆ ತೊಂದರೆಯನ್ನು ಕೊಡಬಾ ರದು. ಎಂಥ ಕೆಲಸವಾದಾಗ್ಯೂ ಮನುಷ್ಯನ ಪ್ರಯತ್ನಕ್ಕೆ ಸಾಧ್ಯವಾ ಗಿಯೇ ಇರುತ್ತದೆ. ಆದುದರಿಂದ ಯಾವ ಕೆಲಸವೇ ಆಗಲಿ ಇದು ನನ್ನಿಂದ ಆಗಲಾರದೆಂದು ತಿಳಿದು ಸುಮ್ಮನೆ ಕುಳಿತುಕೊಳ್ಳಬಾರದು. ತಮ್ಮ ಕೈಯಲ್ಲಾದ ಮಟ್ಟಿಗೂ ಯತ್ನವನ್ನು ಮಾಡಿ ನೋಡಿ ಬಿಡ ಬೇಕು. ಅಡಿಗೆ ಮಾಡುವುದು ಹೆಂಗಸರಿಗೆ ಮುಖ್ಯವಾದ ಕೆಲಸವು. ಅಡಿಗೆ ಮಾಡಿದ ಪದಾರ್ಥವು ರುಚಿಯಾಗಿಯೂ, ಅಚ್ಚುಕಟ್ಟಾಗಿಯೂ ಇದ್ದರೆ ಅದನ್ನು ಭೋಜನ ಮಾಡುವುದರಿಂದ ಮನುಷ್ಯನಿಗೆ ಬಲ ಬರು ವುದಲ್ಲದೆ, ರೋಗವೂ ಸೇರದಿರುತ್ತದೆ. ಆದುದರಿಂದ ಅಡಿಗೆ ಮಾಡುವ ರೀತಿಯನ್ನು ಚೆನ್ನಾಗಿ ಕಲಿಯಬೇಕು. ಯಾವಯಾವ ಕಾಲದಲ್ಲಿ ಯಾವ ಯಾವ ಪದಾರ್ಥವನ್ನು ಭೋಜನಮಾಡಿದರೆ ಆರೋಗ್ಯವೋ ಅದನ್ನು ತಿಳಿದುಕೊಂಡಿರಬೇಕು. ಮನೆಯಲ್ಲಿರುವ ಎಲ್ಲಾ ಜನರ ದೇಹಸ್ಥಿತಿ ಯೂ ಚೆನ್ನಾಗಿ ಇರುವಂತೆ ಅನ್ನಪಾನಾದಿಗಳ ವ್ಯವಸ್ಥೆ ಮಾಡಬೇಕಾ ದುದು ಸ್ತ್ರೀಯರಿಗೆ ಮುಖ್ಯವಾದ ಕೆಲಸವಾಗಿದೆ. ತಾನು ಅಡಿಗೆ ಮಾಡಿ ಅಥವಾ ಮಾಡತಕ್ಕವರಿಂದ ಮಾಡಿಸಿ ಸರ್ವರಿಗೂ ಪಙ್ತಿಭೇದ

ವನ್ನು ಮಾಡದೆ ಬಡಿಸಬೇಕು. ಅನೇಕರು ಪಙ್ಕ್ತಿಭೇದವನ್ನು ಮಾಡುತ್ತಾರೆ; ಇದು ಬಹಳ ಕೆಟ್ಟ ಸಂಪ್ರದಾಯವಾಗಿ ಇದೆ. ಮನೆಯಲ್ಲಿ ಸರ್ವರೂ ಆವ ಬಗೆಯ ಊಟವನ್ನು ಮಾಡುತ್ತಾರೋ ಅದಕ್ಕಿಂತಲೂ ಹೆಚ್ಚಾದ ಅಥವಾ ಉತ್ತಮವಾದ ಅಡಿಗೆಯನ್ನು ಮಾಡಿ ತಾವು ಊಟ ಮಾಡಬಾರದು. ಮನೆಗೆ ಗಂಡಸರಾವಪದಾರ್ಥವನ್ನು ತಂದಾಗ್ಯೂ ಅದನ್ನು ಮನೆಯಲ್ಲಿ ಇರುವವರೆಲ್ಲರಿಗೂ ಯಥಾಯೋಗ್ಯವಾಗಿ ಹಂಚಿ ಕೊಟ್ಟು ಉಳಿದುದರಲ್ಲಿ ತಾವು ಸಂತೋಷಪಟ್ಟುಕೊಳ್ಳಬೇಕು. ಒಂದು ವೇಳೆ ಉಳಿಯದೆ ಇದ್ದಾಗ್ಯೂ ಖಿನ್ನರಾಗಬಾರದು. ಉಳಿದ ಸರ್ವ ವಿಷಯಗಳಲ್ಲಿಯೂ ಇದರಂತೆಯೇ ಸ್ವಾರ್ಥಪರರಾಗದೆ ಇರಬೇಕು. ಸ್ವಾರ್ಥಪರರಾಗದೇ ಸಂತುಷ್ಟರಾಗಿರುವವರು ದರಿದ್ರಾವಸ್ಥೆಯಲ್ಲಿಯೂ ಸುಖವಾಗಿರುತ್ತಾರೆ. ಸ್ವಾರ್ಥಪರರಾಗಿಯೂ ಲೋಭಿಗಳಾಗಿಯೂ ಇರುವವರಿಗೆ ಭೂಮಂಡಲದ ಆಧಿಪತ್ಯವಿದ್ದಾಗ್ಯೂ ಸುಖದ ಲೇಶವೂ ದೊರೆವುದಿಲ್ಲ. ಮನೆಯಲ್ಲಿರುವ ಸರ್ವರನ್ನೂ ವಶಮಾಡಿಕೊಳ್ಳುವುದಕ್ಕೆ ಅಸ್ವಾರ್ಥವಾದ ಪ್ರೀತಿಗೆ ಸಮನಾದ ವಶೀಕರಣಮಂತ್ರ ಮತ್ತೊಂದಿಲ್ಲ.

ಮನೆಯಲ್ಲಿ ಇರುವ ಎಲ್ಲರ ಸಂಗಡಲೂ ಮರ್ಯಾದೆಯಿಂದಲೂ ಪ್ರೀತಿಯಿಂದಲೂ ಭಕ್ತಿಯಿಂದಲೂ ನಡೆದುಕೊಳ್ಳಬೇಕು. ಆರ ಸಂಗಡಲೂ ಹೆಚ್ಚು ಮಾತಿಗೆ ಹೋಗಬಾರದು. ಜಗಳವಾಡಬಾರದು. ಆರಾದರೂ ಸಣ್ಣಮಾತನಾಡಿದರೆ ತಿರುಗಿ ಅವರಂತೆ ತಾವೂ ಆಡಬಾರದು. ಯಾರಲ್ಲೇ ಆಗಲಿ ಏನಾದರೂ ಅಸದ್ವ್ಯವಹಾರವಿದ್ದರೂ ಧೈರ್ಯದಿಂದ ತಾಳಿಕೊಳ್ಳಬೇಕು. ಯಾರಸಂಗಡಲೂ ಸಿಟ್ಟಿನಿಂದ ಮಾತನಾಡಬಾರದು. ಯಾರು ಏನು ಕೇಳಿದಾಗ್ಯೂ ಪ್ರಸನ್ನಮುಖರಾಗಿ ಸರಳವಾದ ಅಂತಃಕರಣದಿಂದ ಸಮಯೋಚಿತವಾಗಿ ಉತ್ತರವನ್ನು ಕೊಡಬೇಕು. ಯಾವ ಮಾತನ್ನು ಆಡಬೇಕಾದರೂ ಆಲೋಚನೆ ಮಾಡಿ ಆಡಬೇಕು. ಯಾರ ಮೇಲೂ ಚಾಡಿ ಹೇಳಬಾರದು. ಯಾರು ಏನು ಹೇಳಿದಾಗ್ಯೂ ಕೇಳಿಕೊಂಡು ಸುಮ್ಮನೆ ಇರಬೇಕು. ಯಾರ ಗುಟ್ಟಿನ ಮಾತನ್ನೂ ಇತರರಿಗೆ ಹೇಳಬಾರದು; ವಿಶ್ವಾಸಘಾತುಕತನವನ್ನಾಗಲಿ ಕೇಡನ್ನಾಗಲಿ ಮಾಡಬಾರದು; ಅಂಥ ಆಲೋಚನೆಯನ್ನೂ ಸಹ ಮನಸ್ಸಿಗೆ ತರಬಾರದು. ನಿಮಗಾರಾದರೂ ಅನ್ಯಾಯಮಾಡಿದರೆ ಕ್ಷಮಿಸಬೇಕು. ಅತ್ತೆ,

ಮಾವಂದಿರು, ಭಾವಂದಿರು, ಅತ್ತಿಗೆಯರು ಮುಂತಾದ ಹಿರಿಯರಲ್ಲಿ ದೇವರಂತೆ ಭಕ್ತಿಯಿಡಬೇಕು. ಧರ್ಮಾನುಸಾರವಾಗಿ ಅವರು ಏನು ಹೇಳಿದಾಗ್ಯೂ ಅವರಂತೆ ನಡೆದುಕೊಳ್ಳಬೇಕು. ಸಾಧ್ಯವಾದ ಮಟ್ಟಿಗೂ ಪ್ರೀತಿಯಿಂದ ಅವರ ಸೇವೆಯನ್ನು ಮಾಡಬೇಕು. ಅವರಿಗೆ ಎಂದಿಗೂ ಅವಮಾನವನ್ನು ಮಾಡಬಾರದು. ಅವರ ಎದುರಿಗೆ ಘಟಿಯಾಗಿ ನಾಚಿಕೆಯಿಲ್ಲದೆ ನಗುತ್ತಾ, ಅಮರ್ಯಾದೆಯಾದ ಮಾತುಗಳನ್ನು ಆಡಬಾರದು. ಕಾಲುಚಾಚಿಕೊಂಡು ಕುಳಿತುಕೊಳ್ಳಬಾರದು. ಅವರಿಗೆ ಅನುಚಿತವಾದ ಉತ್ತರಗಳನ್ನು ಕೊಡಬಾರದು. ಅವರ ಸಂಗಡ ಜಗಳವಾಡಬಾರದು. ಅವರ ಅಭಿಪ್ರಾಯಕ್ಕೆ ವಿರೋಧವಾಗಿ ತಮ್ಮ ಮನಸ್ಸಿಗೆ ಬಂದಂತೆ ನಡೆಯಬಾರದು. ಅವರು ಮನೆಯಲ್ಲಿರುವಾಗ ತಾವು ಸ್ವಾತಂತ್ರ್ಯವನ್ನು ವಹಿಸಿಕೊಂಡು, ಅವರ ಮೇಲೆ ಅಧಿಕಾರವನ್ನು ತೋರಿಸಬಾರದು. 'ನೀ ರಂಡೆ' 'ನೀ ರಂಡೆ' ಮುಂತಾದ ಅಸಂಗತವಾದ ಮಾತುಗಳಿಂದ ಜಗಳವನ್ನು ಮಾಡಬಾರದು. ತಮ್ಮ ಕೈಯಲ್ಲಿ ಶಕ್ತಿಯಿರುವಾಗ ತಮ್ಮ ಗೇಮೆಯನ್ನು ತಮಗಿಂತ ಹಿರಿಯರಿಂದಾಗಲಿ ಗಂಡಸರಿಂದಾಗಲಿ ಮಾಡಿಸಿಕೊಳ್ಳಬಾರದು. ಗಂಡ, ತಂದೆ, ಅಣ್ಣ, ತಮ್ಮಂದಿರು ಹೊರತು ಮಿಕ್ಕ ಯಾವ ಗಂಡಸರ ಸಂಗಡಲೂ, ಏಕಾಸನದಲ್ಲಿಯಾಗಲಿ ಕೇವಲ ಸಮೀಪದಲ್ಲಿಯಾಗಲಿ, ಅಥವಾ ವಿಜನ ಪ್ರದೇಶದಲ್ಲಿಯಾಗಲಿ ಕುಳಿತುಕೊಳ್ಳಕೂಡದು. ಗಂಡಸರ ಸಂಗಡ ಹಾಸ್ಯಮಾಡಬಾರದು. ಅವರು ನಾಚಿಕೆಯುಂಟಾಗುವ ಮಾತುಗಳನ್ನಾಡಿದರೆ ಅಲ್ಲಿ ನಿಲ್ಲದೆ ಹೊರಟು ಹೋಗಬೇಕು; ಅಥವಾ ಒಳ್ಳೆಯ ಮಾತಿನಿಂದ ಅಂಥ ಮಾತುಗಳನ್ನು ಅವರು ಆಡದಂತೆ ಮಾಡಬೇಕು. ಯಾರನ್ನೂ ಬಯ್ಯಬಾರದು. ಒಬ್ಬರ ಮನಸ್ಸು ನೋಯುವಂತೆ ಕ್ರೂರವಾಗಿ ಮಾತನಾಡಬಾರದು. ಯಾರಿಗೂ ಮೋಸ ಮಾಡಬಾರದು. ಸತ್ಯಕ್ಕೆ ಅವಮಾನ ಮಾಡಿ ಅಸತ್ಯದಿಂದ ಅಥವಾ ದುರಾಚರಣೆಯಿಂದ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳಬಾರದು. ಯಾರಾದರೂ ಕೆಟ್ಟ ಮಾತುಗಳನ್ನು ಆಡುತ್ತಿದ್ದರೆ ಅದಕ್ಕೆ ಸಹಾಯ ಮಾಡಬಾರದು. ನಿರಂತರದಲ್ಲಿಯೂ ತಮ್ಮ ಕೈಯಲ್ಲಾದ ಮಟ್ಟಿಗೆ ಎಲ್ಲರ ಸಂಗಡಲೂ ಸೌಮ್ಯತೆಯಿಂದಲೂ ಪ್ರೀತಿಯಿಂದಲೂ ನಡೆದುಕೊಳ್ಳಬೇಕು. ಮೈದುನ, ನಾದಿನಿ, ಮಲಮ

ಕ್ಕಳು ಮುಂತಾದ ಚಿಕ್ಕವರ ಸಂಗಡ ನಮ್ರತೆಯಿಂದಲೂ ಮಮತೆ ಯಿಂದಲೂ ನಡೆಯಬೇಕು. ಯಾರ ಸಂಗಡಲೂ ದ್ವೇಷವನ್ನು ಮಾಡ ಬಾರದು.

ತಮ್ಮ ಕೆಲಸವನ್ನು ಬಿಟ್ಟು ವ್ಯರ್ಥವಾಗಿ ಕಾಲವನ್ನು ಕಳೆಯ ಬಾರದು. ಬೀದಿಯಲ್ಲಿ ನಡೆವ ವಿನೋದವನ್ನು ನೋಡುತ್ತ, ಮನೆಯ ಬಾಗಲಲ್ಲಿಯೂ ಅಥವಾ ಕಿಟಕಿಯಲ್ಲಿಯೂ ನಿಲ್ಲಬಾರದು. ಹಗಲು ಹೊತ್ತು ಯಾವಾಗಲೂ ಸುಮ್ಮನೆ ಕುಳಿತಿರಬಾರದು, ಮಲಗಲೂ ಬಾ ರದು. ಹಗಲು ನಿದ್ರೆ ಮಾಡುವುದು ಸ್ತ್ರೀಯರಿಗೆ ಅನುಚಿತವಾದ ಕೆಲ ಸವು. ಮಧ್ಯಾಹ್ನದಲ್ಲಿ ಸರ್ವರ ಭೋಜನವಾದ ಮೇಲೆ ತಾನು ಭೋ ಜನ ಮಾಡಬೇಕು. ಮಿತವಾಗಿಯೂ ಶರೀರಸ್ಥಿತಿಗೆ ಅನುಕೂಲವಾಗಿ ಯೂ ಇರುವಂತೆ ಭೋಜನವನ್ನು ಮಾಡಬೇಕು. ಹೆಚ್ಚಾಗಿ ಊಟ ಮಾಡಿದರೆ ಪಾಲುಮಾರಿಕೆಯುಂಟಾಗಿ ಯಾವ ಕೆಲಸ ಮಾಡುವುದಕ್ಕೂ ಆಗುವುದಿಲ್ಲ. ಭೋಜನವಾದ ಮೇಲೆ ಇತರ ಕೆಲಸವೇನಾದರೂ ಇದ್ದರೆ ಮಾಡಿ ಬಳಿಕ ಮನೆಯಲ್ಲಿ ಇರುವುದನ್ನೂ ಇಲ್ಲದುದನ್ನೂ ನೋಡಿ ಇಲ್ಲದುದನ್ನು ತರಿಸಿ ಇಡಬೇಕು. ಮನೆಯ ಆದಾಯ ವೆಚ್ಚವ ನ್ನು ಬರೆದು ಇಡಬೇಕು. ಆದಾಯಕ್ಕಿಂತ ವೆಚ್ಚ ಹೆಚ್ಚಾಗದಂತೆ ನೋಡಿಕೊಳ್ಳಬೇಕು. ಕಾರಣವಿಲ್ಲದೆ ಹಣವನ್ನು ವೆಚ್ಚ ಮಾಡಬಾರದು. ಸಂಸಾರಿಯು ಹಣವನ್ನು ಬಹಳ ಜೋಪಾನದಿಂದ ಕಾಪಾಡಬೇಕು. ವಿದ್ವಾಂಸರು ದ್ರವ್ಯವನ್ನು ಮನುಷ್ಯನ ಹೊರಗಿನ ಜೀವವೆಂದು ಹೇಳು ತ್ತಾರೆ. ಮನುಷ್ಯನಿಗೆ ಲೋಕದಲ್ಲಿ ದ್ರವ್ಯವಿರುವವರೆಗೇ ಮಾನಮರ್ಯಾ ದೆಗಳು ನಡೆಯುತ್ತವೆ. ದ್ರವ್ಯಹೀನನಾದವನು ಗುಣಾಢ್ಯನಾದಾಗ್ಗೂ ಸತ್ಕುಲದಲ್ಲಿ ಹುಟ್ಟಿದವನಾದಾಗ್ಗೂ ಅವನನ್ನಾರೂ ಮಾತನಾಡಿಸುವುದಿಲ್ಲ. ಮನುಷ್ಯನಿಗೆ ದ್ರವ್ಯವು ಸರ್ವಕಾಲದಲ್ಲಿಯೂ ಅವಶ್ಯವಾಗಿರಬೇಕು. ಆಪತ್ತಿನಲ್ಲಿ ದ್ರವ್ಯಕ್ಕೆ ಸಮಾನನಾದ ಮಿತ್ರನಾರೂ ಇಲ್ಲ. ಮನುಷ್ಯ ನಿಗೆ ದ್ರವ್ಯದ ಆಗತಿಯು ಒಂದೇ ಸಮನಾಗಿರುವುದಿಲ್ಲ; ಒಂದೊಂದು ವೇಳೆ ಹೆಚ್ಚಾಗಿ ದೊರೆವುದು; ಆ ಕಾಲದಲ್ಲಿ ಗರ್ವಪಡದೆ ದ್ರವ್ಯದ ಸಂರ ಕ್ಷಣೆಯನ್ನು ಮಾಡಬೇಕು. ಕೇವಲ ನಿರ್ವಾಹವಿಲ್ಲದ ಪದಾರ್ಥಗಳ ನ್ನು ಮಾತ್ರ ಕೊಂಡುಕೊಳ್ಳಬೇಕು. ಅವಶ್ಯಕವಿಲ್ಲದ ಪದಾರ್ಥಗಳನ್ನೂ

ಅನವಶ್ಯಕವಾದ ಹೆಚ್ಚು ಬೆಲೆಯುಳ್ಳ ಬಟ್ಟೆಗಳನ್ನೂ ಕೊಂಡುಕೊಳ್ಳ ಬಾರದು. ಒಂದೊಂದು ಕಾಸನ್ನು ಗಂಟುಹಾಕುತ್ತಾ ಬಂದರೆ ಲಕ್ಷಾವಧಿ ರೂಪಾಯಿಗಳು ಸೇರುತ್ತವೆ. ಒಂದೊಂದು ಕಾಸಾಗಿ ವೆಚ್ಚಮಾಡುತ್ತಾ ಬಂದರೆ ಲಕ್ಷಾವಧಿ ರೂಪಾಯಿಗಳು ಬರಿದಾಗುತ್ತವೆ. ಆದಕಾರಣ ಎಲ್ಲ ವಿಷಯದಲ್ಲಿಯೂ ಮಿತಾಚರಣೆಯೂ ಮಿತವ್ಯಯವೂ ಹಿತಕಾರಿಯಾದುದು. ಪತಿಯ ಆಜ್ಞೆಯಿಲ್ಲದೆ ಯಾವ ಕೆಲಸವನ್ನೂ ಮಾಡಬಾರದು ಆತನು ಮನೆಯಲ್ಲಿ ಇಲ್ಲದಾಗ ನಿರ್ವಾಹವಿಲ್ಲದೆ ಮಾಡಬೇಕಾದುದನ್ನು ಕೇಳದೆ ಮಾಡಬಹುದು. ಸನ್ಮಾರ್ಗವನ್ನು ಅವಲಂಬಿಸಿ ವಿಚಾರಪೂರ್ವಕವಾಗಿ ಯಾವ ಕೆಲಸವನ್ನು ಮಾಡುವುದಕ್ಕೂ ಹಿಂದೆ ಮುಂದೆ ನೋಡಬಾರದು. ಧರ್ಮ, ಪರೋಪಕಾರ, ದೇಶಹಿತ ಮೊದಲಾದ ಕೆಲಸಗಳಲ್ಲಿ ಬೇಕಾದಷ್ಟು ಧನವನ್ನು ವೆಚ್ಚಮಾಡಬೇಕು. ಇಂಥ ಸಂಗತಿಯಲ್ಲಿ ಕಾರ್ಪಣ್ಯ ಪಡಬಾರದು. ದಾನಕ್ಕೆ ಸಮಾನವಾದ ಧರ್ಮವಿಲ್ಲವೆಂದು ಸತ್ಪುರುಷರು ಹೇಳುತ್ತಾರೆ. ಅನ್ಯರಿಂದ ಮೆಚ್ಚಿಕೆ ಸಿಕ್ಕೊಳ್ಳುವುದಕ್ಕಾಗಿ ದಾನವನ್ನು ಮಾಡಬಾರದು. ಪರಾರ್ಥ ಬುದ್ಧಿಯಿಂದ ದಾನಮಾಡಬೇಕು. ದಾನವು ನಾನಾವಿಧವಾದುದು. ಅದರಲ್ಲಿ ದ್ರವ್ಯದಾನ, ಅನ್ನದಾನ, ವಸ್ತ್ರದಾನ ಮುಂತಾದುವು ಮುಖ್ಯವಾದುವು. ದ್ರವ್ಯದಾನಕ್ಕೆ ಪಾತ್ರಾಪಾತ್ರ ವಿಚಾರಮಾಡಬೇಕು. ಯಾರಿಗೆ ಕೊಟ್ಟರೆ ದ್ರವ್ಯವು ದುರ್ವ್ಯಾಪಾರದಲ್ಲಿ ವಿನಿಯೋಗವಾಗುತ್ತದೆಂದು ಕಾಣುವುದೋ ಅಂಥವನಿಗೆ ದ್ರವ್ಯವನ್ನು ಕೊಡಬಾರದು. ಕಾಯಪುಷ್ಟಿಯುಳ್ಳವರಾಗಿ ಮನೆಮನೆಗೆ ತಿರುಗುತ್ತಿರುವ ಸೋಮಾರಿಗಳಿಗೂ ದ್ರವ್ಯವನ್ನು ಕೊಡಬಾರದು. ಇದರಿಂದ ಪಾಲುಮಾರಿಕೆಗೆ ಪ್ರೋತ್ಸಾಹವನ್ನು ಉಂಟುಮಾಡಿದಂತೆ ಆಗುತ್ತದೆ. ಅನಾಯಾಸವಾಗಿ ತಿನ್ನುವುದಕ್ಕೆ ಸಿಕ್ಕಿದರೆ ಯಾರುತಾನೆ ಕೆಲಸ ಮಾಡಾರು? ಈ ಪ್ರಕಾರ ಶ್ರಮವಿಲ್ಲದೆ ಕಾಲಕ್ಷೇಪ ಮಾಡುವರು ಯಾವ ಯೋಚನೆಯೂ ಇಲ್ಲದ ನಾನಾವಿಧವಾದ ಕೆಟ್ಟ ಕೆಲಸವನ್ನು ಮಾಡುತ್ತಾರೆ. ಮನುಷ್ಯನಾವಾಗಲೂ ಸುಮ್ಮನೆ ಇರುವುದಕ್ಕಾಗುವುದಿಲ್ಲ. ಅವನ ಮನಸ್ಸಿಗಾವುದಾದರೂ ಒಂದು ಕೆಲಸ ಮಾಡಬೇಕಾಗಿರುತ್ತದೆ. ಆ ಮನಸ್ಸಿಗೆ ಒಳ್ಳೆಯಕೆಲಸ ಸಿಕ್ಕದೆ ಇದ್ದರೆ ಅದು ಕೆಟ್ಟಕೆಲಸಕ್ಕೆ ಬಿದ್ದು ಅವನ ಯೋಗ್ಯತೆಯನ್ನೇ ಕೆಡಿಸಿ ಬಿಡುತ್ತದೆ. ಸೋಮಾರಿಗಳ ಮನಸ್ಸು ಶ್ರಮ

ಸಾಧ್ಯವಾದ ಆವ ಕೆಲಸದಲ್ಲಿಯೂ ಪ್ರವೇಶಿಸದೆ ದುರ್ಮಾರ್ಗಕ್ಕೆ ಬಿದ್ದು ನಷ್ಟವನ್ನು ಉಂಟುಮಾಡುತ್ತದೆ. ಈ ನಷ್ಟವು ಆ ಸೋಮಾರಿಗಳಿಗೆ ಮಾತ್ರವೇ ಆಗುವುದಿಲ್ಲ; ಮನುಷ್ಯ ಸಮಾಜಕ್ಕೇ ಉಂಟಾಗುತ್ತದೆ. ಆದುದರಿಂದ ಸಾಧುಗಳೆಂದು ವೇಷಹಾಕಿಕೊಂಡು ಕಟ್ಟಕೆಲಸವನ್ನು ಮಾಡುವ ಸೋಮಾರಿಗಳಿಗೆ ದುಡ್ಡನ್ನು ಕೊಡಬಾರದು.

ಹಸಿದವರಿಗೆ ಅನ್ನವನ್ನೂ, ಬಾಯಾರಿದವರಿಗೆ ನೀರನ್ನೂ, ಶೀತದಿಂದ ವ್ಯಾಕುಲರಾದವರಿಗೆ ವಸ್ತ್ರವನ್ನೂ, ಶೋಕಾಕುಲರಿಗೆ ಸಮಾಧಾನವನ್ನೂ, ಹತೋತ್ಸಾಹರಿಗೆ ಧೈರ್ಯವನ್ನೂ, ಅನಾಥರಿಗೆ ಆಶ್ರಯವನ್ನೂ ಕೊಡಬೇಕಾದುದು ಅವಶ್ಯಕವು. ಕುರುಡರು, ಕುಂಟರು, ಮಹಾರೋಗಗ್ರಸ್ತರು, ಮುದುಕರು ಮುಂತಾದವರಿಗೆ ಕೈಯಲ್ಲಾದಷ್ಟಿಗೂ ಸಹಾಯವನ್ನು ಮಾಡಬೇಕು. ಇಂಥವರನ್ನು ಕಂಡು ಹಾಸ್ಯಮಾಡಬಾರದು; ಅಥವಾ ಇನ್ನಾವರೀತಿಯಿಂದಲೂ ಇವರಮನಸ್ಸನ್ನು ನೋಯಿಸಬಾರದು. ಆನುಕೂಲ್ಯ ತಪ್ಪಿದರೆ ನಮ್ಮ ಅವಸ್ಥೆಯು ಇವರಂತೆಯೇ ಆಗಬಹುದು. ಆದುದರಿಂದ ಯಥಾಶಕ್ತಿ ಸ್ವಾರ್ಥಪರರಾಗದೆ ಪರೋಪಕಾರ ಮಾಡಬೇಕಾದುದು ಆವಶ್ಯಕವು. ಯಾರಿಗೆ ಉಪಕಾರ ಮಾಡಬೇಕಾದರೂ ಅವರ ಕಡೆಯಿಂದ ಪ್ರತ್ಯುಪಕಾರವನ್ನು ಪಡೆಯಬೇಕೆಂಬ ಆಶೆಯನ್ನು ಇಟ್ಟುಕೊಂಡು ಮಾಡಬಾರದು. ದೇವರು ನಿಮಗೆ ಹೆಚ್ಚಾಗಿ ಅನುಕೂಲಗಳನ್ನು ಕೊಟ್ಟಹಾಗೆಲ್ಲ ನೀವು ಹೆಚ್ಚಾಗಿ ಪರೋಪಕಾರವನ್ನು ಮಾಡಬೇಕು. ಹೀಗೆ ಮಾಡಿದಾಗ್ಯೂ "ನಾವೇ ಇತರರಿಗೆ ಉಪಕಾರಮಾಡಿದ್ದೇವೆ; ಇತರರ ಹಂಗು ನಮಗೇನೂ ಇಲ್ಲ" ಎಂದು ದುರಭಿಮಾನ ಪಡಬಾರದು. "ನಾವು ಇತರರಿಗೆ ಮಾಡುವುದು ಉಪಕಾರವಲ್ಲ; ಅವರ ಸಾಲವನ್ನು ತೀರಿಸುತ್ತೇವೆ" ಎಂದು ತಿಳಿದುಕೊಳ್ಳಬೇಕು. ಇತರರು ನಿಮಗೆ ಮಾಡಿರುವ ಉಪಕಾರಕ್ಕೆ ನೀವು ಎಷ್ಟು ಪ್ರತ್ಯುಪಕಾರವನ್ನು ಮಾಡಿದಾಗ್ಯೂ ತೀರದು. ನಿಮ್ಮ ತಾಯಿತಂದೆಗಳು ನಿಮ್ಮ ಬಾಲ್ಯದಲ್ಲಿ ನಿಮಗೆ ಮಾಡಿರುವ ಉಪಕಾರವೆಷ್ಟೆಂದು ನೆನೆಸಿಕೊಳ್ಳಿರಿ. ನೀವು ಬಹಳ ಸಣ್ಣವರಾಗಿ ಅಶಕ್ತರಾಗಿ ಇದ್ದಾಗ ಅವರು ತಮ್ಮ ಸುಖವನ್ನೆಲ್ಲ ಬಿಟ್ಟು ಬಹು ಶ್ರಮದಿಂದ ನಿಮ್ಮನ್ನು ಸರ್ವಪ್ರಕಾರದಿಂದಲೂ ಸಂರಕ್ಷಣೆಯನ್ನು ಮಾಡಿರುತ್ತಾರೆ.

ಈ ಸಾಲವನ್ನು ನೀವು ತೀರಿಸುವುದಕ್ಕೆ ಆದೀತೆ? ಆದಾಗ್ಯೂ ನಿಮ್ಮ ಕೈಯಲ್ಲಾದಮಟ್ಟಿಗೂ ಅವರ ಶುಶ್ರೂಷೆಯನ್ನು ಮಾಡಿ ಭಕ್ತಿಯಿಂದ ಅವರ ಆಜ್ಞಾಪರಿಪಾಲನೆ ಮಾಡುವುದರಿಂದಲೂ, ಅವರು ನಿಮ್ಮನ್ನು ರಕ್ಷಿಸಿದಂತೆ ನೀವು ಸಹ ನಿಮ್ಮ ಸಂತಾನವನ್ನು ರಕ್ಷಿಸುವುದರಿಂದಲೂ, ಆ ಸಾಲವನ್ನು ತೀರಿಸಬೇಕು. ಜನರು ನಿಮಗೆ ಧನವನ್ನೂ ಮಾನವನ್ನೂ ಪ್ರೀತಿಯನ್ನೂ ಸುಖವನ್ನೂ ಇನ್ನೂ ಇತರ ವಿಧವಾದ ಅನುಕೂಲ್ಯಗಳನ್ನೂ ಉಂಟುಮಾಡಿದ್ದಾರೆ. ಅದಕ್ಕೆ ಪ್ರತಿಯಾಗಿ ನೀವು ಸಹ ನಿಮ್ಮ ನೆರೆಹೊರೆಯವರಲ್ಲಿ ಪ್ರೀತಿಯಿಟ್ಟು, ಅವರಿಗೆ ನಿಮ್ಮ ಕೈಯಲ್ಲಾದಷ್ಟು ಸಹಾಯವನ್ನೂ ಮಾನಮರ್ಯಾದೆಗಳನ್ನೂ ಮಾಡಿ ಅವರ ಸಾಲವನ್ನು ತೀರಿಸಬೇಕು. ಯಾರಾದರೂ ಕೆಟ್ಟಕೆಲಸವನ್ನು ಮಾಡುತ್ತಿದ್ದರೆ ಅವರನ್ನು ಒಳ್ಳೆಯ ದಾರಿಗೆ ತಿರುಗಿಸಬೇಕು. ಪ್ರತ್ಯುಪಕಾರವನ್ನು ಅಪೇಕ್ಷಿಸದೆ ಅನ್ಯರಿಗೆ ಉಪಕಾರವನ್ನು ಮಾಡಿ ಕೆಲವರನ್ನಾದರೂ ನಿಮ್ಮ ಋಣಿಗಳನ್ನಾಗಿ ಮಾಡಿಕೊಳ್ಳಬೇಕು. ದುರ್ಬಲರಾಗಿ ತೊಂದರೆಯಲ್ಲಿ ಸಿಕ್ಕಿರುವವರಿಗೆ ಸಹಾಯ ಮಾಡುವುದಕ್ಕೆ ಸಮಾನವಾದ ಧರ್ಮ ಮತ್ತೊಂದಿಲ್ಲ. ಗೃಹಸ್ಥರಿಂದ ಸಹಾಯವನ್ನು ಹೊಂದಬೇಕೆಂದು ಇತರ ಆಶ್ರಮದವರು ಕಾದುಕೊಂಡಿರುತ್ತಾರೆ. ಆದುದರಿಂದ ನಿಮ್ಮ ಕೈಯಲ್ಲಾದಮಟ್ಟಿಗೂ ಅವರ ಆಶೆಯನ್ನು ಪೂರ್ಣಮಾಡಬೇಕು. ನಿಮ್ಮಲ್ಲಿ ಅರ್ಥಿಗಳಾಗಿ ಬಂದವರನ್ನು ಅನಾದರಮಾಡಬಾರದು. ಇತರರಿಗೆ ಸಹಾಯಮಾಡುವ ಅನುಕೂಲ್ಯವನ್ನು ದೇವರು ನಿಮಗೆ ಕೊಟ್ಟಿರುವುದರಿಂದಲ್ಲವೆ ಅವರು ನಿಮ್ಮ ಬಳಿಗೆ ಬರುವುದು ; ಫಲವನ್ನು ಭಕ್ಷಿಸುವುದಕ್ಕೆ ಅಪೇಕ್ಷೆಯುಳ್ಳ ಮನುಷ್ಯರಾಗಲಿ ಇತರ ಜಂತುಗಳಾಗಲಿ ಫಲಭರಿತಗಳಾದ ವೃಕ್ಷಗಳ ಸಮೀಪಕ್ಕೂ, ಬಿಸಲಿನಿಂದ ದಣಿದವರು ಗಿಡಗಳ ಸಮೀಪಕ್ಕೂ, ಹೋಗುವಂತೆ ದರಿದ್ರರಾದವರು ಧನಿಕರಾದ ನಿಮ್ಮ ಬಳಿಗೆ ಬರುತ್ತಾರೆ. ಫಲವಾಗಲಿ, ಪುಷ್ಪಗಳಾಗಲಿ, ಶಾಖೆಗಳಾಗಲಿ, ಇಲ್ಲದ ವೃಕ್ಷಗಳನ್ನು ಯಾರುತಾನೇ ಆಶ್ರಯಿಸುತ್ತಾರೆ. ನಿಮ್ಮನ್ನು ಆಶ್ರಯಿಸಿಕೊಂಡಿರುವವರನ್ನು ನೀವು ನಿಷ್ಠುರವಾದ ಮಾತುಗಳಿಂದ ನೋಯಿಸಬಾರದು. ಎಲ್ಲರ ಸಂಗಡಲೂ ಸ್ನೇಹವಾಗಿ ನಡೆದುಕೊಳ್ಳುವ ಪರೋಪಕಾರಿಗಳಿಗೆ ಯಾರಭಯವೂ ಇಲ್ಲ; ಇಂಥ

ವರಲ್ಲಿ ಸರ್ವರಿಗೂ ಪ್ರೀತಿಯೂ ಇರುತ್ತದೆ. ಆಪತ್ತಿನಲ್ಲಿ ಅನ್ಯರಿಗೆ ಸಹಾಯಮಾಡುತ್ತಿರುವ ಮನುಷ್ಯನಿಗೆ ಸಂಕಟ ಬಂದು ಒದಗಿದರೆ ಎಲ್ಲರೂ ಸಹಾಯಮಾಡುತ್ತಾರೆ. ನೀವು ಅನ್ಯರನ್ನು ಸ್ವಾಧೀನಪಡಿಸಿಕೊಳ್ಳಬೇಕಾದರೆ ಅವರಲ್ಲಿ ಪ್ರೇಮವನ್ನು ಇಡಬೇಕು. ದುಃಖಪಡಿಸುವುದರಿಂದಲೂ, ಭಯಪಡಿಸುವುದರಿಂದಲೂ, ಬಲಾತ್ಕಾರದಿಂದಲೂ ಅನ್ಯರು ಸ್ವಾಧೀನವಾಗುವುದಿಲ್ಲ. ಈ ಜಗತ್ತಿನಲ್ಲಿ ಜನರು ಪ್ರೇಮಕ್ಕೆ ವಶರಾಗುವಂತೆ ಬಲಾತ್ಕಾರಕ್ಕೆ ವಶರಾಗುವುದಿಲ್ಲ. ಪ್ರೇಮಯುಕ್ತನಾಗಿ ಪರೋಪಕಾರಿಯಾಗಿರುವ ಮನುಷ್ಯನಿಗೆ ಸಮನಾದ ಸುಖಿಯು ಯಾರೂ ಇಲ್ಲ; ಇಂಥ ಮನುಷ್ಯನು ಎಲ್ಲರ ಪ್ರೀತಿಗೂ ಪಾತ್ರನಾಗುತ್ತಾನೆ. ಸ್ವಾರ್ಥಾಪೇಕ್ಷೆಯಿಲ್ಲದೆ ಪರೋಪಕಾರವನ್ನು ಮಾಡುವ ಸಜ್ಜನನಿಗೆ ಇರುವಷ್ಟು ಸುಖವು ದುರ್ಜನನಿಗೆ ಭೂಮಂಡಲದ ಆಧಿಪತ್ಯವಿದ್ದರೂ ಇರುವುದಿಲ್ಲ. ಆದಕಾರಣ ಸರ್ವ ಪ್ರಾಣಿಗಳಲ್ಲಿಯೂ ದಯಾಶೀಲರಾಗಿರಬೇಕು. ಆರಾದರೂ ಒಬ್ಬ ಮನುಷ್ಯನು ಕೆಟ್ಟ ಕೆಲಸವನ್ನು ಮಾಡಿ ಜನರಲ್ಲಿ ನಿಂದ್ಯನಾಗಿದ್ದರೂ ಅವನನ್ನು ನೀವು ನಿಂದಿಸಬಾರದು. ನಿಮ್ಮ ಕೈಯಲ್ಲಾದರೆ ಅವನನ್ನು ಒಳ್ಳೆಯ ಮಾರ್ಗಕ್ಕೆ ಹತ್ತಿಸಬೇಕು. ಆರನ್ನು ನಿಂದಿಸಿ ನೀವು ದೊಡ್ಡವರಾಗಬೇಕೆಂದು ಯೋಚಿಸುತ್ತೀರೋ ಅವರ ದೋಷ ಹೊರಗೆ ಬಂದುದರಿಂದತಾನೇ ಅವರು ನೀಚರಾದುದು. ಒಬ್ಬರೂ ಕಾಣದಂತೆ ಅಂತರಂಗದಲ್ಲಿ ನೀವು ಎಷ್ಟು ಪಾಪಗಳನ್ನು ಮಾಡಿದ್ದೀರೋ ಅವನ್ನು ಆಲೋಚಿಸಿ ನೋಡಿದಲ್ಲಿ, ಮತ್ತೊಬ್ಬರನ್ನು ನಿಂದಿಸುವ ನಿಮಗಿಂತ ಅವರೇ ಉತ್ತಮರೆಂದು ಕಾಣಬಹುದು. ನಾಲ್ಕು ಜನ ಹೆಂಗಸರು ಬಂದು ಕಡೆ ಸೇರಿದರೆ ಪ್ರಾಯಶಃ ಅನ್ಯರ ದೋಷೋದ್ಘಾಟನೆಯ ಮಾತುಗಳನ್ನಲ್ಲದೆ ಇನ್ನಾವ ಮಾತುಗಳನ್ನೂ ಆಡುವುದಿಲ್ಲ. ಇದರಿಂದ ಒಳ್ಳೆಯ ವಿಷಯದ ಪ್ರಸ್ತಾಪಕ್ಕೆ ಅವಕಾಶವಿಲ್ಲದಂತೆ ಆಗುವುದಲ್ಲದೆ ಪರನಿಂದೆಯಲ್ಲೇ ಅವರ ಅಮೂಲ್ಯವಾದ ಹೊತ್ತು ವ್ಯರ್ಥವಾಗಿ ಕಳೆದು ಹೋಗುವುದು. ಇದೂ ಅಲ್ಲದೆ ಅನ್ಯರ ಪ್ರೇಮವು ಅವರ ಮೇಲೆ ಇಲ್ಲದ ಹಾಗೆ ಆಗಿ ಲೋಕದಲ್ಲಿ ನಿಂದ್ಯರೆಂಬ ಅಪಖ್ಯಾತಿಯೂ ಉಂಟಾಗುವುದು. ಆದಕಾರಣ ಸರ್ವದುಃಖಕ್ಕೂ ಮೂಲವಾಗಿಯೂ, ಅಲಕ್ಷ್ಮಿಗೆ ತೌರುಮನೆಯಾಗಿಯೂ, ಕಲಹಕ್ಕೆ

ಬೀಜವಾಗಿಯೂ, ಇರುವ ಪರ್ಸಿಂದೆಯನ್ನು ಮಾಡುವ ಅಭ್ಯಾಸವನ್ನು ಬಿಡಬೇಕು. ಇತರರು, ನೀಚರೆಂದೂ, ನಾವು ಉತ್ತಮರೆಂದೂ, ಅಹಂಕಾರಪಡುವುದು ಅನುಚಿತವು. ಒಬ್ಬ ತಂದೆಗೆ ಹತ್ತು ಮಕ್ಕಳಿದ್ದರೆ ಹಿರಿಯಮಗನಲ್ಲಿ ಪ್ರೀತಿ ಹೆಚ್ಚಾಗಿಯೂ ಕಿರಿಯವರಲ್ಲಿ ಕಡಿಮೆಯಾಗಿಯೂ ಇರುವುದಿಲ್ಲ; ಹೀಗೆಯೇ ಜಗತ್ತಿಗೆಲ್ಲ ತಂದೆಯಾದ ದೇವರಿಗೆ ಸರ್ವರಲ್ಲಿಯೂ ಸಮಾನವಾದ ಪ್ರೀತಿ ಇರುತ್ತದೆ. ಆತನು ಪರಮಕಾರುಣಿಕನು; ಲೋಕದಲ್ಲಿ ಇರುವ ಮುಖ್ಯಪದಾರ್ಥಗಳನ್ನು ಎಲ್ಲರಿಗೂ ಸಮನಾಗಿ ಹಂಚಿಕೊಟ್ಟಿದ್ದಾನೆ. ಅವನ ದಯೆಗೆ ಎಲ್ಲರೂ ಸಮಾನವಾಗಿ ಪಾತ್ರರಾಗಿದ್ದಾರೆ. ಮನುಷ್ಯ, ಪಶು, ಪಕ್ಷಿ ಮುಂತಾದ ಸರ್ವಪ್ರಾಣಿಗಳಲ್ಲಿಯೂ ನೀವು ದಯಾಪರರಾಗಿ ನಡೆಯಕೊಳ್ಳಬೇಕು. ಆರಾವರೂ ನಿಮಗೆ ಉಪಕಾರವನ್ನು ಮಾಡಿದರೆ ನೀವು ಅವರಿಗೆ ಹತ್ತರಷ್ಟು ಪ್ರತ್ಯುಪಕಾರವನ್ನು ಮಾಡಬೇಕು. ನಿಮ್ಮ ಮನೆಗಾರಾವರೂ ಅತಿಥಿಗಳು ಬಂದರೆ ಅವರನ್ನು ಚೆನ್ನಾಗಿ ಆದರಿಸಬೇಕು. ಅವರ ಸಂಗಡ ಒಳ್ಳೆಯ ಮಾತುಗಳನ್ನಾಡಿ ಸಂತೋಷ ಪಡಿಸಬೇಕು.

ಮನೆಯಲ್ಲಿ ಇರುವ ವಸ್ತುಗಳ ಪಟ್ಟಿಯನ್ನು ಬರೆದು ಭದ್ರವಾಗಿ ಇಡಬೇಕು. ಆರಾದರೂ ಏನಾದರೂ ಒಂದು ಪದಾರ್ಥವನ್ನು ಎರವಾಗಿ ತೆಗೆದುಕೊಂಡು ಹೋಗಿದ್ದರೆ ಅದನ್ನು ತೆಗೆದುಕೊಂಡು ಹೋಗಿರುವವರು ಇಷ್ಟು ದಿವಸಕ್ಕೆ ಹಿಂದಕ್ಕೆ ಕೊಡುತ್ತಾರೆಂಬುದನ್ನು ನೆನಪಿಗಾಗಿ ಬರೆದು ಇಡಬೇಕು. ಆಗಸ ಮುಂತಾದವರ ಸಂಬಳ ಕೊಟ್ಟುದನ್ನು ಗೌಳಿಗರು ಮುಂತಾದವರ ಲೆಕ್ಕ ತೀರಿಸಿದುದನ್ನೂ ಸಹ ಬರೆದು ಇಡಬೇಕು. ಆರಲ್ಲಿಯೇ ಆಗಲಿ ಸಾಲಮಾಡುವ ಸಂಪ್ರದಾಯ ಒಳ್ಳೆಯದಲ್ಲ. ಸ್ವಲ್ಪಸ್ವಲ್ಪವಾಗಿ ಮಾಡಿದುದು ಬಹಳವಾಗಿ ಬೆಳದುಹೋಗುತ್ತದೆ; ಬಳಿಕ ಎಲ್ಲವನ್ನು ಒಟ್ಟಿಗೆ ತೀರಿಸುವುದು ಶ್ರಮವಾಗುತ್ತದೆ. ಸಾಲ ಮಾಡಿದವನಷ್ಟು ದುಃಖಪಡುವವನು ಯಾರೂ ಇಲ್ಲ. ಅವರಿವರಲ್ಲಿ ಸಾಲ ತೆಗೆದುಕೊಂಡವನು ದಾಸನಂತೆ ತಲೆಯನ್ನು ತಗ್ಗಿಸಿಕೊಂಡು, ಆರೇನಂದರೂ ಸಹಿಸಿಕೊಳ್ಳಬೇಕಾಗುತ್ತದೆ. ಮರ್ಯಾದಸ್ಥರಾದವರಿಗೆ ಇದಕ್ಕಿಂತಲೂ ಸಾಯುವುದೇ ಲೇಸು ಎನ್ನಿಸುತ್ತದೆ. ಆದುದರಿಂದ ತಮ್ಮ ತಮ್ಮ ಆದಾಯಕ್ಕೆ ತಕ್ಕಂತೆ ಸಂಸಾರ ನಡೆಯಿಸಿಕೊಂಡು ಹೋಗಬೇಕು.

ದೊಡ್ಡವರನ್ನು ನೋಡಿ ನಾವೂ ಅವರಂತೆಯೇ ನಡೆಯಬೇಕೆಂಬ ಹೆಮ್ಮೆಯನ್ನು ಹಚ್ಚಿಕೊಳ್ಳಬಾರದು. ಸಾಲವಿಲ್ಲದೆ ಅರಹೊಟ್ಟೆ ಹಿಟ್ಟು ತಿಂದು ಹರಕುಬಟ್ಟೆಯನ್ನುಟ್ಟುಕೊಂಡಿರುವವನಿಗೆ ಇರುವಷ್ಟು ನೆಮ್ಮದಿಯೂ, ಸುಖವೂ, ಮರ್ಯಾದೆಯೂ, ಸಾಲಗಾರನಾಗಿರುವ ರಷ್ಯಾದೇಶದ ಚಕ್ರವರ್ತಿಗೂ ಇಲ್ಲವೆಂದು ಕಾಣುತ್ತದೆ. ಸಾಲವೆಂಬ ಜಿಗಣೆಯು ಮನುಷ್ಯನಿಗೆ ಒಂದುಸಲ ಅಂಟಿದರೆ ಅವನ ರಕ್ತವನ್ನೆಲ್ಲ ಹೀರುವವರೆಗೂ ಬಿಡುವದಿಲ್ಲ. 'ಋಣಂಕೃತ್ವಾಘೃತಂ ಪಿಬೇತ್' ಎಂಬ ಗಾದೆಯಂತೆ ಆಚರಿಸುವ ನಮ್ಮ ಜನರಿಗೆ ಮಾನನಷ್ಟವೂ ಅದಕ್ಕೆ ಸಮಾನವಾದ ಇತರ ಅನರ್ಥಗಳೂ ಸಂಭವಿಸುತ್ತವೆ. ಈ ವಿಷಯದಲ್ಲಿ ನಮ್ಮವರು ದೃಷ್ಟಿಯಿಡದೆ ಇರುವುದಕ್ಕಾಗಿ ನಾನು ಬಹಳ ವ್ಯಸನಪಡುತ್ತೇನೆ. ಆದಾಯಕ್ಕಿಂತ ಹೆಚ್ಚು ವೆಚ್ಚ ಮಾಡುವುದರಿಂದ ಅನೇಕ ರಾಜ್ಯಗಳೇ ಹಾಳಾಗಿವೆ. ಇಂಥದರಲ್ಲಿ ಒಬ್ಬ ಮನುಷ್ಯನ ಪಾಡೇನು? ಆದಕಾರಣ ಯಾವಾಗಲೂ ಮಿತವಾಗಿ ವೆಚ್ಚ ಮಾಡಬೇಕು. ಸತ್ಕಾರ್ಯದಲ್ಲಿ ವಿನಿಯೋಗಿಸಿ ಉಳಿದ ದ್ರವ್ಯವನ್ನು ತಮಗಾಗಲಿ ಇತರರಿಗಾಗಲಿ ಉಪಯೋಗವಾಗುವುದೆಂದು ತಿಳಿದು ಇಟ್ಟಿರಬೇಕು. ಸರ್ವರೂ ಹೀಗೆ ಮಾಡಿದರೆ ನಮ್ಮ ದೇಶಕ್ಕೆ ಆಗಿಂದಾಗ್ಗೆ ಉಂಟಾಗುವ ಕ್ಷಾಮದ ತೊಂದರೆಯೂ, ಕ್ಷಾಮದ ತೊಂದರೆಯಿಂದುಂಟಾಗುವ ಲಕ್ಷಾವಧಿ ಪ್ರಾಣನಾಶವೂ ತಪ್ಪಿಹೋಗುವುವು. ದೇಶದ ದರಿದ್ರಾವಸ್ಥೆಯೇ ಕ್ಷಾಮಕ್ಕೆ ಕಾರಣವಾದುದರಿಂದ ಅದನ್ನು ನಿವಾರಣೆ ಮಾಡುವುದಕ್ಕೆ ಎಲ್ಲರೂ ಯತ್ನಮಾಡಬೇಕು.

ಈ ಪ್ರಕಾರ ಮನೆಯ ಕೆಲಸವನ್ನೆಲ್ಲ ಮಾಡಿದ ಬಳಿಕ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಬೇಕು. ಕಾಲ ಕಾಲಕ್ಕೆ ವಿಶ್ರಮಿಸಿಕೊಳ್ಳದೆ ಇದ್ದರೆ ದೇಹಸ್ಥಿತಿಯು ಕೆಟ್ಟುಹೋಗುವುದು. ಧನವಂತೆಯೇ ಕಾಲವನ್ನು ಬಹು ಜಾಗರೂಕತೆಯಿಂದ ವೆಚ್ಚಮಾಡಬೇಕು. ಕಳೆದು ಹೋದ ಹಣವನ್ನಾದರೂ ತಿರುಗಿ ಸಂಪಾದಿಸಬಹುದು; ಹೊತ್ತನ್ನು ಸಂಪಾದಿಸುವುದಕ್ಕೆ ಆಗುವುದಿಲ್ಲ.

ರಾತ್ರಿಯಲ್ಲಿ ಎಲ್ಲರ ಭೋಜನವೂ ಆದಮೇಲೆ, ಮಾಡತಕ್ಕ ಕೆಲಸವನ್ನೆಲ್ಲ ಮಾಡಿ ಮನೆಯಲ್ಲಿರುವವರೆಲ್ಲರ ಪರಾಮರಿಕೆಯನ್ನು ತೆಗೆದುಕೊಂಡು ಎಲ್ಲರೂ ಮಲಗಿದ ಬಳಿಕ ತಲೆಬಾಗಿಲು ಹಾಕಿರುವುದನ್ನು

ನೋಡಿಕೊಂಡು ಅತ್ತಿತ್ತಬಿದ್ದಿರುವ ಪದಾರ್ಥಗಳನ್ನೆಲ್ಲ ಸರಿಯಾಗಿಡಬೇಕು. ಮಲಗುವುದಕ್ಕೆ ಮುಂಚೆ ಆ ದಿವಸ ಯಾವ ಯಾವ ಕೆಲಸ ಮಾಡಬೇಕೆಂದು ನಿಶ್ಚಯವಾಗಿದ್ದಿತು, ಅವರಲ್ಲಿ ಯಾವ ಕೆಲಸವಾಯಿತು, ಯಾವುದು ಆಗಲಿಲ್ಲವೆಂಬುದನ್ನು ನೋಡಿಕೊಳ್ಳಬೇಕು. ಗೃಹಕೃತ್ಯ ವಿಷಯದಲ್ಲಿ ತಮಗೆ ಹಿತವಾಗುವ ಮಾರ್ಗವನ್ನು ಹುಡುಕುವುದರಲ್ಲಿ ಆಲಸ್ಯಪಡಬಾರದು. ನಾನಾವಿಧವಾದ ನೀತಿಗ್ರಂಥಗಳನ್ನೂ, ಈಶ್ವರ ವಿಷಯಕವಾದ ಜ್ಞಾನವನ್ನುಂಟುಮಾಡುವ ಉಪಾಖ್ಯಾನಗಳನ್ನೂ, ತಮಗೆ ತಿಳಿಯಬಹುದಾದ ಶಾಸ್ತ್ರವಿಚಾರವನ್ನೂ, ವರ್ತಮಾನಪತ್ರಗಳನ್ನೂ ಓದಿ ಯಾವುದರಲ್ಲಿಯಾದರೂ ಏನಾದರೂ ಸದುಪದೇಶವು ಸಿಕ್ಕಿದರೆ ಅದನ್ನು ನೆನಪಿನಲ್ಲಿ ಇಟ್ಟುಕೊಂಡು ತಮ್ಮ ವೃತ್ತಿಯು ದಿನೇದಿನೇ ಉತ್ಕರ್ಷವನ್ನು ಹೊಂದುವಂತೆ ಏಕಾಗ್ರಚಿತ್ತರಾಗಬೇಕು. ಇತರರ ಆಚಾರವನ್ನು ನೋಡಿ ಅವರು ಆಡುವ ಮಾತುಗಳನ್ನು ಕೇಳಿ ಅದರಲ್ಲಿ ಸಾರವಾದುದನ್ನು ತಿಳಿದುಕೊಳ್ಳಬೇಕು. ಶುಷ್ಕವಾದ ಹರಟೆಯಲ್ಲಿ ಕಾಲವನ್ನು ಕಳೆಯಬಾರದು. ಸಾಯಂಕಾಲವಾದ ೩ ಘಂಟೆ ಒಳಗಾಗಿ ಮಲಗಿ, ಇನ್ನು ೧-೩ ಘಂಟೆ ರಾತ್ರಿ ಇರುವಾಗಲೇ ಏಳಬೇಕು. ಸಂಸಾರದಲ್ಲಿ ಯಾರೂ ಕಾಣದಂತೆ ಮಾಡಿದ ಪಾಪವು ಸರ್ವಸಾಕ್ಷಿಯಾದ ಭಗವಂತನಿಗೆ ತಿಳಿಯದೆ ಇರಲಾರದೆಂದೂ, ಪಾಪಕ್ಕೆ ತಕ್ಕ ಶಿಕ್ಷೆ ತಪ್ಪುವುದಿಲ್ಲವೆಂದೂ, ದೃಢವಾಗಿ ನಂಬಿ ಎಚ್ಚರವಾಗಿ ನಡೆದುಕೊಳ್ಳಬೇಕು.

---

## ೭ನೆಯ ಪರಿಚ್ಛೇದ.

---

### ಮಕ್ಕಳ ಪೋಷಣೆ ಮತ್ತು ಶಿಕ್ಷಣೆ.

ಗೃಹಕೃತ್ಯದ ಎಲ್ಲಾ ಕೆಲಸಗಳಲ್ಲಿಯೂ ಮಕ್ಕಳನ್ನು ಪೋಷಿಸಿ ಅಭಿವೃದ್ಧಿಗೆ ತರುವುದು ಮುಖ್ಯವಾದ ಕೆಲಸವಾಗಿದೆ. ಇದರಲ್ಲಿ ಸ್ತ್ರೀಯರು ಬಹಳ ದೂರದವರೆಗೆ ಯೋಚನೆಮಾಡಿ ಜಾಗರೂಕರಾಗಿ ನಡೆದುಕೊಳ್ಳಬೇಕು. ಮಹಾ ಶೂರನಾದ ನೆಪೋಲಿಯನ್ ಬೋನಾಪಾರ್ಟನ್ನು "ನೀನು ಭೂಮಂಡಲದಲ್ಲೆಲ್ಲ ಇಷ್ಟು ಶೂರನೆನಿಸಿಕೊಳ್ಳುವುದ

ಕ್ಕೆ ಕಾರಣವೇನು " ಎಂದು ಯಾರೋ ಕೇಳಿದುದಕ್ಕೆ ಆತನು–ನನ್ನ ತಾಯಿ ನನ್ನನ್ನು ಈ ಸ್ಥಿತಿಗೆ ತಂದಳು–ಎಂದು ಉತ್ತರ ಕೊಟ್ಟನೆಂದು ಇತಿಹಾಸವಿದೆ. ಈ ಉತ್ತರವು ಸಂಕ್ಷೇಪವಾಗಿದ್ದಾಗ್ಯೂ ಇದರ ಒಂದೊಂದು ಅಕ್ಷರವಲ್ಲಿ ಮಹಾಭಾರತದಷ್ಟು ಅರ್ಥವು ಗರ್ಭಿತವಾಗಿರು ವಂತೆ ಕಾಣಿಸುತ್ತದೆ. ಮಕ್ಕಳು ಬದುಕುವುದಾಗಲಿ, ಕೆಡುವುದಾಗಲಿ, ಅವರು ಪ್ರಪಂಚದಲ್ಲಿ ದೊಡ್ಡವರಾಗುವುದಾಗಲಿ, ನೀಚರಾಗುವುದಾಗಲಿ, ಅವರವರ ತಾಯಿಯ ಕೈಯಲ್ಲಿದೆ.

ತಾಯಿಯ ಗುಣಗಳೇ ಮಕ್ಕಳಲ್ಲಿ ಪ್ರಾಯೇಣ ವಿಶೇಷವಾಗಿ ಇರುತ್ತವೆ. ಗರ್ಭಧಾರಣ ಮೊದಲುಗೊಂಡು ಜನನವಾಗುವವರೆಗೂ ತಾಯಿಯ ರಕ್ತಮಾಂಸಗಳ ಸಂಸರ್ಗದಿಂದಲೂ, ಜನನವಾದ ಮೇಲೆ ಇತರ ಪದಾರ್ಥಗಳನ್ನು ತಿನ್ನುವಷ್ಟು ಯೋಗ್ಯತೆ ಬರುವವರೆಗೂ ತಾಯಿ ಸ್ತನ್ಯಪಾನದಿಂದಲೂ, ಮಗುವಿನ ಪೋಷಣೆಯಾಗುವುದರಿಂದ ಮನುಷ್ಯರ ಶರೀರವಲ್ಲಿ ತಾಯಿಯ ರಕ್ತಭಾಗವೇ ಹೆಚ್ಚಾಗಿರುತ್ತದೆ. ಮುಂದೆಯೂ ತಾಯಿ ಆಡುವ ಮಾತುಗಳನ್ನೂ ಆಕೆ ಮಾಡುವ ಕೆಲಸವನ್ನೂ ಮಕ್ಕಳು ಕಲಿವುದರಿಂದ ಎಲ್ಲಾ ವಿಷಯಗಳಲ್ಲಿಯೂ ಮಕ್ಕಳು ತಾಯಿಯನ್ನೇ ಅನುಸರಿಸುತ್ತಾರೆ. ಆದಕಾರಣ ತಾಯಿಯ ಸ್ವಭಾವವೂ ಆಚರಣೆಯೂ ಚೆನ್ನಾಗಿದ್ದರೆ ಮಕ್ಕಳು ಸಹ ಒಳ್ಳೆಯವರಾಗುತ್ತಾರೆ ; ಅವರ ನಡತೆ ಚೆನ್ನಾಗಿಲ್ಲದಿದ್ದರೆ ಮಕ್ಕಳು ಸಹ ಕೆಟ್ಟು ಹೋಗುತ್ತಾರೆ. ಯಾರಿಗೇ ಆಗಲಿ ವಿದ್ಯೆಯಿಲ್ಲದೆ ಜ್ಞಾನವುಂಟಾಗುವುದಿಲ್ಲ. ಜ್ಞಾನವಿಲ್ಲದೆ ಸ್ವಾಧೀನ ಚಿತ್ತತೆ ತೇಜಸ್ಸು, ಸತ್ಯಪರಾಯಣತೆ, ಧಾರ್ಮಿಕತ್ವ ಮೊದಲಾದ ಉತ್ತಮಗುಣಗಳು ಎಂದಿಗೂ ಉಂಟಾಗುವುದಿಲ್ಲ. ಈ ಉತ್ತಮಗುಣಗಳಾವ ಮನುಷ್ಯರಲ್ಲಿ ಇರುವುದಿಲ್ಲವೋ ಅವರ ಸಂತತಿಯು ಉನ್ನತಿಯನ್ನೂ ತೇಜಸ್ಸನ್ನೂ ಪಡೆವುದಿಲ್ಲ. ಹುಲ್ಲುಕೂಡ ಹುಟ್ಟದೆ ಇರುವ ಚೌಳು ಭೂಮಿಯಲ್ಲಿ ಸಿಹಿ ಮಾವಿನಗಿಡ ಬೆಳವುದುಂಟೊ ?

ಇದೇ ಪ್ರಕಾರ ತಾಯಿ ತೇಜೋರಹಿತಳಾಗಿದ್ದರೆ ಅವರ ಮಕ್ಕಳಿಗೆ ತೇಜಸ್ಸು ಎಲ್ಲಿಂದ ಬಂದೀತು? "ಗರ್ಭೋತ್ಪತ್ತಿಯ ಕಾಲದಲ್ಲಿ ಸ್ತ್ರೀಪುರುಷರ ಆಕೃತಿಯೂ ಮನೋಭಾವವೂ ಆವ ಮೇರೆಗೆ ಇರುತ್ತವೆಯೋ ಅದರಂತೆಯೇ ಅವರ ಮಕ್ಕಳಿಗೂ ಇರುತ್ತವೆ" ಎಂದು ವೈದ್ಯ

ಶಾಸ್ತ್ರದಲ್ಲಿ ಹೇಳಿ ಇದ್ದಾರೆ. ಮನುಷ್ಯನ ಮನಸ್ಸಿನಲ್ಲಿ ಆಯಾ ಕಾಲದಲ್ಲಿ ಹುಟ್ಟುವ ಭಾವನೆಯನ್ನು ಅನುಸರಿಸಿ ಅವನ ಶರೀರಕ್ರಿಯೆ ನಡೆವಂತೆಯೇ, ಸಂತಾನೋತ್ಪತ್ತಿಯೂ ಭಾವನೆಯನ್ನನುಸರಿಸಿ ಆಗು ವುದರಲ್ಲಿ ಆಶ್ಚರ್ಯಕರವಾದುದು ಏನೂ ಇಲ್ಲ. ಇದಕ್ಕೆ ನಮ್ಮ ದೇಶದ ಈಗಿನ ಸ್ಥಿತಿಯೇ ಪ್ರಮಾಣವಾಗಿದೆ. ಈ ದೇಶದ ಪುರುಷರ ಮನಸ್ಸಿ ನಲ್ಲಿ ಸ್ತ್ರೀಯರ ವಿಷಯದಲ್ಲಿ ನೀಚಭಾವವು ತುಂಬಿ ಇರುವುದರಿಂದ ಅವರು ಸ್ತ್ರೀಯರಲ್ಲಿ ಧಾರಾಳವಾದ ಅಂತಃಕರಣವನ್ನು ಇಡದೆ, ಅಂತ ರ್ಯದಲ್ಲಿ ಕಪಟವನ್ನು ಇಟ್ಟುಕೊಂಡು, ಹೊರಗೆಮಾತ್ರ ಸ್ನೇಹಭಾವ ವನ್ನು ತೋರಿಸುತ್ತಾರೆ. ಪುರುಷರ ಇಂಥ ನಡತೆಯಿಂದ ಸ್ತ್ರೀಯರ ಮನಸ್ಸು ಕೂಡ ಚೆನ್ನಾಗಿರುವುದಿಲ್ಲ. ಸರ್ವದಾ ಜ್ಞಾನಶೂನ್ಯರಾಗಿ ದಾಸ್ಯವೃತ್ತಿಯಲ್ಲಿ ಇರುವುದರಿಂದ, ಅವರ ಚಿತ್ತವು ಮಲಿನವಾಗಿಯೂ, ಉತ್ಸಾಹಹೀನವಾಗಿಯೂ, ತೇಜೋಹೀನವಾಗಿಯೂ, ಅಸತ್ಯಪರಾಯಣ ವಾಗಿಯೂ ಇರುತ್ತದೆ. ಇಂಥ ಮಲಿನವಾದ ಚಿತ್ತದಲ್ಲಿ ಧರ್ಮವಾಸನೆ ಯೂ ಈಶ್ವರಪ್ರೇಮವೂ ಸತ್ಸಾಹಸವೂ ಇರುವುದೇ ಇಲ್ಲ. ಇಂಥ ನೀಚಸ್ವಭಾವದ ತಂದೆತಾಯಿಗಳ ಕೈಯಲ್ಲಿ ಶಿಕ್ಷಿತರಾದ ಮಕ್ಕಳು ಎಷ್ಟುಮಟ್ಟಿಗೆ ಅಭಿವೃದ್ಧಿಗೆ ಬರಬಹುದೋ ಅದನ್ನು ನಾನು ಹೇಳತಕ್ಕ ಪ್ರಸ್ತುತವಿಲ್ಲ. ಮಕ್ಕಳು ತಂದೆಗಿಂತ ತಾಯಿಯ ಸಮೀಪದಲ್ಲಿಯೇ ಹೆಚ್ಚುಕಾಲ ಇರುವುದರಿಂದ ಆಕೆಯ ಗುಣಗಳನ್ನೇ ಬಹಳವಾಗಿ ಕಲಿ ಯುತ್ತವೆ. ಆದುದರಿಂದ ಸ್ತ್ರೀಯರ ಯೋಗ್ಯತೆಯನ್ನು ಅನುಸರಿಸಿ ಅವರ ಮಕ್ಕಳ ಯೋಗ್ಯತೆಯೂ ಇರುತ್ತದೆ ಎಂಬ ವಿಷಯದಲ್ಲಿ ಸಂಶ ಯಪಡಕೆಲಸವಿಲ್ಲ. ನಮ್ಮ ದೇಶದಲ್ಲಿ ಸ್ವದೇಶಾಭಿಮಾನಿಗಳೆಂಬ ಜನರು "ನಮ್ಮ ದೇಶವು ಭಾಗ್ಯಹೀನವಾಗಿದೆ; ಇದನ್ನು ಉದ್ಧಾರಮಾಡಬೇಕು; ಇದಕ್ಕಾಗಿ ಜನರು ಕುಶಲತೆಯನ್ನು ಕಲಿಯಬೇಕು; ಪೂರ್ವದಲ್ಲಿ ನಮ್ಮ ವರು ಪರಾಕ್ರಮಿಗಳಾಗಿಯೂ ಸ್ವಾಧೀನರಾಗಿಯೂ ಇದ್ದರು; ನಾವು ಪರಾವಲಂಬಿಗಳಾಗಿ ಇದ್ದೇವೆ; ಇದನ್ನು ತಪ್ಪಿಸುವುದಕ್ಕಾಗಿ ಸರ್ವರೂ ಒಂದೇ ಮನಸ್ಸಿನಿಂದ ಪ್ರಯತ್ನಮಾಡಬೇಕು" ಎಂದು ಮೇಘದಂತೆ ಗಂಭೀರವಾದ ಧ್ವನಿಯಿಂದ ಮಾತನಾಡುತ್ತಾರೆ. ಇದರಿಂದ ಏನೂ ಆಗುವುದಿಲ್ಲ; ಎಲ್ಲವೂ ಮಾತಿನಲ್ಲಿಯೇ ಪರ್ಯವಸಾನವಾಗುತ್ತದೆ. ಇಂಥ

ಮಾತುಗಳನ್ನು ಕೇಳಿದವರು ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿಯಿಂದ ಬಿಟ್ಟುಬಿಡುತ್ತಾರೆ; ಅಥವಾ ಒಂದೆರಡು ಮಾತುಗಳು ತಮ್ಮ ಮೈಮೇಲೆ ಎಲ್ಲಿಯಾದರೂ ಅಂಟಿಕೊಂಡಾವೆಂಬ ಭಯದಿಂದ ಲೋ ಎಂಬ ಹಾಗೆ ಬಟ್ಟೆಗಳನ್ನು ಕೊಡವಿಕೊಂಡು ತಮ್ಮತಮ್ಮ ಮನೆಗೆ ಹೊರಟುಹೋಗುತ್ತಾರೆ. ನಾಲ್ಕು ಜನರು ಸೇರಿದಕೂಡಲೇ ಉಮೇದವಾರ್ ಕಚೇರಿಯವರಂತೆ ದೊಡ್ಡದೊಡ್ಡ ಆಲೋಚನೆಯ ಮಾತುಗಳನ್ನು ಆಡಿ ಕಾಲವನ್ನು ಕಳೆಯುತ್ತಾರೆಯೇ ಹೊರತು, ಆಡಿದಂತೆ ಒಂದುಕೆಲಸವನ್ನೂ ನಡೆಸುವುದಿಲ್ಲ. ತಮ್ಮ ತಾಯಿತಂದೆಗಳಿಂದ ಸಂಪಾದಿಸಿಕೊಂಡ ಅಧೀರಪ್ರಕೃತಿ ಇರುವಲ್ಲಿ, ಅವರಿಗೆ ಧೈರ್ಯ, ಕರ್ತವ್ಯ, ಬುದ್ಧಿ ಮೊದಲಾದ ಸದ್ಗುಣಗಳು ಎಲ್ಲಿಂದ ಬಂದಾವು? ಮೇಲೆ ಹೇಳಿದಂತೆ ಬಾಯಿಯಲ್ಲಿಮಾತ್ರ ಆಡುತ್ತಾರೆಯೇ ಹೊರತು ಮನಃಪೂರ್ವಕವಾಗಿ ಆಡುವುದಿಲ್ಲ. ಇಂಗ್ಲೀಷ್ ಜನರ ನಡತೆಯನ್ನು ನೋಡಿ, ಅವರ ಪುಸ್ತಕಗಳನ್ನೂ ವರ್ತಮಾನಪತ್ರಗಳನ್ನೂ ಓದಿ, ಆಡುವ ಮಾತು ಎಲ್ಲಿಯವರೆಗೆತಾನೇ ನಿಂತೀತು? ಇವರು 'ನಮ್ಮ ಪೂರ್ವಿಕರು ದೊಡ್ಡವರಾಗಿದ್ದರು' ಎನ್ನುತ್ತಾರೆ. ಅದು ನಿಜ! ಯಾರುತಾನೆ ಅಲ್ಲವೆನ್ನುತ್ತಾರೆ! ಅವರು ಏಳು ತಾಳೇಮರದ ಉದ್ದವಿದ್ದರು! ಅವರಿಂದ ನಿಮಗೆ ಬಂದ ಭಾಗ್ಯವೇನು? ಅವರಿಗೆ ಸದೃಶವಾದ ಗುಣ ನಿಮ್ಮಲ್ಲಿ ಇಲ್ಲದ ಮೇಲೆ ವಂಶಕ್ಕೆ ಅಪಕೀರ್ತಿ ತರುವಂಥ ನೀವು ಅಂಥ ವಂಶದಲ್ಲಿ ಯಾಕೆ ಹುಟ್ಟಿದಿರಿ? ನಿಮ್ಮ ಪೂರ್ವಿಕರು ದೀಪದಂತೆ ಲೋಕದಲ್ಲಿ ತಮ್ಮಗುಣ ಪ್ರಕಾಶವನ್ನು ಉಂಟುಮಾಡಿ ಹೋದರು. ನಿಮ್ಮ ಜನ್ಮಭೂಮಿಯ ಮುಖವನ್ನು ಕಪ್ಪುಮಾಡುವುದಕ್ಕಲ್ಲವೆ ನೀವು ಕಾಡಿಗೆಯಂತೆ ಅವರ ಹೊಟ್ಟೆಯಲ್ಲಿ ಹುಟ್ಟಿದುದು? ನಿಮ್ಮ ಪೂರ್ವಿಕರು ತಮ್ಮ ಸ್ತ್ರೀಯರನ್ನು ಆ ಕಾಲದಲ್ಲಿ ದಾಸಿಯರಂತೆ ಎಣಿಸದೆ ಇದ್ದ ಕಾರಣ ಅಷ್ಟು ತೇಜಸ್ವಿಗಳಾಗಿದ್ದರು. ಅವರು ತಮ್ಮ ಸ್ತ್ರೀಯರಿಗೆ ಜ್ಞಾನೋಪದೇಶವನ್ನು ಮಾಡಿ ಅವರಲ್ಲಿ ತೇಜಸ್ಸನ್ನುಂಟುಮಾಡುತ್ತಿದ್ದರು. ಅವರು ಸ್ತ್ರೀಯರನ್ನು ಅಲಕ್ಷ್ಯಮಾಡಿ ತಮ್ಮ ಮನಸ್ಸಿಗೆಬಂದಂತೆ ಆಚರಿಸುತ್ತಿರಲಿಲ್ಲ. ಸ್ತ್ರೀಯರ ಮರ್ಯಾದೆಯನ್ನು ಕಾಪಾಡುತ್ತಿದ್ದರು. ಆದುದರಿಂದ ಆ ಕಾಲದ ಸ್ತ್ರೀಯರು ಗುಣವಂತೆಯರಾಗಿ ಬಡತನದಲ್ಲಿಯೂ ರಾಜ

ಸ್ತ್ರೀಯರಂತೆ ಸುಖವಾಗಿದ್ದರು. ಅವರಿಂದ ಶಿಕ್ಷಿತರಾದ ಅವರ ಮಕ್ಕಳು ಕೂಡ ತೇಜಸ್ವಿಗಳಾಗಿಯೂ, ಧಾರ್ಮಿಕರಾಗಿಯೂ, ಸತ್ಯಪ್ರತಿಜ್ಞರಾಗಿಯೂ ಇರುತ್ತಿದ್ದರು. ಈಗ ನಮ್ಮ ದೇಶವನ್ನು ತಿರುಗಿ ಉನ್ನತಿಗೆ ತರಬೇಕೆಂಬ ಅಪೇಕ್ಷೆಯುಳ್ಳವರು ಸ್ವಾರ್ಥಬುದ್ಧಿಯನ್ನು ಬಿಡಬೇಕು ; ಸ್ತ್ರೀಯರಲ್ಲಿ ಸದ್ಗುಣಗಳು ಉಂಟಾಗುವಂತೆ ಮಾಡಬೇಕು. ಹೀಗೆ ಮಾಡುವುದರಿಂದ ಸ್ತ್ರೀಯರು ಉತ್ಸಾಹಿಗಳಾಗಿಯೂ ತೇಜಸ್ವಿಗಳಾಗಿಯೂ ಆಗುತ್ತಾರೆ. ಅವರ ಮಕ್ಕಳು ಸಹ ಆ ಸ್ತ್ರೀಯರ ಸದ್ಗುಣವನ್ನೂ ಸ್ವಭಾವವನ್ನೂ ಅನುಸರಿಸಿ, ಯೌವನದಲ್ಲಿ ದೃಢಪ್ರತಿಜ್ಞರಾಗಿಯೂ, ಧೈರ್ಯಶಾಲಿಗಳಾಗಿಯೂ, ಕರ್ತವ್ಯನಿಷ್ಠರಾಗಿಯೂ ಆಗುತ್ತಾರೆ. ಇಂಥವರ ಯತ್ನದಿಂದ ಈ ದೇಶಕ್ಕೆ ಮರ್ದಶೆಹೋಗಿ ಭಾಗ್ಯವುಂಟಾದೀತೇ ಹೊರತು ಅವರೆಗೂ ಸಾಸಿರಾರು ಸಭೆಯವರು ಸೇರಿ ಮಾತನಾಡುತ್ತಿದ್ದರೂ ಅದರಿಂದ ಏನೂ ಆಗುವುದಿಲ್ಲ. ಗಿಡದ ಬೇರನ್ನು ಕಡಿಯುತ್ತಿದ್ದು ಅದರ ತಲೆಯಮೇಲೆ ನೀರನ್ನು ಹಾಕುತ್ತಿದ್ದರೆ ಆ ಗಿಡ ಬದುಕಿ ಅಭಿವೃದ್ಧಿಯಾದೀತೆ? ಇದೂ ಹಾಗಿರಲಿ; ಪ್ರಕೃತ ವಿಷಯವನ್ನು ನೋಡೋಣ. ನಮ್ಮಲ್ಲಿ ಹೆಂಗಸರಿಗೆ ಮಕ್ಕಳ ಪೋಷಣೆಯನ್ನು ಹೇಗೆ ಮಾಡಬೇಕೋ ಅದು ತಿಳಿಯದೆ ಇರುವುದರಿಂದ ಮೊದಲಿಂದಲೂ ಮಕ್ಕಳ ದೇಹಸ್ಥಿತಿಯನ್ನು ಕೆಡಿಸಿಬಿಡುತ್ತಾರೆ. ಆದಕಾರಣ ತಿಳುವಳಿಕೆಯುಳ್ಳ ಸ್ತ್ರೀಯರು ಈ ವಿಷಯದಲ್ಲಿ ಜಾಗರೂಕರಾಗಿ ಇರಬೇಕು.

ಮಕ್ಕಳೊಂದಿಗರಾದ ಸ್ತ್ರೀಯರು ಮುಖ್ಯವಾಗಿ ಆತ್ಮಸಂಯಮನವನ್ನು ಮಾಡಬೇಕು. ಅವರು ಹೆಚ್ಚಾಗಿ ಊಟಮಾಡಬಾರದು ; ತಂಗಳನ್ನೂ ಬಹಳ ಕಾರವಾಗಿರುವ ಪದಾರ್ಥಗಳನ್ನೂ ಊಟಮಾಡಬಾರದು. ಇಂಥ ಅಪಥ್ಯಕಾರಿಗಳಾದ ಪದಾರ್ಥಗಳನ್ನು ಊಟಮಾಡುವುದರಿಂದ ಸ್ತನ್ಯವು ಕೆಟ್ಟು, ಅದು ಮಗುವಿನ ಹೊಟ್ಟೆಗೆ ಸೇರುವುದರಿಂದ ಮಗುವಿಗೆ ಅಜೀರ್ಣವಾಗಿ, ಅದರಿಂದ ನಾನಾ ಪ್ರಕಾರವಾದ ರೋಗಗಳು ಹುಟ್ಟುತ್ತವೆ. ಮನುಷ್ಯರು ಊಟಮಾಡುವ ಪದಾರ್ಥವು ಹೊಟ್ಟೆಯಲ್ಲಿ ಪಚನವಾಗಿ ರಕ್ತವಾಗುತ್ತದೆ. ಆ ರಕ್ತವು ಅವಯವದಲ್ಲೆಲ್ಲಾ ವ್ಯಾಪಿಸಿ ಶರೀರವನ್ನು ಪೋಷಿಸುತ್ತದೆ. ಅಪಥ್ಯಕಾರಿಯಾದ ಪದಾರ್ಥಗಳನ್ನು ತಿಂದರೆ, ಜಠರಾಗ್ನಿ ಮಂದವಾಗಿ, ಆ ಪದಾರ್ಥಗಳು ಪಚನವಾ

ಗುವುದಿಲ್ಲ. ಅದರಿಂದ ಎಲ್ಲಾ ಅವಯವಗಳ ವ್ಯಾಪಾರವೂ ಕೆಟ್ಟು ರೋಗವುಂಟಾಗುವುದು. ಎಳೆಯ ಮಕ್ಕಳ ಜೀರ್ಣಶಕ್ತಿಯು ಕಡಿಮೆಯಾಗಿರುವುದರಿಂದ ಆಹಾರದಲ್ಲಿ ಸ್ವಲ್ಪ ಹೆಚ್ಚು ಕಡಮೆಯಾದಾಗ್ಯೂ ಪ್ರಬಲವಾದ ರೋಗಗಳು ಉಂಟಾಗುತ್ತವೆ. ಮಕ್ಕಳ ರೋಗಕ್ಕೆ ಔಷಧವನ್ನು ಕೊಡುವುದು ಸುಲಭವಲ್ಲ. ಆದುದರಿಂದ ರೋಗಗಳು ಬಾರದಂತೆ ಪಥ್ಯವಾಗಿರಬೇಕು. ಕೆಲವು ಸ್ತ್ರೀಯರಿಗೆ ಸಣ್ಣ ಸಣ್ಣ ರೋಗಗಳಿಗಾವ ಔಷಧಗಳನ್ನು ಕೊಡಬೇಕೋ ತಿಳಿಯದೆ ಬಜೆ, ಅಕ್ಕಲಕರೆ, ಚಿರಾಯಿತ ಮುಂತಾದ ಮನಸ್ಸಿಗೆ ಬಂದ ಜಿನಸು ಹಾಕಿ ಔಷಧವನ್ನು ಮಾಡಿ ಕೊಟ್ಟು ಮಕ್ಕಳನ್ನು ವ್ಯಥೆಪಡಿಸುತ್ತಾರೆ. ಸಣ್ಣ ರೋಗಗಳಿಗೆ ಬಲವಾದ ಔಷಧಗಳನ್ನು ಕೊಡಬಾರದು. ಕೆಲವು ರೋಗಗಳು ತಾವಾಗಿಯೇ ಉಪಶಮವಾಗುತ್ತವೆ. ಸಾಧಾರಣವಾದ ರೋಗಗಳಿಗೆ ಮಾಡತಕ್ಕ ಉಪಾಯಗಳನ್ನು ತಿಳಿದುಕೊಂಡು ಅದರಂತೆ ನಡಿಸಬೇಕು. ತಮಗೆ ತಿಳಿಯದೆ ಇರುವ ಸಂಗತಿಯನ್ನು ಪ್ರಾಜ್ಞರಾದ ವೈದ್ಯರಿಂದ ತಿಳಿದು, ಅವರು ಹೇಳಿದಂತೆ ಚಿಕಿತ್ಸೆಯನ್ನು ಮಾಡಬೇಕು. ಅನೇಕರು ಕಂಡಕಂಡವರ ಹೇಳಿಕೆಯಂತೆ ನಾನಾ ಪ್ರಕಾರವಾದ ಚಿಕಿತ್ಸೆಗಳನ್ನು ಮಾಡುತ್ತಾರೆ. ಇನ್ನೂ ಕೆಲವರು, ಬೀದಿಯಲ್ಲಿ ಕೂಗಿಕೊಂಡು ಹೋಗುವವರಲ್ಲಿ ಅಗ್ಗವಾಗಿ ದೊರೆವ ಉಪದ್ರವಕಾರಿಗಳಾದ ಪದಾರ್ಥಗನ್ನು ಔಷಧಗಳೆಂದು ನಂಬಿ ಮಕ್ಕಳಿಗೆ ತಿನ್ನಿಸುತ್ತಾರೆ. ಇಂಥ ನಡೆತೆಯಿಂದ ಪ್ರಾಯೇಣ ಬಹಳ ತೊಂದರೆಗಳು ಉಂಟಾಗುತ್ತವೆ. ಬುದ್ಧಿಶಾಲಿಗಳಾದ ಸ್ತ್ರೀಯರು ಹೀಗೆ ಮಾಡುವುದು ಯುಕ್ತವಲ್ಲ. ಹರಿಕೆ ಮಾಡಿಕೊಳ್ಳುವುದು, ತಾಯಿತಿ ಕಟ್ಟುವುದು, ಯಾರಾದರೂ ಯೋಗೀಶ್ವರರೆಂದು ಬಂದರೆ ಅವರ ಕಡೆಯಿಂದ ಮಂತ್ರ ಹಾಕಿಸುವುದು, ಭಸ್ಮ ಹಚ್ಚಿಸುವುದು, ಇಂಥದನ್ನೆಲ್ಲ ಮಾಡುತ್ತಾರೆ. ಇದರಿಂದ ಏನೂ ಪ್ರಯೋಜನವಿಲ್ಲ. ಮಕ್ಕಳಿಗೆ ಆಗಾಗ್ಗೆ ಸ್ವಲ್ಪ ಎಣ್ಣೆಯನ್ನು ಹಚ್ಚಿ ಹದವಾದ ಬಿಸಿನೀರಿನಿಂದ ತೊಳವುದು ಒಳ್ಳೆಯದು ; ಎಣ್ಣೆಯನ್ನು ಬಹಳವಾಗಿ ಹಚ್ಚಿದರೆ ತೊಳವುದಕ್ಕೆ ಶ್ರಮವಾಗಿ ಅದರ ಶೇಷ ಮೈಯ ಮೇಲೆ ನಿಂತರೆ ಬೆವರು ಹೊರಡುವ ದಾರಿ ಮುಚ್ಚಿ ಹೋಗುತ್ತದೆ. ಮಕ್ಕಳ ಕಣ್ಣಿಗೆ ಎಣ್ಣೆ ಹಾಕುವುದು ಉಂಟು. ಇದರಿಂದ ಕಣ್ಣಿ

ನಿಂದ ನೀರು ಹೊರಟು ಕಣ್ಣು ನಿರ್ಮಲವಾಗುತ್ತದೆಂದು ಕೆಲವರು ಹೇಳುತ್ತಾರೆ. ಪರಂತು ಇದರಿಂದ ಮಕ್ಕಳು ಅಳುವುದು ಹೊರತು ಬೇರೆ ಪ್ರಯೋಜನ ಕಾಣುವದಿಲ್ಲ. ಕೆಲವರು ಮಕ್ಕಳು ಎಷ್ಟು ಅತ್ತಾಗ್ಯೂ ಬಿಡದೆ ಮೈಯನ್ನು ತಿಕ್ಕಿ ತಿಕ್ಕಿ ನೋಯಿಸುತ್ತಾರೆ; ಬಿಸಿ ಬಿಸಿಯಾಗಿರುವ ನೀರನ್ನು ಹಾಕುತ್ತಾರೆ. ಎಳೆಯ ಮಕ್ಕಳನ್ನು ಈ ಪ್ರಕಾರ ನೋಯಿಸಬಾರದು. ಮೈಯನ್ನು ಮೆತ್ತಗೆ ತಿಕ್ಕಿ ಬಹಳ ಬಿಸಿಯಿಲ್ಲದ ಹದವಾದ ನೀರನ್ನು ಹಾಕಿದರೆ ಮಕ್ಕಳು ಉಲ್ಲಾಸದಿಂದ ಇರುತ್ತವೆ. ಅವುಗಳ ಅವಯವದ ಯಾವ ಭಾಗದಲ್ಲಿಯೂ ಕೊಳೆಯಿಲ್ಲದಂತೆ ನೋಡಿಕೊಳ್ಳಬೇಕು. ಮಕ್ಕಳನ್ನು ಬಹಳ ಹೊತ್ತು ನೀರಿನಲ್ಲಿ ಇರಗೊಡಬಾರದು. ಅವುಗಳ ಬಟ್ಟೆಗಳು ಬಹಳ ನಿರ್ಮಲವಾಗಿ ಇರಬೇಕು. ಪ್ರಾಯೇಣ ಎಲ್ಲ ಸ್ತ್ರೀಯರಿಗೂ ತಮ್ಮ ಮಕ್ಕಳ ಮೈಯ ಮೇಲೆ ಒಡವೆಗಳನ್ನಿಟ್ಟು ಅಲಂಕಾರ ಮಾಡಬೇಕೆಂಬ ಆಶೆ ಬಹಳವಾಗಿ ಇರುತ್ತದೆಯೇ ಹೊರತು ಮಕ್ಕಳ ಶರೀರವನ್ನೂ ಬಟ್ಟೆಗಳನ್ನೂ ನಿರ್ಮಲವಾಗಿಡುವುದರಲ್ಲಿ ಅಷ್ಟು ಆಶೆ ಇರುವುದಿಲ್ಲ. ಅಜ್ಞಾನಾವಸ್ಥೆಯಲ್ಲಿ ಮಕ್ಕಳ ಮೈಮೇಲೆ ಒಡವೆಗಳನ್ನು ಹಾಕುವುದರಿಂದ ಅನೇಕ ಅನರ್ಥಗಳು ನಡೆಯುತ್ತವೆ. ಆದಕಾರಣ ಒಡವೆ ಹಾಕುವುದನ್ನು ಬಿಟ್ಟು ಮಕ್ಕಳ ಶರೀರವೂ ಬಟ್ಟೆಗಳೂ ಸ್ವಚ್ಛವಾಗಿರುವಂತೆ ತಾಯಿಗಳು ನೋಡಿಕೊಳ್ಳಬೇಕು. ಮಕ್ಕಳು ಹಾಸಿಗೆಯ ಮೇಲೆ ಜಲಮಲ ವಿಸರ್ಜನೆಯನ್ನು ಮಾಡಿ, ಅದರ ಶೀತ ಮೈಗೆ ತಗಲಿದ ಕೂಡಲೇ ಅಳುತ್ತವೆ. ಆ ಬಟ್ಟೆಯನ್ನು ಕೂಡಲೆ ತೆಗೆದು ಬೇರೆ ಬಟ್ಟೆಗಳನ್ನು ಹಾಕಬೇಕು. ಮಕ್ಕಳ ಹೊಲಸು ಬಟ್ಟೆಗಳನ್ನು ನಿತ್ಯವೂ ಒಗೆಯಬೇಕು.

ಕೆಲವರು ಮಕ್ಕಳು ಅತ್ತ ಕೂಡಲೇ ಅವು ಏಕೆ ಅಳುತ್ತವೆ ಎಂದು ವಿಚಾರ ಮಾಡದೆ ಪದೇಪದೇ ಸ್ತನ್ಯವನ್ನು ಕೊಡುತ್ತಾರೆ. ಇದರಿಂದ ಮಕ್ಕಳಿಗೆ ಅಜೀರ್ಣವಾಗುತ್ತದೆ. ಆದಕಾರಣ ಮಕ್ಕಳಿಗೆ ಸ್ತನ್ಯಪಾನ ಮಾಡಿಸುವುದಕ್ಕೆ ಹೊತ್ತನ್ನು ಗೊತ್ತು ಮಾಡಬೇಕು. ಎರಡು ಘಂಟೆಯೊಳಗಾದರೂ, ತಿರುಗಿ ಹಾಲನ್ನು ಕುಡಿಸಬಾರದು. ಹೀಗೆ ಹೊತ್ತನ್ನು ಗೊತ್ತು ಮಾಡಿಕೊಂಡು ಹಾಲನ್ನು ಕುಡಿಸುವುದರಿಂದ ಕಾಲಕಾಲಕ್ಕೆ ಹಸಿವೆಯಾಗಿ ಅವು ಆರೋಗ್ಯವಾಗಿ ಇರುತ್ತವೆ. ಈ ನಡು

ವೆ ಪ್ರನಃ ಅತ್ತರೆ ಹೊಟ್ಟೆ ಹಸಿವಿನಿಂದಲ್ಲ; ಅಳುವುದಕ್ಕೆ ಇನ್ನೇನೋ ಕಾರಣ ವುಂಟೆಂದು ಯೋಚಿಸಿ ತಿಳಿದು ಅದರ ನಿವಾರಣೆಯನ್ನು ಮಾಡ ಬೇಕು. ಮಕ್ಕಳು ಅಳುವುದಕ್ಕೆ ಹೊಟ್ಟೆ ಹಸಿವೆ ಒಂದೇ ಕಾರಣ ವಲ್ಲ. ಮಕ್ಕಳು ಸ್ವಸ್ಥವಾಗಿ ನಿದ್ರೆ ಮಾಡಲೆಂದು ಕೆಲವು ಸ್ತ್ರೀಯರು ಅಫೀಮು ಹಾಕುವುದುಂಟು. ಇದರಿಂದ ಅತಿಭಯಂಕರವಾದ ಪರಿ ಣಾಮಗಳುಂಟಾಗುತ್ತವೆ. ಮತ್ತನ್ನು ಉಂಟುಮಾಡುವ ಪದಾರ್ಥಗ ಳನ್ನು ಚಿಕ್ಕತನದಲ್ಲಿ ತಿನ್ನಲಿಕ್ಕೆ ಕಲಿತ ಅಭ್ಯಾಸವು ಬೇಗ ಬಿಡುವುದಿಲ್ಲ. ಅಫೀಮನ್ನು ಹಾಕುವುದರಿಂದ ಮಕ್ಕಳಿಗೆ ಅಮಲು ಉಂಟಾಗಿ ಅವುಗ ಳು ಸುಸ್ತಿನಿಂದ ಸುಮ್ಮನೆ ಬಿದ್ದಿರುತ್ತವೆ. ಹೀಗೆ ಮಾಡುವುದರಿಂದ ಮಕ್ಕಳ ಸ್ವಾಭಾವಿಕವಾದ ಚಪಲತೆ ನಿಂತು ಹೋಗಿ, ಜೀರ್ಣಶಕ್ತಿಯೂ ಕಡಿಮೆಯಾಗಿ, ನಾನಾವಿಧಗಳಾದ ರೋಗಗಳು ಹುಟ್ಟುತ್ತವೆ. ಮಕ್ಕಳ ಶರೀರದ ವ್ಯಾಪಾರಗಳು ಸರಿಯಾಗಿ ನಡೆವಂತೆ ಅವಕಾಶ ಕೊಡಬೇಕು. ಮಕ್ಕಳಿಗೆ ನಿದ್ರೆ ಬಂದಾಗ ಮಲಗಿಸಬೇಕು; ಹಸಿವೆಯಾದಾಗ ಹೊಟ್ಟೆ ಗೆ ಕೊಡಬೇಕು. ಮಲಗಿದ್ದ ಮಕ್ಕಳನ್ನು ಅವೇಳೆಯಲ್ಲಿ ಎಬ್ಬಿಸಿ ತಿನ್ನ ಲಿಕ್ಕೆ ಕೊಡಬಾರದು. ಮಕ್ಕಳು ಕೈಗೆ ಸಿಕ್ಕಿದ ಮಣ್ಣು ಮುಂತಾ ದುದನ್ನು ತಿನ್ನುವುದಕ್ಕೆ ಯತ್ನಿಸುತ್ತವೆ; ಇದರಿಂದ ಹೊಟ್ಟೆಯಲ್ಲಿ ಜಂ ತುಗಳು ಹೆಚ್ಚುತ್ತವೆ. ಆದುದರಿಂದ ಮಣ್ಣು ಮುಂತಾದುದು ಅವು ಗಳ ಕೈಗೆ ಸಿಕ್ಕದಂತೆ ನೋಡಿಕೊಳ್ಳಬೇಕು. ತಾಯಿ ತನ್ನ ಮಗುವ ನ್ನು ಸರ್ವದಾ ತನ್ನ ಕಣ್ಣೆದುರಿಗೆ ಇಟ್ಟುಕೊಂಡಿರಬೇಕು. ಮಕ್ಕಳ ಶರೀರಸ್ಥಿತಿ ಕೆಡದಂತೆ ಅವುಗಳ ಆಚರಣೆಯನ್ನೂ ತಮ್ಮ ಆಚರಣೆಯ ನ್ನೂ ಇಟ್ಟುಕೊಂಡಿರಬೇಕು. ಮಕ್ಕಳು ಆರೋಗ್ಯವಾಗಿರುವುದಕ್ಕೆ ನಾಲ್ಕು ಮುಖ್ಯಸಾಧನಗಳುಂಟು. ಅವು ಯಾವುವೆಂದರೆ.—

(೧) ಶರೀರದ ಕೊಳೆಯನ್ನು ಆಗಾಗ್ಗೆ ತೊಳೆಯದೆ ಇದ್ದರೆ ಕಜ್ಜಿ, ಇಸಬು ಮುಂತಾದ ಚರ್ಮರೋಗಗಳು ಉಂಟಾಗುತ್ತವೆ. ಆದುದರಿಂದ ಪ್ರತಿದಿನವೂ ನಿರ್ಮಲವಾಗಿ ತೊಳೆಯಬೇಕು. ನಿರ್ಮಲ ವಾದ ಬಟ್ಟೆಗಳನ್ನು ಹಾಕಬೇಕು. ಮಲಮೂತ್ರದಿಂದಲೂ ಬೆವರಿನಿಂದ ಲೂ ಎಣ್ಣೆಯಿಂದಲೂ ಮಲಿನವಾಗಿರುವ ಬಟ್ಟೆಗಳನ್ನು ಹಾಕಬಾರದು.

(೨) ನಿರ್ಮಲವಾದ ಗಾಳಿ ಯಿಲ್ಲದೆ ದುರ್ಗಂಧದಿಂದ ಕೂಡಿ, ವಾ

ಯು ಸಂಚಾರವಿಲ್ಲದ ಅತಿ ಸಂಕೋಚವಾದ ಕತ್ತಲೆಯ ಮನೆಯಲ್ಲಿ ಮಕ್ಕಳನ್ನು ಮಲಗಿಸಕೂಡದು. ಮನುಷ್ಯರ ಶರೀರದಿಂದ ಹೊರಕ್ಕೆ ಹೊರಡುವ ವಾಯುವು ವಿಷದ ಪರಮಾಣುಗಳಿಂದ ಕೂಡಿರುತ್ತದೆ. ಇಂಥ ವಾಯುವು ಉಚ್ಛ್ವಾಸದಿಂದ ಶರೀರಕ್ಕೆ ಪ್ರವೇಶಿಸಿದರೆ ಮಕ್ಕಳಿಗೆ ರೋಗ ಉಂಟಾಗುತ್ತದೆ. ಆದಕಾರಣ ನಿರ್ಮಲವಾದ ಗಾಳಿ ಬರುವ ಸ್ಥಳದಲ್ಲಿ ಇಟ್ಟಿರಬೇಕು. ದೊಡ್ಡವರಿಗಿಂತ ಮಕ್ಕಳಿಗೆ ನಿರ್ಮಲವಾದ ಗಾಳಿಯು ಅವಶ್ಯಕವಾಗಿ ಬೇಕಾಗಿರುವುದರಿಂದ, ಅವಕಾಶವಿದ್ದರೆ ಬೆಳಗ್ಗೆ ಸಾಯಂಕಾಲ ಬಯಲಲ್ಲಿಯಾಗಲಿ ತೋಟದಲ್ಲಿಯಾಗಲಿ ಮಕ್ಕಳನ್ನು ನಿರ್ಮಲವಾದ ಗಾಳಿಯಲ್ಲಿ ತಿರುಗಿಸಲಿಕ್ಕೆ ಕರೆದುಕೊಂಡು ಹೋಗಬೇಕು; ಇಲ್ಲವೇ ಯಾರ ಸಂಗಡಲಾದರೂ ಕಳುಹಿಸಬೇಕು.

(೩) ಹೊಟ್ಟೆಗೆ ಅನುಕೂಲವಾಗಿರುವ ಆಹಾರವನ್ನು ಕಾಲಕಾಲಕ್ಕೆ ಸಾಕಾದಷ್ಟು ಕೊಡಬೇಕು.

(೪) ಬುದ್ಧಿಯು ಅಭಿವೃದ್ಧಿಯಾಗುವುದಕ್ಕೋಸ್ಕರ ವೇಳೆವೇಳೆಗೆ ಸಾಕಾದಷ್ಟು ಹೊತ್ತು ನಿದ್ರೆ ಮಾಡಿಸಬೇಕು.

ಈ ಮೇರೆಗೆ ಮಕ್ಕಳನ್ನು ತಾಯಿಗಳು ಪೋಷಣೆ ಮಾಡಬೇಕು. ಈ ವಿಷಯದಲ್ಲಿ ತಮ್ಮ ಮನಸ್ಸಿಗೆ ಬಂದಂತೆಯೂ ವರ್ತಿಸಕೂಡದು; ಸಿಕ್ಕಿಸಿಕ್ಕಿದವರು ಹೇಳಿದಂತೆ ದಿವಸಕ್ಕೆ ಒಂದೊಂದು ವಿಧವಾಗಿಯೂ ನಡೆಯಬಾರದು. ಮಕ್ಕಳ ಸಂರಕ್ಷಣೆಯ ವಿಷಯದಲ್ಲಿ ತಿಳಿಯಬೇಕಾದ ಭಾಗಗಳನ್ನೆಲ್ಲ ತಿಳಿದುಕೊಂಡು ಅದರಂತೆ ನಡೆದುಕೊಳ್ಳಬೇಕು. ಮಕ್ಕಳನ್ನು ಪೋಷಣೆ ಮಾಡುವುದರಲ್ಲಿ ತಾಯಿಗೆ ಬಹಳ ಶ್ರಮವಾಗುತ್ತದೆ. ಆದಾಗ್ಯೂ ಈ ಕೆಲಸದಲ್ಲಿ ಸ್ವಲ್ಪವೂ ಹಾಲುಮಾರಬಾರದು. ಮಕ್ಕಳನ್ನು ಸಾಕತಕ್ಕದು ಒಂದು ವಿಧವಾದ ಸಾಲವನ್ನು ತೀರಿಸತಕ್ಕದೆಂದೆಣಿಸಿ ಆ ವಿಷಯದಲ್ಲಿ ತಮಗೆ ಯಾವ ಸುಖವಿಲ್ಲದಿದ್ದರೂ ಅದಕ್ಕಾಗಿ ಯೋಚನೆ ಮಾಡಬಾರದು. ನಮ್ಮನ್ನು ಬಾಲ್ಯದಲ್ಲಿ ಸಂರಕ್ಷಿಸಿದ ತಾಯಿತಂದೆಗಳ ಸಾಲವನ್ನು ನಾವು ತೀರಿಸುವುದಕ್ಕಾಗುವುದಿಲ್ಲ. ಆದರೆ ನಮ್ಮ ಕೈಯಲ್ಲಾದಮಟ್ಟಿಗೂ ಅವರ ಶುಶ್ರೂಷೆಯನ್ನು ಮಾಡುವುದರಿಂದಲೂ ನಮ್ಮ ಮಕ್ಕಳನ್ನು ನಾವು ಶ್ರಮಪಟ್ಟು ಪೋಷಿಸುವುದರಿಂದಲೂ ಸ್ವಲ್ಪಮಟ್ಟಿಗಾದರೂ ತಾಯಿ ತಂದೆಗಳ ಋಣವನ್ನು ತೀರಿಸಬಹುದು.

ಮಕ್ಕಳು ಬೆಳೆದ ಹಾಗೆಲ್ಲ ನಡೆ ನುಡಿಗಳನ್ನು ಕಲಿಯುತ್ತಾ ಹೋಗುತ್ತಾರೆ. ಆ ಕಾಲದಲ್ಲಿ ಅವರ ನಡತೆ ಒಳ್ಳೆಯದಾಗುವುದಕ್ಕಾಗಿ ತಾಯಿಗಳು ಜಾಗರೂಕತೆಯಿಂದ ನೋಡಿಕೊಳ್ಳಬೇಕು. ಮನುಷ್ಯನು ದೊಡ್ಡವನಾದಾಗ ಅವನಲ್ಲಿರುವ ಗುಣಕ್ಕನುಸಾರವಾಗಿ ಒಳ್ಳೆಯ ಫಲವಾಗಲಿ ಕೆಟ್ಟ ಫಲವಾಗಲಿ ಲಭಿಸುವುದು. ಬಾಲ್ಯದಲ್ಲಿ ಮಕ್ಕಳ ಹೃದಯವೆಂಬ ಭೂಮಿಯಲ್ಲಿ ಸದ್ಗುಣವೆಂಬ ಬೀಜವನ್ನು ಬಿತ್ತಿದರೆ, ಸದಾಚರಣೆಯೆಂಬ ಗಿಡ ಹುಟ್ಟಿ, ಅದರಿಂದ ಮಾನ, ಧನ, ವಿದ್ಯೆ, ಕೀರ್ತಿ, ಸುಖಗಳೆಂಬ ಫಲಗಳು ಕೈಸೇರುವುವು; ಬಾಲ್ಯದಲ್ಲಿ ದುರ್ಗುಣವೆಂಬ ಬೀಜವನ್ನು ಬಿತ್ತಿದರೆ ಅವಿವೇಕವೆಂಬ ಗಿಡವು ಹುಟ್ಟಿ, ಅದರಿಂದ ಉಂಟಾಗುವ ದುಃಖ, ಭಯ, ಅವಮಾನ, ದಾರಿದ್ರ್ಯ, ಪಾಪಗಳೆಂಬ ಫಲಗಳನ್ನು ಅನುಭವಿಸಬೇಕಾಗುವುದು.

ಬಾಲ್ಯಾವಸ್ಥೆಯೂ ಅದರ ಅಸ್ಫುಟವೃತ್ತಿಯೂ ಮಣ್ಣಿನ ಮುದ್ದೆಯಂತೆ ಇರುವುದರಿಂದ ಅವನ್ನು ಹೇಗೆ ಬೇಕಾದರೂ ತಿರುಗಿಸಬಹುದು. ಮನುಷ್ಯನು ಪ್ರಬುದ್ಧನಾದ ಮೇಲೆ ಗುಣದೋಷಗಳಿಂದ ಉಂಟಾಗುವ ಕೀರ್ತ್ಯವಮಾನಗಳಿಗೆ ಅವನು ಕಾರಣನಲ್ಲ. ಬಾಲ್ಯದಲ್ಲಿ ಅವನನ್ನು ಪೋಷಿಸಿ ನಡೆನುಡಿಗಳನ್ನು ಕಲಿಸಿ ಮಾರ್ಗಕ್ಕೆ ಹತ್ತಿಸಿದವರೇ ಕಾರಣರಾಗುತ್ತಾರೆ. ಮಕ್ಕಳು ಪ್ರಾಯಶಃ ಬಾಲ್ಯದಲ್ಲಿ ತಾಯಿಯ ಸಮೀಪದಲ್ಲಿ ಇರುವುದರಿಂದ ಅವಳಂತೆಯೇ ನಡೆನುಡಿಗಳನ್ನು ಕಲಿಯುತ್ತಾರೆ.

ಬಾಲ್ಯದಲ್ಲಿ ಮಕ್ಕಳ ಹೃದಯದಲ್ಲಿ ಸದ್ಗುಣಬೀಜವನ್ನು ಬಿತ್ತುವ ಕೆಲಸವು ಮುಖ್ಯವಾಗಿ ತಾಯಿಗೆ ಸೇರಿದುದು. ತಾಯಿ, ಮಕ್ಕಳ ದೋಷವನ್ನು ಬಾಲ್ಯದಲ್ಲಿಯೇ ನಿವಾರಣೆ ಮಾಡದಿದ್ದರೆ, ಅದರಿಂದುಂಟಾಗುವ ಘೋರವಾದ ಪರಿಣಾಮಕ್ಕೆ ಅವಳೇ ಕಾರಣಭೂತಳೆಂಬುದಕ್ಕೆ ಅನೇಕ ದೃಷ್ಟಾಂತಗಳಿವೆ. ಮಾತು ಕಲಿವುದಕ್ಕೆ ಉಪಕ್ರಮವಾಗಿ ಚೆನ್ನಾಗಿ ಸ್ವಬುದ್ಧಿಯುಂಟಾಗುವವರೆಗೂ ಮಕ್ಕಳಿಗೆ ಒಳ್ಳೆಯ ನಡತೆಯನ್ನು ಕಲಿಸತಕ್ಕುದು ತಾಯಿಗೆ ಮುಖ್ಯವಾದ ಕೆಲಸವು.

ತಾಯಿಯು ಮೊದಲು ತಾನು ಒಳ್ಳೆಯ ನಡತೆಯುಳ್ಳವಳಾಗಿ ಇರಬೇಕು; ಮನೆಯಲ್ಲಿರುವ ಇತರರ ಆಚರಣೆಯು ಚೆನ್ನಾಗಿರುವಂತೆ

ನೋಡಿಕೊಳ್ಳಬೇಕು. ನೆರೆಹೊರೆಯುವರಲ್ಲಿ ಬಳಕೆಯನ್ನು ಇಡಬೇಕಾದರೆ ಒಳ್ಳೆಯುವರ ಸಂಗಡಲೇ ಇಡಬೇಕು; ಅಸಭ್ಯರಾದವರ ಸಂಗಡ ಬಳಕೆಯನ್ನು ಮಾಡಬಾರದು. ತಾಯಿ ಮಾತನಾಡಿದಂತೆ ಮಕ್ಕಳು ಆಡುತ್ತಾರೆ. ತಾಯಿ ಎಂಥವರ ಸಂಗಡ ನಡತೆಯನ್ನು ಬಳಸುತ್ತಾಳೋ ಮಕ್ಕಳು ಸಹ ಅಂಥವರ ಸಂಗಡ ನಡತೆಯನ್ನು ಬಳಸುತ್ತಾರೆ. ಬಾಲ್ಯದಲ್ಲೇ ಮಕ್ಕಳಿಗೆ ಕೆಟ್ಟ ಸಹವಾಸ ಬಿದ್ದರೆ ಆಗ ಕಲಿತ ದುರ್ಬುದ್ಧಿಯು ಸ್ಥಿರವಾಗಿ ನಿಲ್ಲುತ್ತದೆ. ಪ್ರೌಢರಾದ ಮೇಲೆ ಈ ದುರ್ಬುದ್ಧಿಯನ್ನು ಬಿಡಬೇಕೆಂದು ಯತ್ನ ಮಾಡಿದರೂ ಆಗುವುದಿಲ್ಲ. ರಷ್ಯದೇಶದಲ್ಲಿ ಪೂರ್ವದಲ್ಲಿ ಪೀಟರ್ ದಿ ಗ್ರೇಟ್ ಎಂಬ ಒಬ್ಬ ಚಕ್ರವರ್ತಿಯಿದ್ದನು. ಅವನು ಆ ದೇಶಕ್ಕೆ ಅಗಣಿತವಾದ ಹಿತವನ್ನು ಉಂಟುಮಾಡಿದನು. ಆತನು ಸ್ವತಃ ಅನೇಕವಿದ್ಯೆಗಳನ್ನು ಕಲಿತು ಸಮಸ್ತದೇಶದ ಧೊರೆಗಳೂ ಅನುಕರಿಸುವುದಕ್ಕೆ ಯೋಗ್ಯವಾದ ನಡತೆಯನ್ನು ನಡೆದು, ಲೋಕದಲ್ಲಿ ಶಾಶ್ವತವಾದ ಕೀರ್ತಿಯನ್ನು ಸ್ಥಾಪಿಸಿದನು. ಆತನಿಗೆ ಸ್ವಭಾವತಃ ಒಳ್ಳೆಯ ಬುದ್ಧಿ ಯಿದ್ದಾಗ್ಯೂ, ಬಾಲ್ಯದಲ್ಲಿ ಒಳ್ಳೆಯ ಸಹವಾಸ ಸಿಕ್ಕದೆ ಇದ್ದುದರಿಂದ, ಆತನಲ್ಲಿ ಕಾಮಕ್ರೋಧಗಳು ಬಹು ಪ್ರಬಲವಾಗಿ ಇದ್ದುವು. ಅವುಗಳು ಉದ್ರೇಕವಾದಾಗ ಅದು ತನ್ನ ಪದವಿಗೆ ಅನುಚಿತವಾದುದೆಂದು ತಿಳಿದಿದ್ದಾಗ್ಯೂ, ಬಾಲ್ಯದ ಕೆಟ್ಟ ಸಹವಾಸದಿಂದ ತನಗೆ ಉಂಟಾಗಿದ್ದ ಆ ಕೆಟ್ಟ ನಡತೆಗಳನ್ನು ಎಷ್ಟು ಪ್ರಯತ್ನ ಪಟ್ಟಾಗ್ಯೂ, ಸಂಪೂರ್ಣವಾಗಿ ಬಿಡುವುದಕ್ಕೆ ಆಗುತ್ತಿರಲಿಲ್ಲ. ಅದಕ್ಕಾಗಿ ಅವನು ನನ್ನ ಬಾಲ್ಯದಲ್ಲಿ ಒಳ್ಳೆಯ ಸಹವಾಸವು ದೊರೆಯದೆ ಇದ್ದುದರಿಂದ ಈರೀತಿ ಆಯಿತೆಂದು ಪದೇ ಪದೇ ಪಶ್ಚಾತ್ತಾಪ ಪಡುತ್ತಾ ಇದ್ದನು. ಆತನಿಗೆ ಬಾಲ್ಯದಲ್ಲಿ ಒಳ್ಳೆಯ ಸಹವಾಸ ಮಾತ್ರ ಸಿಕ್ಕಿದ್ದರೆ ಅವನು ಸರ್ವಾಂಶದಲ್ಲಿಯೂ ನಿರ್ದೋಷಿಯಾಗಿ ದೇವರಂತೆ ಪೂಜಿಸಲ್ಪಡುತ್ತಿದ್ದನು. ಆದುದರಿಂದ ಹುಡುಗರು ಕೆಟ್ಟವರಾಗುವುದು ಅವರ ತಪ್ಪಲ್ಲ, ಅವರನ್ನು ಪೋಷಣೆ ಮಾಡಿದವರ ತಪ್ಪಾಗಿರುತ್ತದೆ.

ಮಕ್ಕಳು ಮಾತಾಡುವುದಕ್ಕೆ ಆರಂಭವಾಗುತ್ತಲೇ ಅವರ ತಾಯಿಗಳು ಅವರಿಗೆ ಸತ್ಯವಾಗಿಯೂ, ಸಭ್ಯವಾಗಿಯೂ, ಮಧುರವಾಗಿ

ಯೂ, ಇರುವ ಮಾತುಗಳನ್ನು ಕಲಿಸಬೇಕು. ಮಕ್ಕಳ ಎದುರಿಗೆ ತಾವು ಎಂದಿಗೂ ಅಸತ್ಯವಾದ ಅಥವಾ ಕ್ರೂರವಾದ ಮಾತುಗಳನ್ನು ಆಡಕೂಡದು. ಹೀಗೆ ಇನ್ನ್ಯಾರಾದರೂ ಮಾತನಾಡುತ್ತಿದ್ದರೂ ಅವರ ಸಮೀಪಕ್ಕೆ ಮಕ್ಕಳನ್ನು ಹೋಗಗೊಡಬಾರದು. ಅನೇಕ ಸ್ತ್ರೀಯರು ತಾವು ಕೆಟ್ಟ ಕೆಲಸವನ್ನು ಮಾಡಿ ಅದನ್ನು ಇತರರಿಗೆ ಹೇಳಬೇಡಿರೆಂದು ಮಕ್ಕಳಿಗೆ ಬೋಧಿಸಿ ಸುಳ್ಳು ಹೇಳುವುದನ್ನು ತಾವೇ ಕಲಿಸುತ್ತಾರೆ. ಮಕ್ಕಳು ಬಾಲ್ಯದಲ್ಲಿ ಹೀಗೆ ಕಲಿತು ಮುಂದೆ ಸುಳ್ಳಾಡುತ್ತಾ ಹೋದರೆ ಆ ತಪ್ಪು ತಾಯಿಯದಲ್ಲದೆ ಮಕ್ಕಳದಲ್ಲ. ನಾಲ್ಕು ಜನ ಹೆಂಗಸರು ಒಂದು ಕಡೆ ಸೇರಿದ ಕೂಡಲೇ ನೆರೆಹೊರೆಯವರ ಮೇಲಣ ದೂರನ್ನೂ, ಮನೆಯವರ ಮೇಲಣ ದೂರನ್ನೂ, ಅಂತರಂಗದ ಮಾತುಗಳನ್ನೂ, ಪರಸ್ಪರ ದೋಷೋದ್ಘಾಟನೆಯ ಮಾತುಗಳನ್ನೂ, ಅಶ್ರಾವ್ಯವಾಗಿಯೂ ಲಜ್ಜಾಸ್ಪದಗಳಾಗಿಯೂ ಇರುವ ಮಾತುಗಳನ್ನೂ, ಆಡುವುದಕ್ಕೆ ಪ್ರಾರಂಭಿಸುತ್ತಾರೆ. ಆಗ ಅವರ ಸಮೀಪದಲ್ಲಿ ಮಕ್ಕಳಿದ್ದರೆ ಈ ಮಾತುಗಳೆಲ್ಲಾ ಅವರ ಕಿವಿಗೆ ಬಿದ್ದೇ ಬೀಳುತ್ತವೆ. ಈ ಮಾತುಗಳೆಲ್ಲಾ ಅವರಿಗೆ ಚೆನ್ನಾಗಿ ತಿಳಿಯದೇ ಇದ್ದಾಗ್ಗೂ ವಿಷಯ ಮಾತ್ರ ಮನಸ್ಸಿಗೆ ಹೊಕ್ಕು ಅದರ ಅರ್ಥವು ಕಾಲಕ್ರಮೇಣ ತಿಳಿದು ತಾವು ಕೇಳಿದ ಪ್ರಕಾರವೇ ನಡೆವುದಕ್ಕೆ ಆರಂಭಿಸುತ್ತಾರೆ. ಅನೇಕರು ಸಾಧಾರಣವಾಗಿ ಮಾತನಾಡುವಾಗ ಮಕ್ಕಳನ್ನೂ ಇತರರನ್ನೂ ನಾನಾ ವಿಧವಾಗಿ ಬಯ್ಯುತ್ತಾರೆ. ಹೀಗೆ ಬಯ್ಯುವುದನ್ನು ಕೇಳಿ ಮಕ್ಕಳು ಸಹಾ ಅದರಂತೆ ಬಯ್ಯುವುದನ್ನು ಕಲಿಯುತ್ತಾರೆ. ಇದಲ್ಲದೆ ದೊಡ್ಡವರಾಗಿಯೂ, ಜ್ಞಾನಿಗಳಾಗಿಯೂ, ಇತರರಿಗೆ ಸದುಪದೇಶವನ್ನು ಮಾಡುವವರಾಗಿಯೂ ಇರುವ ಅನೇಕರು ಬಾಲ್ಯದ ದುರಭ್ಯಾಸದಿಂದ ಬಯ್ಯದೇ ಇರುವುದಕ್ಕೆ ಆಗದೆ ಇರುವುದನ್ನು ನಾನು ನೋಡಿದ್ದೇನೆ. ಈ ಪ್ರಕಾರ ತಾವು ಮಾತನಾಡುವುದು ಅಸಂಗತವೆಂದು ತಿಳಿಯದೆ, ದೊಡ್ಡವರ ಎದುರಿಗೂ ಹೆಂಗಸರ ಎದುರಿಗೂ ಮಕ್ಕಳ ಎದುರಿಗೂ ಆಡುತ್ತಾರೆ. ವಿದ್ಯಾರ್ಥಿಗಳು ದಾರಿತಪ್ಪಿದರೆ ಅವರನ್ನು ಮಾರ್ಗಕ್ಕೆ ತಂದು ಜ್ಞಾನೋಪದೇಶವನ್ನು ಮಾಡಿ ಭವಿಷ್ಯಜ್ಜಗತ್ತನ್ನು ಉನ್ನತಿಗೆ ತರುವವರು ಕೂಡ ಅಕ್ಕಾ, ಅಮ್ಮಾ ಎಂದು ಬಯ್ಯುತ್ತಾರೆ.

ದುರ್ದಶೆಯಲ್ಲಿರುವ ಈ ನಮ್ಮ ದೇಶವು ಉದ್ಧಾರವಾಗುವುದಕ್ಕಾಗಿ ಇಂಥ ಕೆಟ್ಟ ನಡತೆಗಳನ್ನೆಲ್ಲಾ ಬಿಡಬೇಕು. ಬೇವಿನ ಬೀಜವನ್ನು ಹಾಕಿ ಮಾವಿನ ಹಣ್ಣು ಆಗಬೇಕೆಂದರೆ ಆಗಲಾರದು. ಒಳ್ಳೆಯ ಮಾತನ್ನು ಆಡುವುದರಿಂದ ತನಗೂ ಇತರರಿಗೂ ಉಂಟಾಗುವ ಸೌಖ್ಯವು ಇನ್ನಾವುದರಿಂದಲೂ ಉಂಟಾಗದು. ಇದರಂತೆಯೇ ಕೆಟ್ಟ ಮಾತುಗಳನ್ನು ಆಡುವುದರಿಂದ ಉಂಟಾಗುವ ಕೆಡಕು ಇನ್ನಾವುದರಿಂದಲೂ ಉಂಟಾಗಲಾರದು. ಧನಬಲವೇ ಮೊದಲಾದ ಎಲ್ಲಾ ಬಲಗಳಿಗಿಂತಲೂ ವಾಗ್ಬಲವೇ ಹೆಚ್ಚಾದುದು. ಆದುದರಿಂದ ಬಾಲ್ಯದಿಂದಲೂ ಮಕ್ಕಳಿಗೆ ಸತ್ಯವಾಗಿಯೂ, ಶುದ್ಧವಾಗಿಯೂ, ಸೌಮ್ಯವಾಗಿಯೂ, ಮಧುರವಾಗಿಯೂ ಮಾತನಾಡುವುದನ್ನು ಕಲಿಸಬೇಕು. ನಮ್ಮ ದೇಶದಲ್ಲಿ ಮಕ್ಕಳಿಗೆ ಮೊದಲು ಮಾತು ಬಂದಕೂಡಲೆ ವಿನೋದಕ್ಕಾಗಿ "ಅವನ ಕಣ್ಣು ಹೇಗಿದೆ ತೋರಿಸು, ಅವನು ನಡೆವುದು ಹೇಗೆ, ಮದುವೆ ಮಾಡುವುದು ಯಾವಾಗ ಎಂದು ನಿಮ್ಮಮ್ಮನ ಮುಖದ ಮೇಲೆ ಹೊಡೆ, ಅವರನ್ನು ಬಯ್ಯಿ, ಬೀಬ್ಬರೂ ಕಾಣದಂತೆ ಅದನ್ನು ತೆಗೆದುಕೊಂಡು ಬಾ" ಎಂಬ ಮಾತುಗಳನ್ನು ಹೇಳಿಕೊಡುತ್ತಾರೆ. ಹೀಗೆ ಹೇಳಿಕೊಡುವುದರಿಂದ ಮುಂದೆ ಆಗುವ ಅಪಾಯವೂ ದುಷ್ಪರಿಣಾಮವೂ ಅವರಿಗೆ ಗೊತ್ತಾಗುವುದಿಲ್ಲ. ವಿಷವೃಕ್ಷದ ಬೀಜವು ಸಾಸುವೆಯಷ್ಟು ಸಣ್ಣದಾಗಿದ್ದರೂ, ಅದನ್ನು ಬಿತ್ತಿದಮೇಲೆ ಅದು ದೊಡ್ಡ ಮರವಾಗಿ, ಫಲಿಸಿದ ಮೇಲೆ ಅದರ ಫಲದಿಂದ ಅನೇಕ ಪ್ರಾಣಿಗಳು ನಾಶವಾಗುತ್ತವೆ. ಬೆಟ್ಟದಷ್ಟು ಎತ್ತರವಾಗಿರುವ ಒಣಗಿದ ಹುಲ್ಲಿನ ಮೆದೆಗೆ ಒಂದು ಸಣ್ಣ ಕಿಡಿ ಬಿದ್ದಾಗ್ಗೂ ಆ ಹುಲ್ಲೆಲ್ಲಾ ಸುಟ್ಟು ಬೂದಿಯಾಗುತ್ತದೆ. ಇದರಂತೆಯೇ ಬಾಲ್ಯದಲ್ಲಿ ಕಲಿತ ಸಣ್ಣ ಸಣ್ಣ ಕೆಟ್ಟಮಾತುಗಳಿಂದಲೂ ದುರಾಚಾರದಿಂದಲೂ ಉತ್ತರೋತ್ತರ ದೇಶಕ್ಕೇ ಹಾನಿಯುಂಟಾಗುವುದು. ಬಂಗಾಳ ದೇಶದ ನವಾಬನಾದ ಸುರಾಜಉದ್ದೌಲ ಎಂಬವನು ತನ್ನ ಅಜ್ಜನಲ್ಲಿ ಮುದ್ದಿನಿಂದ ಬೆಳೆದು, ದುಸ್ಸಹವಾಸಕ್ಕೆ ಬಿದ್ದುದರಿಂದ ಅವನ ದೇಶವು ಪರಾಕ್ರಾಂತವಾಗಿ, ಅವನು ರಾಜ್ಯಭ್ರಷ್ಟನಾದುದು ಚರಿತ್ರೆಯನ್ನು ಓದಿ ನೋಡಿದರೆ ಎಲ್ಲರಿಗೂ ಗೊತ್ತಾಗುತ್ತದೆ. ಈ ಜಗತ್ತಿನಲ್ಲಿ ಯಾವುದೂ ಒಂದೇಸಾರಿ ದೊಡ್ಡದಾಗುವುದಿಲ್ಲ; ಸಣ್ಣದಾಗಿದ್ದು ಬರಬರ ದೊಡ್ಡದಾಗಿ ಬೆಳೆಯುತ್ತದೆ. ಹಾ

ವಿನ ಮರಿ ಸಣ್ಣದೆಂದು ಉದಾಸೀನಮಾಡಿ ಬಿಟ್ಟರೇ ಆದರೆ ಅದು ಮುಂದೆ ಘೋರವಾದ ವಿಷಸರ್ಪವಾಗದೆ ತಪ್ಪದು. ಆದುದರಿಂದ ದುರ್ಗುಣದ ಅಂಕುರವನ್ನು ಕಂಡ ಕೂಡಲೆ ಮೂಲೋತ್ಪಾಟನೆಯನ್ನು ಮಾಡಬೇಕು. ಸಣ್ಣದಾಗಿದ್ದಾಗ ಕಿತ್ತು ಹಾಕುವುದಕ್ಕೆ ಕಷ್ಟವಾಗುವುದಿಲ್ಲ; ದೊಡ್ಡದಾದ ಮೇಲೆ ಅಸಾಧ್ಯವಾಗಿ ಅದರ ನೆರಳಿಗೂ ಹೋಗುವುದಕ್ಕಾಗುವುದಿಲ್ಲ. ಆದುದರಿಂದ ಬಾಲ್ಯದಲ್ಲಿಯೇ ಹುಡುಗರಿಗಾವ ದುರಭ್ಯಾಸವೂ ಉಂಟಾಗದಂತೆ ನೋಡಿ ಕೊಳ್ಳಬೇಕು.

ಹುಡುಗರನ್ನು ಕೆಟ್ಟಸಹವಾಸಕ್ಕೆ ಬಿಡಬಾರದು. ಹುಡುಗರು ಇತರ ಹುಡುಗರ ಸಂಗಡ ಆಡುವುದಕ್ಕೆ ಹೋಗುತ್ತವೆ. ಆ ಹುಡುಗರು ಕೆಟ್ಟವರಾಗಿದ್ದರೆ ಅವರ ಸಂಗಡ ಆಡುವುದಕ್ಕೂ ಬಿಡಬಾರದು. ಹುಡುಗರಿಗೂ ದೊಡ್ಡವರಿಗೂ ಸಹವಾಸಕ್ಕೆ ತಕ್ಕ ಗುಣಗಳು ಬರುತ್ತವೆ. ಗುಣಗಳು ಶಿಕ್ಷೆಯಿಂದ ಬರುವುದಕ್ಕಿಂತಲೂ ಸಹವಾಸದಿಂದ ಬರುವುದು ಬೇಗ. ಏತಕ್ಕೆಂದರೆ ಮನುಷ್ಯರಿಗೆ ಅನುಕರಣ ಶಕ್ತಿಯು ಸ್ವಭಾವಸಿದ್ಧವಾಗಿ ಇರುವುದರಿಂದ ಮತ್ತೊಬ್ಬರು ಮಾಡುವಂತೆಯೇ ತಾವೂ ಮಾಡಬೇಕೆನ್ನುತ್ತಾರೆ. ಸಣ್ಣ ಹುಡುಗರಿಗೆ ಬುದ್ಧಿಯು ಪಕ್ವವಾಗಿ ಇರುವುದಿಲ್ಲ. ಆದುದರಿಂದ ಅವರಿಗೆ ಇದು ಒಳ್ಳೆಯದು, ಇದು ಕೆಟ್ಟದು ಎಂಬ ತಿಳಿವಳಿಕೆಯೂ ಇರುವುದಿಲ್ಲ. ಅವರ ಸಹವಾಸದಲ್ಲಿ ಇರುವವರು ಹೇಗೆ ನಡೆಯುತ್ತಾರೋ ಅದೇ ಒಳ್ಳೆಯದೆಂದು ತಿಳಿದುಕೊಂಡು ತಾವು ಹಾಗೆಯೇ ನಡೆಯುತ್ತಾರೆ. ಹುಡುಗರು ತಮ್ಮ ಸಾಮೀಪ್ಯವನ್ನು ಬಿಟ್ಟುಹೋಗದಂತೆ ನೋಡಿಕೊಳ್ಳಬೇಕು. ಅವರನ್ನು ಸರ್ವದಾ ತಮ್ಮ ಆಜ್ಞೆಯಲ್ಲಿಯೇ ಇಟ್ಟಿರಬೇಕು. ಕೆಲವರು ಹುಡುಗರಿಗೆ ಭಯವಿರಬೇಕೆಂದು ಅವರನ್ನು ಮನಸ್ಸಿಗೆ ಬಂದಂತೆಹೊಡೆದು ಅವರ ಮನಸ್ಸನ್ನು ಕೆಡಿಸುತ್ತಾರೆ. ನಿಷ್ಕಾರಣವಾಗಿ ಹೊಡೆದು ಬಡಿದು ದಂಡಿಸುವುದರಿಂದ ಮಕ್ಕಳಿಗೆ ತಾಯಿಯ ಮೇಲೆ ಪ್ರೇಮವು ಕಡಿಮೆಯಾಗುತ್ತದೆ. ಹೊಡೆಯಿಸಿಕೊಳ್ಳುವುದು ಅಭ್ಯಾಸವಾದ ಮೇಲೆ ಹುಡುಗರು ಮೊಂಡರಾಗಿ ಯಾವುದಕ್ಕೂ ಬಗ್ಗುವುದಿಲ್ಲ. ಆರನ್ನೇ ಆಗಲಿ ಕ್ರೂರತನದಿಂದ ತಮ್ಮ ಸ್ವಾಧೀನ ಪಡಿಸಿಕೊಳ್ಳುವುದಕ್ಕೆ ಆಗುವುದಿಲ್ಲ; ಸೌಮ್ಯತನದಿಂದ ಸಿಂಹದಂಥ ಕ್ರೂರಜಂತುವನ್ನೂ ಸ್ವಾಧೀನ ಪಡಿಸಿಕೊಳ್ಳಬಹುದು. ಆದು

ದರಿಂದ ಸಾಧ್ಯವಾದ ಮಟ್ಟಿಗೂ ಸೌಜನ್ಯತನದಿಂದ ಸದುಪದೇಶವನ್ನು ಮಾಡಿ ಹುಡುಗರನ್ನು ಮಾರ್ಗಕ್ಕೆ ತರಬೇಕು. ಇದರಿಂದಲೂ ಆಗದೆ ಇದ್ದರೆ ಅದಕ್ಕೆ ತಕ್ಕ ಉಪಾಯವನ್ನು ಮಾಡಬೇಕು. ಮಕ್ಕಳನ್ನು ಅಪರಾಧವಿಲ್ಲದೆ ದಂಡಿಸಬಾರದು. ಇತರರ ಅಪರಾಧಕ್ಕಾಗಲಿ ತನಗೆ ಕೋಪಬಂದುದಕ್ಕಾಗಲಿ ಮಕ್ಕಳನ್ನು ದಂಡಿಸಬಾರದು. ಮಕ್ಕಳನ್ನು ಬಹಳವಾಗಿ ಲಾಲಿಸಿದರೆ ದುರ್ಮಾರ್ಗರಾಗಿ ಹೇಳಿದ ಮಾತನ್ನು ಕೇಳು ವುದಿಲ್ಲ. ಆದಕಾರಣ ಅವರಲ್ಲಿ ಅತಿ ಮೃದುತ್ವವನ್ನೂ ಅಥವಾ ಅತಿ ಕ್ರೂರತನವನ್ನೂ ತೋರಿಸದೆ ಮಧ್ಯಸ್ಥವಾದ ಉಪಾಯದಿಂದ ಅವ ರನ್ನು ಮಾರ್ಗಕ್ಕೆ ತರಬೇಕು. ಮನುಷ್ಯನ ಮನಸ್ಸು ಬಾಲ್ಯಾವಸ್ಥೆ ಯಲ್ಲಿ ಸರಳವಾಗಿಯೂ ನಿರ್ಮಲವಾಗಿಯೂ ಇರುವಂತೆ ಇನ್ನಾವ ಅವ ಸ್ಥೆಯಲ್ಲಿಯೂ ಇರುವುದಿಲ್ಲ. ಈ ಬಾಲ್ಯಾವಸ್ಥೆಯಲ್ಲಿ ಅವರನ್ನಾವ ಮಾರ್ಗಕ್ಕೆ ಬೇಕಾದರೂ ಸುಲಭವಾಗಿ ತಿರುಗಿಸಬಹುದು. ಮಕ್ಕಳಿಗೆ ಬಾಲ್ಯದಲ್ಲಿ ಒಳ್ಳೆಯ ನಡತೆಯನ್ನು ಕಲಿಸತಕ್ಕದು ತಾಯಿಯ ಕೆಲಸವು. ತಾಯಿಯ ನಡತೆಯನ್ನು ಮಕ್ಕಳು ಅನುಸರಿಸಿ ಅವರಂತೆ ನಡೆವುದರಿಂದ ತಾಯಿಯನಡತೆ ಒಳ್ಳೆಯದಾಗಿದ್ದರೆ ಮಕ್ಕಳ ನಡತೆಯೂ ಒಳ್ಳೆಯದಾಗು ತ್ತದೆ; ತಾಯಿಯ ನಡತೆ ಕೆಟ್ಟದಾಗಿದ್ದರೆ ಮಕ್ಕಳ ನಡತೆಯೂ ಕೆಟ್ಟ ದಾಗುತ್ತದೆ. ಒಂದುವೇಳೆ ಮಕ್ಕಳು ಸ್ವಭಾವತಃ ಕೆಟ್ಟವರಾಗಿದ್ದಾಗ್ಯೂ ತಾಯಿ ಒಳ್ಳೆಯ ನಡತೆಯುವಳಾಗಿ ಇದ್ದರೆ ಅವಳನ್ನು ನೋಡಿ ಮಕ್ಕಳು ಮಾರ್ಗಕ್ಕೆ ಬರುತ್ತಾರೆ. ಸುಮಿತ್ರೆ, ವಿದುಳೆ, ಕುಂತಿ ಮುಂತಾದವರು ತಮ್ಮ ಮಕ್ಕಳನ್ನು ಅಭಿವೃದ್ಧಿಗೆ ತಂದಂತೆ ನಮ್ಮ ದೇಶದ ಸ್ತ್ರೀಯ ರು ತಮ್ಮ ಮಕ್ಕಳನ್ನು ಮುಂದಕ್ಕೆ ತರಬೇಕು. ಅನ್ಯರ ಮಕ್ಕ ಳನ್ನು ತಾವು ರಕ್ಷಿಸಬೇಕಾಗಿ ಬಂದಲ್ಲಿ ತಮ್ಮ ಮಕ್ಕಳಿಗೂ ಆ ಮಕ್ಕ ಳಿಗೂ ತಾರತಮ್ಯವನ್ನು ಎಣಿಸಬಾರದು. ಮಕ್ಕಳಿಗೆ ಒಬ್ಬರಿಗೊ ಬ್ಬರು ಜಗಳವಾಡುವುದಕ್ಕೆ ಆಸ್ಪದವನ್ನು ಕೊಡಬಾರದು. ಬಾಲ್ಯದಲ್ಲಿ ಆಡಿದ ಜಗಳದಿಂದ ದೊಡ್ಡವರಾದ ಮೇಲೆ ಒಬ್ಬರಿಗೊಬ್ಬರು ಕೇಡನ್ನು ಉಂಟುಮಾಡುವುದಕ್ಕೆ ಯತ್ನಿಸುವುದೂ ಉಂಟು. ಆದುದರಿಂದ ಬಾಲ್ಯ ದಲ್ಲಿಯೇ ಹುಡುಗರು ಒಬ್ಬರಿಗೊಬ್ಬರು ಪ್ರೇಮದಿಂದಿರುವಂತೆ ಮಾಡ ಬೇಕು. ಕುಂತಿಯು ತನ್ನ ಮೂರು ಮಂದಿ ಮಕ್ಕಳೊಡನೆ ತನ್ನ

ಸವತಿಯ ಮಕ್ಕಳಿಬ್ಬರನ್ನು ಸಾಕಿದಳು. ದೊಡ್ಡವರಾಗಿ ರಾಜ್ಯಭಾರವನ್ನು ನಿರ್ವಹಿಸುವುದಕ್ಕೆ ಯೋಗ್ಯರಾಗುವವರೆಗೂ ಆಮೇಲೂ ಅವರಲ್ಲಿ ಪರಸ್ಪರ ವೈಷಮ್ಯ ಬಾರದಂತೆಯೂ, ಪರಸ್ಪರ ಪ್ರೇಮವು ದಿನೇ ದಿನೇ ಅಭಿವೃದ್ಧಿಯಾಗುವಂತೆಯೂ, ಅವರನ್ನು ಚೆನ್ನಾಗಿ ಶಿಕ್ಷಿಸಿ ಸ್ವಪರವೆಂಬ ಭೇದವಿಲ್ಲದೆ ನಡಿಸಿದಳು. ಆದುದರಿಂದ ಆ ಐದು ಜನ ಅಣ್ಣತಮ್ಮಂದಿರೊಳಗೆ ಒಬ್ಬರಲ್ಲೊಬ್ಬರಿಗೆ ಅತಿಶಯವಾದ ಪ್ರೇಮವಿದ್ದಿತು. ಅವರಲ್ಲಿ ಪರಸ್ಪರ ವೈಮನಸ್ಯವಿಲ್ಲದುದರಿಂದಲೂ, ಅವರು ಸುರಕ್ಷಿತರಾಗಿದ್ದುದರಿಂದಲೂ, ಪ್ರಾರಂಭದಲ್ಲಿ ಅವರು ಅನೇಕ ಕಷ್ಟಗಳನ್ನು ಅನುಭವಿಸಬೇಕಾಗಿ ಬಂದಾಗ್ಯೂ, ಆ ಕಾಲದಲ್ಲಿ ಧರ್ಮಮಾರ್ಗವನ್ನು ಬಿಡದೆ, ಬಹು ಧೈರ್ಯಶಾಲಿಗಳಾಗಿ ಕೊನೆಗೆ ಸ್ವರ್ಗಸಮವಾದ ರಾಜ್ಯಸುಖವನ್ನು ಅನುಭವಿಸಿದರು.

ರಾಮನು ವನಕ್ಕೆ ಹೊರಟಾಗ ಅವನ ಸಂಗಡ ವನವಾಸಕ್ಕೆ ತಾನೂ ಹೋಗಬೇಕೆಂದು ಲಕ್ಷ್ಮಣನು ತನ್ನ ತಾಯಿಯಾದ ಸುಮಿತ್ರೆಯ ಅಪ್ಪಣೆಯನ್ನು ಕೇಳಿದನು. ಆ ಕಾಲದಲ್ಲಿ ಆಕೆಯು ಪುತ್ರವಾತ್ಸಲ್ಯದಿಂದ ಮಗನನ್ನು ತಡೆಯದೆ ರಾಮನನ್ನು ತನ್ನ ಸವತಿಯ ಮಗನೆಂದೆಣಿಸದೆ ಹೋಗೆಂದು ಅಪ್ಪಣೆಯನ್ನು ಕೊಟ್ಟು, ರಾಮನನ್ನು ದಶರಥನಂತೆಯೂ ಸೀತೆಯನ್ನು ತನ್ನಂತೆಯೂ ಅಡವಿಯನ್ನು ಅಯೋಧ್ಯಾಪಟ್ಟಣದಂತೆಯೂ ಭಾವಿಸಿಕೊಂಡು ಸುಖವಾಗಿ ಹೋಗಿಬಾರೆಂದು ಹೇಳಿ ಕಳುಹಿಸಿದಳು. ಹೀಗೆಬುಳ್ಳಯುಪದೇಶವನ್ನು ಮಾಡಿ, ಕರ್ತವ್ಯವನ್ನು ತಿಳಿಸಿಕೊಟ್ಟು, ಸನ್ಮಾರ್ಗವನ್ನು ತೋರಿಸಿಕೊಡುವ ಧರ್ಮಜ್ಞಳಾದ ತಾಯಿಯನ್ನು ಪಡೆದಿರುವ ಮಕ್ಕಳ ಪುಣ್ಯವನ್ನು ಎಷ್ಟೆಂದು ಹೇಳಬೇಕು.

ವಿದುಳೆ ಎಂಬ ರಾಜಸ್ತ್ರೀಗೆ ಸಂಜಯನೆಂಬ ಮಗನಿದ್ದನು. ಈಕೆಯ ಗಂಡನು ಶತ್ರುಗಳ ಸಂಗಡ ಕಾದಾಡಿ ಯುದ್ಧದಲ್ಲಿ ಮಡಿದನು. ಬಳಿಕ ಈಕೆಯು ಮಗನಿಗೆ ಚೆನ್ನಾಗಿ ಬುದ್ಧಿಯನ್ನು ಕಲಿಸಿದಳು. ಕೆಲವುಕಾಲದ ಮೇಲೆ ಅವನು ದೊಡ್ಡವನಾಗಿ ರಾಜ್ಯವನ್ನು ಆಳುತ್ತಿರುವಾಗ ಅವನ ರಾಜ್ಯಕ್ಕೆ ಶತ್ರುಗಳು ಬಂದು ಮುತ್ತಲು, ಆ ಕಾಲದಲ್ಲಿ ಸಂಜಯನು ತನ್ನ ಸೇನೆಯನ್ನೆಲ್ಲಾ ಕಟ್ಟಿಕೊಂಡು ಯುದ್ಧಕ್ಕೆ ಹೋಗಿ

ನೋಡುವಲ್ಲಿ ತನ್ನ ಸೇನೆಯು ಬಹಳ ಕಡಿಮೆಯಾಗಿಯೂ ಶತ್ರುಸೇನೆಯು ಬಹಳ ಹೆಚ್ಚಾಗಿಯೂ ಇದ್ದುದರಿಂದ ಭಯಪಟ್ಟು ಮನಸಿಗೆ ಬಂದು ಉತ್ಸಾಹ ಹೀನನಾಗಿ ಕುಳಿತುಕೊಂಡಿದ್ದನು. ಇದನ್ನು ಕೇಳಿದ ಕೂಡಲೇ ತಾಯಿಯು ಮಗನ ಸಮೀಪಕ್ಕೆ ಬಂದು ಉತ್ಸಾಹವನ್ನು ಉಂಟುಮಾಡುವ ಮಾತುಗಳನ್ನು ಹೇಳಿದಳು. ಬಳಿಕ ಸಂಜಯನು ಧೈರ್ಯವನ್ನು ಅವಲಂಬಿಸಿ, ತನ್ನಲ್ಲಿದ್ದ ಸ್ವಲ್ಪ ಸೇನೆಯಿಂದಲೇ ಶತ್ರುಗಳ ಸಂಗಡ ಯುದ್ಧವನ್ನು ಮಾಡಿ, ಅವರನ್ನು ಸೋಲಿಸಿ, ಜಯಭೇರಿಯನ್ನು ಹೊಡೆಯಿಸಿಕೊಂಡು ಅರಮನೆಗೆ ಬಂದು, ತನ್ನ ವಿಜಯಕ್ಕೆ ಕಾರಣವಾದ ಉತ್ಸಾಹವಾಕ್ಯವನ್ನು ಹೇಳಿದ ತಾಯಿಗೆ ವಂದನೆಯನ್ನು ಮಾಡಿದನು.

ಇದರಂತೆಯೇ ನಮ್ಮ ದೇಶದಲ್ಲಿ ದೊಡ್ಡದೊಡ್ಡ ರಾಜರಾಗಿಯೂ, ಶೂರರಾಗಿಯೂ, ಸಾಧುಗಳಾಗಿಯೂ, ಪರೋಪಕಾರಿಗಳಾಗಿಯೂ, ಧರ್ಮಜ್ಞರಾಗಿಯೂ, ಮಹಾತ್ಮರಾಗಿಯೂ ಇದ್ದವರ ಯಶಸ್ಸಿಗೆ ಅವರವರ ತಾಯಿ ಮುಖ್ಯಕಾರಣವೆಂದು ಎಣಿಸಬೇಕು. ಇದರಂತೆಯೇ ಈಗಿನ ಕಾಲದಲ್ಲಿ ತಾಯಿಗಳು ತಮ್ಮ ತಮ್ಮ ಮಕ್ಕಳಿಗೆ ಬುದ್ಧಿಯನ್ನು ಕಲಿಸದೆ ಇರುವುದರಿಂದಲೇ ನಮ್ಮ ದೇಶವು ಈ ಸ್ಥಿತಿಗೆ ಬಂದಿರುತ್ತದೆ. ಆದುದರಿಂದ ನಮ್ಮ ದೇಶವು ಅಭಿವೃದ್ಧಿಯಾಗಬೇಕೆಂದು ಅಪೇಕ್ಷಿಸುವ ಮಹಾನುಭಾವರು ಮಕ್ಕಳಿಗೆ ತಾಯಿಗಳಿಂದ ಬುದ್ಧಿಯನ್ನು ಕಲಿಸುವ ವಿಷಯದಲ್ಲಿ ಪ್ರಯತ್ನವನ್ನು ಮಾಡಬೇಕು.

---

## ೮ನೆಯ ಪರಿಚ್ಛೇದ.

---

### ಇತಿ ಕರ್ತವ್ಯತೆ.

ಮನುಷ್ಯನಿಗೆ ಉತ್ತಮದಶೆಯಾಗಲಿ ದುರ್ದಶೆಯಾಗಲಿ ಇದ್ದಂತೆಯೇ ಇರುವುದಿಲ್ಲ. ಪರಿವರ್ತನಶೀಲವಾದ ಈ ಸಂಸಾರದಲ್ಲಿ ಮೊದಲಿಂದ ಕೊನೆಯವರೆಗೂ ಒಂದೇ ಸಮನಾಗಿದ್ದುದನ್ನಾರೂ ನೋಡಿಲ್ಲ. ಸೂರ್ಯಮಂಡಲದಷ್ಟು ತೇಜಸ್ಸಿನಿಂದ ಕೂಡಿದ ವಸ್ತುವು ಮತ್ತೊಂದಿಲ್ಲ.

ಸೂರ್ಯನ ಕಾಂತಿಯಿಂದ ಚಂದ್ರನಿಗೂ ಭೂಮಿಗೂ ಇತರ ಗ್ರಹಗಳಿಗೂ ಕಾಂತಿಯುಂಟಾಗುತ್ತದೆ. ಇಂಥ ಅನಿರ್ವಚನೀಯವಾದ ತೇಜಸ್ಸಿನಿಂದ ಕೂಡಿರುವ ಸೂರ್ಯಮಂಡಲದ ಸ್ಥಿತಿಯೂ ಒಂದೊಂದು ಸಮಯದಲ್ಲಿ ಹೆಚ್ಚು ಕಡಿಮೆಯಾಗುತ್ತದೆ. ಕೆಲವು ಕಾಲದಲ್ಲಿ ಇದರ ಮೇಲೆ ಕಪ್ಪು ಕಲೆಗಳು ಕಾಣಿಸುತ್ತವೆ; ಕೆಲವುಕಾಲದಲ್ಲಿ ಇದು ಮೋಡಗಳಿಂದ ಆಚ್ಛಾದಿತವಾಗುತ್ತದೆ; ಕೆಲವು ಕಾಲದಲ್ಲಿ ಇದಕ್ಕೆ ಗ್ರಹಣವುಂಟಾಗುತ್ತದೆ. ಈ ಸೂರ್ಯಮಂಡಲವು ಯಾವಾಗಲೂ ತಿರುಗುತ್ತದೆ. ಇದರ ಸುತ್ತಲೂ ಗ್ರಹಗಳೂ ಉಪಗ್ರಹಗಳೂ ತಿರುಗುತ್ತವೆ. ಭೂಮಿಯೂ ಸುತ್ತುತ್ತದೆ; ಚಂದ್ರ, ನಕ್ಷತ್ರಗಳೂ ಸುತ್ತುತ್ತವೆ; ಭೂಮಿಯ ಮೇಲಿರುವ ಪರ್ವತ, ಸಮುದ್ರ, ನದೀ ನದ ಮೊದಲಾದುವುಗಳೂ ಪರಿವರ್ತನೆಯನ್ನು ಪಡೆಯುತ್ತವೆ. ಆಯಾ ಋತುಗಳನ್ನನುಸರಿಸಿ ಗಿಡಗಳು ಬೆಳೆದು, ಹೂವಾಗಿ, ಫಲಿಸಿ ಒಣಗಿಹೋಗುತ್ತವೆ. ಇದರಂತೆಯೇ ಮನುಷ್ಯನಿಗೆ ಬಾಲ್ಯ, ಯೌವನ, ವಾರ್ಧಿಕ್ಯ, ಜಾಗ್ರತ್, ಸ್ವಪ್ನ, ಸುಷುಪ್ತಿ, ಜೀವನ, ಮರಣ ಮೊದಲಾದ ಅವಸ್ಥೆಗಳು ಉಂಟಾಗುತ್ತಾ ಇರುತ್ತವೆ. ಇದಲ್ಲದೆ ಅನೇಕ ದೇಶಗಳೂ, ಅವುಗಳಲ್ಲಿರುವ ಜನರೂ ಆಯಾ ಕಾಲಕ್ಕೆ ತಕ್ಕಹಾಗೆ ಉಚ್ಚನೀಚಸ್ಥಿತಿಗಳನ್ನು ಪಡೆಯುತ್ತಾ ಇರುತ್ತಾರೆ. ಇದನ್ನೆಲ್ಲಾ ನೋಡಿದರೆ ಪ್ರಪಂಚದಲ್ಲಾವುದೂ ಸ್ಥಿರವಲ್ಲವೆಂದೂ, ಆಗತಕ್ಕುದು ತಪ್ಪುವುದಿಲ್ಲವೆಂತಲೂ, ತಿಳಿದು ಅಹಂಕಾರಪಡದೆ ಮಾಡಬೇಕಾದ ಕೆಲಸವನ್ನು ಮಾಡೆಂದು ಎಲ್ಲರಿಗೂ ಉಪದೇಶ ಮಾಡುವಂತೆ ಕಾಣುತ್ತದೆ.

ಮನುಷ್ಯನು ವಿಪತ್ತು ಸಂಭವಿಸಿದ ಕಾಲದಲ್ಲಿ ಧೈರ್ಯಕೆಟ್ಟು ಮುಂದೆ ತಾನು ಮಾಡಬೇಕಾದ ಕೆಲಸದ ವಿಷಯದಲ್ಲಿ ಆವುದೂ ತೋಚದೆ ತಳವಳಪಡುತ್ತಾನೆ. ಇಂಥ ಕಾಲದಲ್ಲಿ ಧೈರ್ಯಶಾಲಿಗಳಾದ ವಿದ್ವಾಂಸರು ಕೂಡ ಬುದ್ಧಿಹೀನರಾಗಿ ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ. ಹೀಗಿರುವಲ್ಲಿ ಕೋಮಲ ಹೃದಯವುಳ್ಳ ದುರ್ಬಲರಾದ ಹೆಂಗಸರಿಗೆ ಆಪತ್ತುಗಳು ಬಂದರೆ ಅವರು ಏನುತಾನೆ ಮಾಡಬಲ್ಲರು? ಆದುದರಿಂದ ವಿಪತ್ತು ಬಂದಕಾಲದಲ್ಲಿ ಸ್ತ್ರೀಯರು ಏನು ಮಾಡಬೇಕೆಂಬುದನ್ನು ಈಗ ವಿಚಾರ ಮಾಡುತ್ತೇನೆ. ಪೂರ್ವಕಾಲದ ಮಹರ್ಷಿಗಳಾದ ವಿದ್ವಾಂಸರು ಹೇಳಿರುವುದೇನಂದರೆ—

"ತಾವದ್ಭಯಸ್ಯ ಭೇತವ್ಯಂ ಯಾವದ್ಭಯ ಮನಾಗತಂ |
ಆಗತಂತು ಭಯಂಜ್ಞಾತ್ವಾ ಪ್ರತಿಕುರ್ಯಾದ್ಯಥೋಚಿತಂ ||

ಅಂದರೆ ಎಂದಿನವರೆಗೂ ಭಯವು ಉಂಟಾಗುವುದಿಲ್ಲವೋ ಅಂದಿನವರೆಗೂ ಭಯಪಡಬೇಕು. ಭಯವು ಬಂದು ಪ್ರಾಪ್ತವಾದರೆ ಯಥೋಚಿತವಾದ ಉಪಾಯದಿಂದ ಅದನ್ನು ನಿವಾರಣೆ ಮಾಡಿಕೊಳ್ಳಬೇಕು. ಮನುಷ್ಯನು ಸಂಕಟ ಬಂದವೇಳೆಯಲ್ಲಿ ತನಗೆ ಸಮನಾದ ದುಃಖವುಳ್ಳವರು ಯಾರೂ ಇಲ್ಲವೆಂದು ತಿಳಿದು ತಲೆಯಮೇಲೆ ಕೈಯನ್ನು ಇಟ್ಟುಕೊಂಡು ದುಃಖನಿವಾರಣೆಯ ಯತ್ನವನ್ನು ಮಾಡದೆ ನಿರುದ್ಯೋಗದಿಂದ ಕಾಲವನ್ನು ಕಳೆಯುತ್ತಾನೆ. ಹೀಗೆಯೇ ಸರ್ವದಾ ದುಃಖಪಡುತ್ತಿದ್ದರೆ ಅವನಿಗೆ ಯಾವ ಆಶೆಯೂ ಇರುವುದಿಲ್ಲ. ಇದಲ್ಲದೆ ಆ ಮನುಷ್ಯನು ನಿರಾಶನಾಗಿ, ದೇವರನ್ನಾಗಲಿ, ತನ್ನ ಅದೃಷ್ಟವನ್ನಾಗಲಿ, ಅಥವಾ ತನ್ನ ದುಃಖಕ್ಕೆ ಕಾರಣನಾದ ಮನುಷ್ಯನನ್ನಾಗಲಿ ದೂಷಿಸುತ್ತಾನೆ. ಇಂಥ ಮನುಷ್ಯನು ಯಾವ ವಿಧವಾದ ಉದ್ಯೋಗವನ್ನೂ ಮಾಡದೆ ಇದ್ದುಕೊಂಡು, ದುಃಖವನ್ನು ಕಡೆಹಾಯಿಸುವ ಮಾರ್ಗವನ್ನು ಕಾಣದೆ ಧೈರ್ಯಕುಂದಿ, ಧರ್ಮಮಾರ್ಗವನ್ನು ಬಿಟ್ಟು, ಆತ್ಮಹತ್ಯೆ, ಪರಹತ್ಯೆ, ಕಳವು, ಮೋಸಗಾರಿಕೆ, ವ್ಯಭಿಚಾರ, ಮದ್ಯಪಾನ ಮುಂತಾದ ದುರ್ವ್ಯಸನಕ್ಕೆ ಬಿದ್ದು, ಅದರಿಂದ ತನ್ನ ಸಂಕಟವನ್ನು ಹೇಗಾದರೂ ಕಡಿಮೆ ಮಾಡಿಕೊಳ್ಳಬೇಕೆಂದು ಯತ್ನಿಸುತ್ತಾನೆ. ಆದರೆ ಇಂಥ ಅಸದ್ವ್ಯಾಪಾರದಿಂದ ಅವನ ದುಃಖವು ಕಡಿಮೆಯಾಗದೆ, ಮೊದಲಿಗಿಂತಲೂ ನೂರರಷ್ಟು ಹೆಚ್ಚುತ್ತದೆ. ಬಂದುವೇಳೆ ಇಂಥ ಮನುಷ್ಯನು ಸತ್ತರೆ ಅವನ ಅಪಕೀರ್ತಿಯು ಎಲ್ಲೆಲ್ಲಿಯೂ ವ್ಯಾಪಿಸುತ್ತದೆ. ದುಃಖಪ್ರಾಪ್ತವಾದ ಕಾಲದಲ್ಲಿ ಅಧೀರರಾದ ಮನುಷ್ಯರು ತಾವು ಮಾಡಬೇಕಾದ ಕಾರ್ಯವನ್ನು ಯೋಚಿಸಿದರೂ ತಿಳಿವುದಿಲ್ಲ; ಬಂದುವೇಳೆ ತಿಳಿದಾಗ್ಯೂ ಅದನ್ನು ಮಾಡುವುದಕ್ಕೆ ಬುದ್ಧಿಯೂ ಶಕ್ತಿಯೂ ಇರುವುದಿಲ್ಲ. ಶೋಕಭರಿತವಾದ ಹೃದಯವುಳ್ಳವರಿಗೆ ಯುಕ್ತಾಯುಕ್ತ ಜ್ಞಾನವಿರುವುದಿಲ್ಲ. ಆದುದರಿಂದ ದುಃಖದ ಸಮಯದಲ್ಲಿ ಮನಸ್ಸಿಗೆ ತೋರಿದ ಕೆಲಸಗಳನ್ನೆಲ್ಲಾ ಮಾಡಬಾರದು. ಜ್ಞಾನಿಗಳಾದ ದೊಡ್ಡವರು ಹೇಗೆ ಹೇಳುತ್ತಾರೋ ಹಾಗೆ ನಡೆಯಬೇಕು. ಇಂಥ ಸಮಯದಲ್ಲಿ ಸದುಪದೇ

ಶವನ್ನು ಮಾಡತಕ್ಕವರು ಎಲ್ಲರಿಗೂ ದೊರೆವುದಿಲ್ಲ. ಆದಕಾರಣ ಸಂಕಟ ಬರುವುದಕ್ಕೆ ಮೊದಲೇ ಜ್ಞಾನಿಗಳು ಬರೆದು ಇಟ್ಟು ಇರುವ ಪುಸ್ತಕಗಳನ್ನು ಓದಿ, ಅಥವಾ ಸಂಕಟಬಂದ ಸಮಯದಲ್ಲಿ ಹೇಗೆ ನಡೆಯಬೇಕೆಂದು ದೊಡ್ಡವರನ್ನು ಮೊದಲೇ ಕೇಳಿ ತಿಳಿದುಕೊಂಡು, ಅಂಥಾ ಸಮಯದಲ್ಲಿ ಧೈರ್ಯಕೆಡದೆ ಇರುವುದಕ್ಕೆ ಪ್ರಯತ್ನ ಪಡಬೇಕು.

ಸಂಕಟ ಸಮಯದಲ್ಲಿ ಮನುಷ್ಯನ ಬುದ್ಧಿಯು ಕಳವಳದಿಂದ ವಿಚಾರಶೂನ್ಯವಾಗುತ್ತದೆ. ಆ ಸಮಯದಲ್ಲಿ ಯಾವುದು ಒಳ್ಳೆಯದು ಯಾವುದು ಕೆಟ್ಟದು ಎಂಬುದು ತಿಳಿವುದಿಲ್ಲ. ಸ್ವಕಾರ್ಯನಿರತರಾದವರು ಇಂಥ ಸಮಯವನ್ನೇ ಸಾಧಿಸಿಕೊಂಡಿದ್ದು ತಕ್ಕ ಮಾತುಗಳನ್ನಾಡಿ, ಮೋಸದಿಂದ ತಮ್ಮ ಕೆಲಸವನ್ನು ಸಾಧಿಸಿಕೊಳ್ಳುತ್ತಾರೆ. ಇವರ ಹೇಳಿಕೆಯಂತೆ ನಡೆದುದರಿಂದ ನಷ್ಟವನ್ನು ಹೊಂದಿದ ಆ ಮನುಷ್ಯನನ್ನು ಆಮೇಲೆ ಇವರೇ ಹಾಸ್ಯವನ್ನು ಮಾಡುವುದಕ್ಕೆ ಆರಂಭಿಸುತ್ತಾರೆ. ಆದುದರಿಂದ ವಿಪತ್ತಿನಕಾಲದಲ್ಲಿ ಚೆನ್ನಾಗಿ ಆಲೋಚನೆಯನ್ನು ಮಾಡಿ ಚಿತ್ತಸ್ಥೈರ್ಯವನ್ನು ಹೊಂದಿದ ಬಳಿಕ ಯಾವ ಕೆಲಸವನ್ನಾಗಲಿ ಮಾಡಬೇಕು. ಇಂಥ ಸಮಯದಲ್ಲಿ ತಮಗೆ ಬುದ್ಧಿಯನ್ನು ಹೇಳುವವರೆಲ್ಲರೂ ಒಳ್ಳೆಯವರಾಗಿರುವುದಿಲ್ಲ. ಆದಕಾರಣ ಅಂಥ ಬುದ್ಧಿವಾದವನ್ನು ಹೇಳುವವರ ಯೋಗ್ಯತೆಯನ್ನು ವಿಚಾರಪೂರ್ವಕವಾಗಿ ತಿಳಿದು ಅವರು ನಿಜವಾಗಿ ಹಿತವನ್ನು ಹೇಳುವವರಾಗಿದ್ದರೆ ಅವರ ಮಾತುಗಳನ್ನು ಕೇಳಬೇಕು. ದೂರದರ್ಶಿಗಳಾದವರು ಇದು ಒಳ್ಳೆಯದು, ಇದು ಕೆಟ್ಟದು ಎಂಬುದನ್ನು ಬಲ್ಲಂತೆ, ವ್ಯಸನದಿಂದ ಬುದ್ಧಿಶೂನ್ಯರಾಗಿರುವವರು ಅರಿಯರು. ಎಂಥ ತಿಳಿವಳಿಕೆಯವರಾದಾಗ್ಯೂ ಸರ್ವವನ್ನೂ ತಿಳಿದವರಾಗಿರುವುದಿಲ್ಲ; ಆವುದಾದರೂ ಒಂದು ವಿಷಯವನ್ನು ತಿಳಿಯದೆ ಇರುತ್ತಾರೆ. ಆದಕಾರಣ ತಮಗಿಂತ ತಿಳಿವಳಿಕೆಯಲ್ಲಿ ಕಡಿಮೆಯಾಗಿರುವ ಯಾರಾದರು ಏನನ್ನಾದರೂ ಹೇಳಿದರೆ ಸುಮ್ಮನೆ ಕೇಳಿಕೊಂಡು ಆಲೋಚನೆಯನ್ನು ಮಾಡಿ ಯಾವ ಕೆಲಸವನ್ನಾಗಲಿ ಮಾಡಬೇಕು. ತಾವು ಮಾತನಾಡಬೇಕಾದರೆ ಸತ್ಯವಾದುದನ್ನೇ ಆಡಬೇಕು. ತಮ್ಮಿಂದಾಗುವ ಕೆಲಸವನ್ನು ಮಾಡುತ್ತೇನೆಂದು ಹೇಳಬೇಕು. ತಮ್ಮ ಕೈಯಲ್ಲಾಗದ ಪಕ್ಷದಲ್ಲಿ ಯಾವ ಮಾ

ತನ್ನು ಆಡದೆ ಸುಮ್ಮನಿರಬೇಕು. ಬಾಯಿಂದ ಹೊರಟುಹೋದ ಮಾತನ್ನು ತಿರುಗಿಸಿಕೊಳ್ಳುವುದಕ್ಕೆ ಆರಿಂದಲೂ ಆಗುವುದಿಲ್ಲ. ಆಡಿದಂತೆ ನಡೆಯದೆ ಹೋದರೆ ಅಸತ್ಯವಾದಿ ಎನ್ನಿಸಿಕೊಳ್ಳಬೇಕಾಗುತ್ತದೆ. ಆದುದರಿಂದ ಅನುಚಿತವಾಗಿಯೂ, ಅಧರ್ಮಸೂಚಕವಾಗಿಯೂ ಇರುವ ಮಾತುಗಳನ್ನು ಎಂದಿಗೂ ಆಡಬಾರದು. ಯಾವ ಕೆಲಸವನ್ನು ಮಾಡಬೇಕಾದರೂ ತಿಳಿದವರ ಸಂಗಡ ಆಲೋಚನೆಮಾಡಿ ಮಾಡಬೇಕೆಂದು ಯಾವಾಗಲೂ ಅವರ ಆಲೋಚನೆಯನ್ನೇ ಕಾದುಕೊಂಡಿರಬಾರದು. ಸಾಧ್ಯವಾದಮಟ್ಟಿಗೂ ಸ್ವಬುದ್ಧಿಯಿಂದಲೇ ಆಲೋಚನೆಯನ್ನು ಮಾಡಿ ಮಾಡಬೇಕಾದ ಕೆಲಸಗಳನ್ನು ಮಾಡಬೇಕು. ಎಲ್ಲಾ ಕೆಲಸದಲ್ಲಿಯೂ ಅನ್ಯರ ಸಹಾಯವನ್ನೇ ಅಪೇಕ್ಷಿಸುವಂಥ ಹೀನಸ್ಥಿತಿಗೆ ಸಮಾನವಾದ ಸ್ಥಿತಿ ಮತ್ತೊಂದಿಲ್ಲ. ತಮ್ಮ ಕೆಲಸವನ್ನು ತಾವು ಮಾಡದೆ "ಅವರು ಮಾಡಿಕೊಡುತ್ತಾರೆ, ಇವರು ಮಾಡಿಕೊಡುತ್ತಾರೆ" ಎಂದು ಕಾದುಕೊಂಡಿರುವವರ ಕೈಯಲ್ಲಿ ಯಾವ ಕೆಲಸವೂ ಆಗುವುದಿಲ್ಲ; ಅಂಥ ಮನುಷ್ಯರು ಜೀವನ್ಮೃತರಂತೆ ಇರುತ್ತಾರೆ. ವಿಪತ್ತಿನ ಸಮಯದಲ್ಲಿ ಧೈರ್ಯವನ್ನು ಬಿಡಬಾರದು. ಜಗತ್ತಿನಲ್ಲಿ ದುಃಖವು ಎಂಥವರಿಗೂ ತಪ್ಪಿದುದಲ್ಲ. ಸಂಕಟ ಬಂದು ಒದಗಿದ ಕೂಡಲೆ ಧೈರ್ಯಗೆಟ್ಟು, ಇನ್ನು ಮುಂದೆ ಎಂದಿಗೂ ಒಳ್ಳೆಯದಾಗುವುದಿಲ್ಲವೆಂದು ನಿರಾಶೆಯನ್ನು ಹೊಂದುವ ಮನುಷ್ಯನಿಗೆ ಸಮನಾದ ಮೂರ್ಖರು ಯಾರೂ ಇಲ್ಲ. ಸುಖದುಃಖಗಳು ಚಕ್ರದಂತೆ ಪರಿವರ್ತನೆಯಾಗುತ್ತಾ ಇರುತ್ತವೆಂದು ನೀತಿವಂತರಾದ ಧೈರ್ಯಶಾಲಿಗಳು ಹೇಳಿದ್ದಾರೆ. ಎಲ್ಲಾ ಪ್ರಾಣಿಗಳ ಅವಸ್ಥೆಯೂ ಕಪಿಲೆಯ ಬಾನಿಯಂತೆ ಒಂದುಸಾರಿ ಪೂರ್ಣವಾಗಿಯೂ, ಮತ್ತೊಂದುಸಾರಿ ಬರಿದಾಗಿಯೂ, ಒಂದುಸಾರಿ ಮೇಲಕ್ಕೂ, ಒಂದುಸಾರಿ ಕೆಳಕ್ಕೂ ಆಗುತ್ತ ನಾನಾಪ್ರಕಾರವಾಗಿ ಪರಿವರ್ತನೆಯನ್ನು ಹೊಂದುತ್ತಾ ಇರುತ್ತದೆ. ಆದುದರಿಂದ ಯಾರೂ ತತ್ಕಾಲದ ದುರ್ದಶೆಯಿಂದ ಧೈರ್ಯಗೆಟ್ಟು ನೈರಾಶ್ಯವನ್ನು ಹೊಂದಬಾರದು. ನಮಗೆ ಬಂದ ಆಪತ್ತು ಎಂದಿಗೂ ಪರಿಹಾರವಾಗಲಾರದೆಂದು ನಮ್ಮ ದೃಷ್ಟಿಗೆ ಕಾಣಬಂದಾಗ್ಗೂ ಈ ವಿಷಯದಲ್ಲಿ ನಮ್ಮ ದೃಷ್ಟಿಯೇ ಪ್ರಮಾಣವೆಂದು ಎಣಿಸಕೂಡದು. ಮಹಾ ವೀರನಾದ ನೆಪೋಲಿಯನ್ ಬೊನಾ

ಪಾರ್ಟ್ ಎಂಬವನು ಮೊದಲು ಬಡವನಾಗಿದ್ದು ದೈವಯೋಗದಿಂದಲೂ ಸ್ವಪ್ರಯತ್ನದಿಂದಲೂ ದೊಡ್ಡ ಪರಾಕ್ರಮಿಯಾಗಿ ಫ್ರಾನ್ಸ್‌ದೇಶಕ್ಕೆ ಅರಸಾದನು. ಇಂಥ ದೊಡ್ಡ ಪದವಿಯನ್ನು ಹೊಂದಿದವನಾದಾಗ್ಯೂ ಕಾಲಚಕ್ರ ಪರಿವರ್ತನೆಯಿಂದ ಒಂದಾವೃತ್ತಿ ಸೆರೆಮನೆಯಲ್ಲಿ ಇರಬೇಕಾಗಿ ಬಂದಿತು. ಆಗ ಅವನಿಗೆ ಸಹಾಯ ಮಾಡತಕ್ಕವರಾಗಲಿ, ಅಥವಾ ಒಳ್ಳೆಯಮಾತುಗಳನ್ನಾಡಿ ಸಮಾಧಾನ ಪಡಿಸತಕ್ಕವರಾಗಲಿ, ಅವನ ಸಮೀಪದಲ್ಲಿ ಯಾರೂ ಇರಲಿಲ್ಲ. ಇಂಥ ಸಮಯದಲ್ಲಿ ಅವನು ಅಧೀರ ಪ್ರಕೃತಿಯ ಮನುಷ್ಯನಾಗಿದ್ದರೆ ಎದೆಯೊಡೆದು ಸಾಯುತ್ತಿದ್ದನು. ಪರಂತು ಅವನು ಸಹನಶೀಲನಾಗಿಯೂ ಧೈರ್ಯಶಾಲಿಯಾಗಿಯೂ ಇದ್ದುದರಿಂದ, ಇಂಥ ದುಸ್ಸಹವಾದ ದುಃಖದಲ್ಲಿಯೂ ಚಿಂತೆಪಡದೆ, ಧೈರ್ಯವನ್ನು ಅವಲಂಬಿಸಿ "ನಾನು ಸೆರೆಮನೆಯಲ್ಲಿ ಒಬ್ಬನೆ ಬಿದ್ದಿದ್ದಾಗ್ಯೂ ಚಿಂತೆ ಪಡತಕ್ಕವನಲ್ಲ; ಮುಂದಣ ಆಸೆಯನ್ನೂ ತೊರೆವುದಿಲ್ಲ; ವಿಪತ್ತು ಸಂಪತ್ತಿನ ದೂತಿಯು, ನಾನು ಕಾಲಕ್ರಮವಾಗಿ ಇಲ್ಲಿಂದ ಬಿಡುಗಡೆಯನ್ನು ಹೊಂದಿ ನನ್ನ ಶತ್ರುಗಳಿಗೆ ಪ್ರತಿಕ್ರಿಯೆಯನ್ನು ಮಾಡದೆ ಬಿಡೆನು" ಎಂದು ಹೇಳಿದನು. ಹೀಗೆ ವಿಪತ್ತಿನ ಸಮಯದಲ್ಲಿ ಧೈರ್ಯದ ದೃಷ್ಟಾಂತಗಳನ್ನು ಮತ್ತೊಂದುಕಡೆಯಲ್ಲಿ ಹುಡುಕತಕ್ಕ ಅವಶ್ಯಕವಿಲ್ಲ; ನಮ್ಮ ದೇಶದಲ್ಲಿಯೇ ಅನೇಕವಾಗಿ ಸಿಕ್ಕುತ್ತವೆ. ನಮ್ಮ ದೇಶದಲ್ಲಿ ೨೫೫ ವರುಷಕ್ಕೆ ಮುಂಚೆ ಕ್ಷೀಣಸ್ಥಿತಿಯಲ್ಲಿದ್ದ ಭರತವರ್ಷವನ್ನು ಉದ್ಧಾರ ಮಾಡುವುದಕ್ಕಾಗಿ ಶಿವಾಜಿ ಎಂಬ ಮಹಾರಾಜನು ಹುಟ್ಟಿದನು. ಇವನು ನೆಪೋಲಿಯನ್ನಂತೆ ಬಡತನದಲ್ಲಿ ಹುಟ್ಟಿ ತನ್ನ ಪ್ರಯತ್ನದಿಂದ ರಾಜಪದವಿಯನ್ನು ಪಡೆದನು. ಈ ಶಿವಾಜಿಯನ್ನೂ ಇವನ ಮಗನನ್ನೂ ಪ್ರಜೆಗಳಿಗೆ ಹಿಂಸಕನಾಗಿಯೂ, ಸರ್ಪದಂತೆ ಅತಿ ಭಯಂಕರನಾಗಿಯೂ, ಇದ್ದ ಔರಂಗಜೇಬನೆಂಬ ಚಕ್ರವರ್ತಿಯು ಹಿಡಿದು ಕಾರಾಗೃಹದಲ್ಲಿಟ್ಟನು. ಶೂರನಾದ ಶಿವಾಜಿಯು ಬಿಡುಗಡೆಯನ್ನು ಹೊಂದುವದಕ್ಕೆ ಮಾರ್ಗವಿಲ್ಲದೆ ಇದ್ದಾಗ್ಯೂ, ಕೆಲವುಕಾಲ ಧೈರ್ಯದಿಂದ ಇದ್ದು ಪ್ರಯತ್ನವನ್ನು ಮಾಡಿ, ಬಳಿಕ ಬಿಡುಗಡೆಯನ್ನು ಹೊಂದಿ ಬಂದು ಮೊಗಲಾಯರ ವಂಶಕ್ಕೇ ಹಾನಿಯನ್ನುಂಟುಮಾಡುವಷ್ಟು ಬಲಿಷ್ಠನಾಗಿ, ತನ್ನ ಪ್ರಜೆಗಳನ್ನು ರಕ್ಷಿಸಿ, ಶಾಶ್ವತವಾದ ಸತ್ಕೀರ್ತಿಯನ್ನು

ನೆಲೆಗೊಳಿಸಿದನು. ಇಂಥ ದೃಷ್ಟಾಂತಗಳು ಇನ್ನೂ ಅನೇಕವಾಗಿ ಇವೆ. ಆದಾಗ್ಗೂ ಗ್ರಂಥಬೆಳೆಯುತ್ತದೆಯೆಂದು ಇಲ್ಲಿಗೆ ನಿಲ್ಲಿಸಿದ್ದೇನೆ.

ಮನುಷ್ಯನು ವಿಪತ್ತು ಸಂಭವಿಸಿದ ಕಾಲದಲ್ಲಿ ಯುಕ್ತಾಯುಕ್ತ ಜ್ಞಾನಶೂನ್ಯನಾಗಿ ಮನಸ್ಸನ್ನು ಅಧರ್ಮದಲ್ಲಿ ಬೀಳಗೊಡಬಾರದು. ಇದರಿಂದ ಯಾರಿಗೂ ಶ್ರೇಯಸ್ಸು ಉಂಟಾಗುವುದಿಲ್ಲ. ಆದಕಾರಣ ಧರ್ಮವನ್ನು ಎಂದಿಗೂ ಬಿಡಬಾರದು. ಒಂದೊಂದುವೇಳೆಯಲ್ಲಿ ಧಾರ್ಮಿಕನಿಗೆ ತೊಂದರೆಯೂ, ಅಧಾರ್ಮಿಕನಿಗೆ ಸೌಖ್ಯವೂ, ಉಂಟಾಗುವುದುಂಟು. ಇವರಿಂದ ಧರ್ಮದಿಂದ ದುಃಖವೂ ಅಧರ್ಮದಿಂದ ಸುಖವೂ ಉಂಟಾಗುವುದೆಂದು ಊಹಿಸಬಾರದು. ಧರ್ಮಾಧರ್ಮಗಳ ಫಲವನ್ನು ಚೆನ್ನಾಗಿ ಆಲೋಚಿಸಿದರೆ ತಿಳಿವುದೇ ಹೊರತು ಸುಮ್ಮನಿದ್ದರೆ ಗೊತ್ತಾಗುವುದಿಲ್ಲ. ಸುಖವನ್ನು ಹೊಂದಿದ ಪಾಪಿಗಳು ಸಾಯುವಕಾಲಕ್ಕೆ ರೆಕ್ಕೆಬಂದ ಇರುವೆಗಳಂತೆ ಬಹುಬೇಗ ಹಾರಿಯೂ ತಮ್ಮ ಐಶ್ವರ್ಯವನ್ನೂ ಸುಖವನ್ನೂ ಕಳೆದುಕೊಂಡು ನಾಶವಾಗುತ್ತಾರೆ; ಸತ್ತ ಮೇಲೂ ತಮ್ಮ ಅಪಕೀರ್ತಿಯನ್ನು ಶಾಶ್ವತವಾಗಿ ನಿಲ್ಲುವಂತೆ ಮಾಡಿ ಹೋಗುತ್ತಾರೆ. ಜನರು ಇಂಥವರ ಹೆಸರೆತ್ತುವುದನ್ನೂ ಅವಶಕುನವೆಂದು ಭಾವಿಸುತ್ತಾರೆ. ಹೀಗೆ ಅವಮಾನವನ್ನು ಹೊಂದುವದಕ್ಕಿಂತಲೂ ಹೆಚ್ಚಾದ ದುಃಖವಾವುದು? ಆವುದಾದರೂ ಒಂದು ಕೆಲಸವನ್ನು ಮಾಡುವುದರಿಂದ ಉಂಟಾಗುವ ಸುಫಲ ದುಷ್ಫಲಗಳು ತನಗೊಬ್ಬನಿಗೆ ಮಾತ್ರ ಉಂಟಾಗುವುದಿಲ್ಲ; ತನ್ನ ಕುಲಕ್ಕೂ ಇಷ್ಟಮಿತ್ರರಿಗೂ ಜಾತಿಗೂ ದೇಶಕ್ಕೂ ಉಂಟಾಗುತ್ತದೆಂದು ತಿಳಿಯಬೇಕು. ಆದುದರಿಂದ ಎಲ್ಲಾ ವಿಷಯಗಳಲ್ಲಿಯೂ ಜಾಗರೂಕರಾಗಿ ಇರಬೇಕು. ತಮ್ಮ ಅಕೃತ್ಯದಿಂದ ಇತರರನ್ನು ದುಃಖಕ್ಕೆ ಭಾಗಿಗಳನ್ನಾಗಿ ಮಾಡಬಾರದು. ಲೋಕದಲ್ಲಿ ಪಾಪಗಳನ್ನು ಮಾಡುವವರು ಮಾನಹೀನರಾಗಿ, ತಾವು ಮಾಡುವ ಪಾಪದಿಂದ ನಿರ್ದೋಷವಾದ ತಮ್ಮ ವಂಶಕ್ಕೂ ಕಳಂಕವನ್ನುಂಟುಮಾಡುತ್ತಾರೆ. ತಮ್ಮ ದೇಶಕ್ಕೂ ವಂಶಕ್ಕೂ ಅಪಕೀರ್ತಿಯನ್ನು ಉಂಟುಮಾಡುವ ಪಾಪಿಗಳು ಹುಟ್ಟದೆ ಇರುವುದಾಗಲಿ, ಅಥವಾ ಹುಟ್ಟಿದ ಕೂಡಲೆ ಸಾಯುವದಾಗಲಿ ಉತ್ತಮ. "ಪರಿವರ್ತಿನಿ ಸಂಸಾರೇ ಮೃತಃ ಕೋವಾ ನಜಾಯತೇ । ಸಜಾತೋಯೇನಜಾತೇನ ಯಾತಿ

ವಂಶಸ್ಸಮುನ್ನತಿಂ ॥" ಎಂದು ನೀತಿಜ್ಞರು ಹೇಳುವಂತೆ ಜನನ ಮರಣ ಗಳಿಂದ ಕೂಡಿರುವ ಈ ಸಂಸಾರದಲ್ಲಿ ಹುಟ್ಟಿದವರು ಸಾಯುವರು, ಸತ್ತವರು ಹುಟ್ಟುವರು, ಯಾರು ಹುಟ್ಟಿದುದರಿಂದ ವಂಶವು ಅಭಿವೃದ್ಧಿ ಯಾಗುತ್ತದೋ ಅವನೇ ಹುಟ್ಟಿದವನೆಂದು ಎಣಿಸಬೇಕು. ಗೆದ್ದಲಿನಂತೆ ಹುಟ್ಟಿ ಸಾಯುವದರಿಂದ ಏನೂ ಪ್ರಯೋಜನವಿಲ್ಲ.

"ಈ ಕಾಲದಲ್ಲಿ ಯಾರು ಧರ್ಮವಾಗಿ ನಡೆಯುತ್ತಾರೋ ಅವ ರಿಗೆ ಅನೇಕ ದೊಡ್ಡದೊಡ್ಡ ದುಃಖಗಳು ಸಂಭವಿಸುತ್ತವೆ. ಅವರಿಗೆ ಎಂದಿಗೂ ಸುಖವುಂಟಾಗುವುದಿಲ್ಲ" ಎಂದು ಕೆಲವು ಬುದ್ಧಿಹೀನರಾದ ಜನರು ಹೇಳುತ್ತಾರೆ. ಹೀಗೆ ಹೇಳುವುದು ಸರಿಯಲ್ಲ. ವಿಚಾರಮಾಡಿ ನೋಡಿದರೆ ಧಾರ್ಮಿಕರಾದವರಿಗೆ ಇರುವಷ್ಟು ಸುಖವು ಯಾರಿಗೂ ಇಲ್ಲ. ದುಷ್ಟರಿಂದಾಗಲಿ ಇನ್ನಾವ ಕಾರಣದಿಂದಲಾಗಲಿ ಅವರಿಗೆ ದುಃಖ ವುಂ ಟಾದಾಗ್ಯೂ, ಅವರ ಮನಸ್ಸು ಸುಖವಾಗಿಯೇ ಇರುತ್ತದೆ. ಅವರಿಗೆ ಎಂಥ ಸಂಕಟಗಳು ಬಂದಾಗ್ಯೂ ಅವರ ಮನಸ್ಸು ಸಮುದ್ರದಂತೆ ಗಂಭೀರವಾಗಿಯೂ, ಆಕಾಶದಂತೆ ನಿರ್ಮಲವಾಗಿಯೂ, ಶರತ್ಕಾಲದ ಚಂ ದ್ರಿಕೆಯಂತೆ ಶಾಂತವಾಗಿಯೂ ಇರುತ್ತದೆ. ನಿರ್ಮಲವಾದ ಮನಸ್ಸಿ ನಿಂದ ಉಂಟಾಗುವ ಸುಖವು ಇನ್ನಾವುದರಿಂದಲೂ ಉಂಟಾಗಲಾರದು. ಈಶ್ವರಭಕ್ತಿಯಲ್ಲಿ ಮಗ್ನವಾಗಿರುವ ಮನಸ್ಸಿಗೆ ಹೊರಗಿನ ದುಃಖಾನು ಭವವುಂಟಾಗುವುದಿಲ್ಲ. ಧಾರ್ಮಿಕರಾದವರು ಅಸ್ವಾರ್ಥವಾಗಿ ಪರೋಪ ಕಾರವನ್ನು ಮಾಡಿ ಧರ್ಮಾಚರಣೆಯಲ್ಲಿ ಇರುವುದರಿಂದ ಅವರು ಅನು ಭವಿಸುವ ಸುಖವನ್ನು ವರ್ಣಿಸುವುದಕ್ಕೆ ಯಾರಿಂದಲೂ ಆಗುವುದಿಲ್ಲ. ಈ ಸುಖದ ರಾಶಿಯುಮುಂದೆ ಹೊರಗಿನ ಸಣ್ಣ ಸಣ್ಣ ದುಃಖಗಳು ಕಣ್ಣಿಗೆ ಕಾಣಿಸುವುದೇ ಇಲ್ಲ. ಧರ್ಮಪ್ರಭಾವದಿಂದ ಶಾಂತವಾಗಿರುವ ಮನ ಸ್ಸುಳ್ಳವರು ಸಂಕಟಗಳು ಬಂದಾಗ್ಯೂ ಧೈರ್ಯಹೀನರಾಗಿ ಕಳವಳಿಸದೆ ಮೊದಲಿನಂತೆಯೇ ಇರುತ್ತಾರೆ; ಅವರ ಚಿತ್ತವೂ ಶಾಂತವಾಗಿಯೇ ಇರುತ್ತದೆ. ಮಾಂಡವ್ಯಋಷಿಗಳು ಅರಣ್ಯದಲ್ಲಿ ತಪಸ್ಸು ಮಾಡುತ್ತಿ ದ್ದಾಗ ದುಷ್ಟರು ಅವರ ಮೇಲೆ ಕಳ್ಳತನವನ್ನು ಆರೋಪಿಸಿ, ಅವರನ್ನು ಶೂಲಕ್ಕೆ ಹಾಕಲು ಯತ್ನಿಸಿದರು. ಅವರು ಇಂಥ ಪ್ರಾ ಣಾಂತಕವಾದ ದುಃಖದ ದಶೆಯಲ್ಲಿಯೂ ಧೈರ್ಯವನ್ನು ಬಿಡದೆ ಶೂಲಕ್ಕೆ

ಹಾಕುವುದಕ್ಕೆ ಯತ್ನಿಸಿದವರನ್ನು ಕ್ಷಮಿಸಿದರು. ಇಂಥವರೇ ಧಾರ್ಮಿಕರು.

ಇಂಥ ದೊಡ್ಡವರಿಗೆ ಇಂಥ ದೊಡ್ಡ ಸಂಕಟಗಳು ಪ್ರಾಪ್ತವಾಗುವುದು ಈಶ್ವರಕೃಪೆಯಿಂದಲೇ ಎಂದು ಎಣಿಸಬೇಕು. ಇಂಥ ಸಂಕಟಗಳು ಇವರಿಗೆ ಪ್ರಾಪ್ತವಾಗದೆ ಇದ್ದರೆ ಇವರ ಮಹತ್ತ್ವವು ಜನರಿಗೆ ಗೊತ್ತಾಗುತ್ತಿರಲಿಲ್ಲ. ಅವರಿಗೆ ಇಂಥ ಸಂಕಟಗಳು ಉಂಟಾಗದೆ ಇದ್ದರೆ ಪರ್ವತದಂತೆ ಅಚಲವಾದ ಅವರ ಧೈರ್ಯವೂ, ಶಾಂತವಾಗಿಯೂ ನಿಷ್ಕಪಟವಾಗಿಯೂ ಇರುವ ಅವರ ಮನೋಭಾವವೂ, ಶತ್ರುಮಿತ್ರರಲ್ಲಿಯೂ ಸ್ವಜನಪರಜನರಲ್ಲಿಯೂ ಮನುಷ್ಯ ಮೃಗ ಪಕ್ಷಿ ಮುಂತಾದುವುಗಳಲ್ಲಿಯೂ ಬೆಳದಿಂಗಳಂತೆ ಒಂದೇಸಮನಾಗಿ ಪ್ರಸರಿಸಿ ಸಂತೋಷವನ್ನುಂಟುಮಾಡುವ ಅವರ ಅಧಿಕವಾದ ಪ್ರೇಮವೂ, ಜಗದ್ವಶೀಕರಣ ಮಂತ್ರದಂತೆ ಉತ್ಕೃಷ್ಟವಾದ ಅವರ ಚರಿತ್ರೆಯೂ, ಜಗತ್ತಿಗೆ ಹೇಗೆ ತಿಳಿಯುತಿತ್ತು ? ಭಾಗ್ಯವಂತರಾದ ಕೆಲವು ಮೋಸಗಾರರು ಧಾರ್ಮಿಕರೆಂದು ವೇಷವನ್ನು ಹಾಕಿಕೊಂಡು ಯಶಸ್ಸನ್ನು ಸಂಪಾದಿಸುವುದಕ್ಕೆ ಯತ್ನಿಸುತ್ತಾರೆ. ಆದರೆ ವಿಪತ್ತು ಬಂದಕೂಡಲೇ ಇವರ ಯೋಗ್ಯತೆಯು ವ್ಯಕ್ತವಾಗುತ್ತದೆ. ಪೂರ್ವದಲ್ಲಿ ಒಂದು ಕತ್ತೆಯು ಸಿಂಹದ ಚರ್ಮವನ್ನು ಹೊದೆದುಕೊಂಡು ತಾನು ಎಲ್ಲಾ ಮೃಗಗಳಿಗೂ ಅಧಿಪತಿಯೆಂದು ಹೇಳಿಕೊಂಡು ತಿರುಗುತಿದ್ದಿತು. ಒಂದಾನೊಂದು ದಿವಸ ಒಂದು ಆನೆಯ ಸಂಗಡ ಜಗಳವಾಡುವ ಸಂದರ್ಭ ಬಂದು ಅದರ ನಿಜಸ್ವರೂಪವು ವ್ಯಕ್ತವಾಯಿತು ಎಂದು ಒಂದು ಕಥೆಯುಂಟು. ಇದರಂತೆ ಧರ್ಮಿಷ್ಠರೆಂದು ವೇಷ ಹಾಕಿಕೊಂಡು ಕಾಲಕ್ಷೇಪ ಮಾಡುವ ಆ ಮೋಸಗಾರರ ಯೋಗ್ಯತೆಯು ಸ್ವಲ್ಪ ದಿವಸದಲ್ಲಿಯೇ ವ್ಯಕ್ತವಾಗದೆ ಹೋಗುವುದಿಲ್ಲ.

ಸಂಕಟ ಬಂದಕಾಲದಲ್ಲಿ ಕೆಲವರು "ದೇವರಿಗೆ ಕರುಣವಿಲ್ಲ; ನಿರಪರಾಧಿಗಳನ್ನು ನಿಷ್ಕಾರಣವಾಗಿ ದುಃಖದ ಪಡಿಸುತ್ತಾನೆ" ಎಂದು ದೇವರನ್ನು ದೂಷಿಸುವುದುಂಟು. ಹೀಗೆ ದೇವರನ್ನು ದೂಷಿಸುವುದು ಅನ್ಯಾಯವು. ದೇವರು ನಿಷ್ಕಾರಣವಾಗಿ ಸಂಕಟವನ್ನು ಉಂಟುಮಾಡುವುದಿಲ್ಲ. ಅಪರಾಧಮಾಡಿದರೆ ಅದಕ್ಕೆ ಶಿಕ್ಷೆಯಾಗತಕ್ಕದ್ದು ಅವಶ್ಯ

ಕವು. ಯಾವ ರಾಜ್ಯದಲ್ಲಿ ಕಳ್ಳರು ಸುಳ್ಳರು ಮುಂತಾದ ಕೆಟ್ಟಜನರಿಗೆ ಯಥಾಯೋಗ್ಯವಾದ ಶಿಕ್ಷೆಯಾಗುವುದಿಲ್ಲವೋ ಆ ರಾಜ್ಯದಲ್ಲಿ ಅವರ ಹಾವಳಿ ಹೆಚ್ಚಾಗಿ ಜನರಿಗೆ ಉಪದ್ರವವುಂಟಾಗುವುದು. ಆದುದರಿಂದ ಅಕೃತ್ಯವನ್ನು ಮಾಡಿದವರಿಗೆ ರಾಜನು ಯಥಾಯೋಗ್ಯವಾಗಿ ಶಿಕ್ಷೆಯನ್ನು ಮಾಡಬೇಕು. ಪ್ರಪಂಚದಲ್ಲಿ ಎಲ್ಲರ ಕಾಯಿಕಮಾನಸಿಕವಾಚಕಪಾಪಗಳನ್ನು ಸಮಗ್ರವಾಗಿ ತಿಳಿದುಕೊಂಡು ಅದಕ್ಕೆ ತಕ್ಕ ಶಿಕ್ಷೆಯನ್ನು ಕೊಡುವ ಯೋಗ್ಯತೆ ಯಾವ ಮನುಷ್ಯನಿಗೂ ಇಲ್ಲ. ಅನೇಕರು ಅಂತರಂಗದಲ್ಲಿ ಮಹಾ ಪಾಪಗಳನ್ನು ಮಾಡಿ ಹೊರಗೆ ತಾವು ಮಹಾಸಜ್ಜನರೆಂದು ತೋರ್ಪಡಿಸಿಕೊಳ್ಳುತ್ತಾರೆ. ಇಂಥವರನ್ನು ದೇವರು ಶಿಕ್ಷಿಸದೆ ಇದ್ದರೆ ಇವರ ದುರ್ಗುಣ ಕಡಿಮೆಯಾಗುವುದು ಹೇಗೆ? ಶಿಕ್ಷೆಯ ಭಯವಿಲ್ಲದೆ ಹೋದರೆ ಪ್ರಾಯೇಣ ಜನರು ಕಪಟಾಚರಣೆಯಿಂದ ಸತ್ಪುರುಷರನ್ನು ತೊಂದರೆ ಮಾಡದೆ ಬಿಡರು. ದೇವರಿಗೆ ಕಾಣದಂತೆ ಏನು ಮಾಡುವುದಕ್ಕೂ ಆಗುವುದಿಲ್ಲ. ಹೊರಗೆ ಸಜ್ಜನನೆಂದೆನಿಸಿಕೊಂಡು ಒಳಗೆ ಜನರಿಗೆ ಮೋಸಮಾಡುತ್ತಾ ಇರುವವನಿಗೆ ತಕ್ಕ ಕಾಲದಲ್ಲಿ ತಕ್ಕ ಶಿಕ್ಷೆಯಾಗದೆ ತಪ್ಪದು. ಅವನು ವಿಚಾರಪರನಾಗಿದ್ದರೆ ತಾನು ಮಾಡಿದ ಪಾಪಕ್ಕಾಗಿ ತನಗೆ ಈ ಶಿಕ್ಷೆಯಾಯಿತೆಂದು ತಿಳಿಯುತ್ತಾನೆ. ಅನೇಕ ಸಂಗತಿಗಳಲ್ಲಿ ಮೋಸಗಾರರ ಮೋಸವು ಹೊರಕ್ಕೆ ಬಾರದೆ ಇರುವುದಿಲ್ಲ; ಅಥವಾ ಅವರಿಗೆ ಏನಾದರೂ ಹಾನಿ ತಟ್ಟಿ ಅವರು ಆರಂಭಿಸಿದ್ದ ದುಷ್ಕಾರ್ಯವು ನಿಂತುಹೋಗುತ್ತದೆ. ಈ ಮೇರೆಗೆ ದೇವರು ಲೋಕದಲ್ಲಿ ದುಷ್ಟನಿಗ್ರಹಮಾಡುತ್ತಾ ಇರುವುದರಿಂದ ಪ್ರಪಂಚವು ಶಾಂತವಾಗಿದೆ. ಈ ಭಯವು ಇಲ್ಲದೆ ಇದ್ದರೆ ಯಾರಿಗೂ ಸುಖಕರವಾಗುತ್ತಿರಲಿಲ್ಲ. ನಾಲ್ಕು ದಿಕ್ಕಿನಲ್ಲಿಯೂ ಒಬ್ಬರಮೇಲೊಬ್ಬರು ಬಿದ್ದು ಈಗ ಸುಭಿಕ್ಷವಾಗಿರುವ ರಾಜ್ಯವೆಲ್ಲಾ ಶ್ಮಶಾನಭೂಮಿಯಂತೆ ಆಗುತಿದ್ದಿತು. ಸರ್ವಪ್ರಾಣಿಗಳೂ ಈ ಭಯದಿಂದಲೇ ತಮ್ಮತಮ್ಮ ದಾರಿಯಲ್ಲಿ ನಡೆಯುತ್ತವೆ. ನಮ್ಮಿಂದ ಇತರರಿಗೆ ಭಯ ವಿಲ್ಲದೆ ಇದ್ದರೆ ಇತರರಿಂದಲೂ ನಮಗೆ ಭಯವಿರುವುದಿಲ್ಲ. ಆದುದರಿಂದ ಸತ್ಪುರುಷರು ಯಾರಭಯವೂ ಇಲ್ಲದೆ ಪ್ರಪಂಚದಲ್ಲಿ ಬೇಕಾದುದನ್ನು ಮಾಡುತ್ತಾರೆ. ಈ ಕಾರಣದಿಂದ ಮನುಷ್ಯನಿಗೆ ದುಃಖಗಳು ಬರುವುದರಿಂದ ದುಃಖಗಳಿಗಾಗಿ ದೇವ

ರನ್ನು ದೂಷಿಸಬಾರದು. ದೇವರು ಎಲ್ಲರಿಗೂ ತಾಯಿತಂದೆಯಾಗಿದ್ದಾನೆ; ಯಾರಿಗೂ ತೊಂದರೆಯನ್ನು ಮಾಡುವುದಿಲ್ಲ. ಆದುದರಿಂದ ನಮಗೆ ಆಗಿಂದಾಗ್ಗೆ ಬರುವ ಸಂಕಟಗಳನ್ನು ಔಷಧಗಳೆಂದು ತಿಳಿಯಬೇಕು.

ಪ್ರಪಂಚದಲ್ಲಿ ಈಶ್ವರೇಚ್ಛೆ ಹೊರತು ಯಾವುದೂ ನಡೆವುದಿಲ್ಲವಾದುದರಿಂದ ನಮಗೆ ಯಾರಿಂದಾದರೂ ತೊಂದರೆಯಾದರೆ ಅವರನ್ನು ನಾವು ದೂಷಿಸಬಾರದು. ವಿಪತ್ತಿನಲ್ಲಿ ಚಿತ್ತವು ಸ್ವಸ್ಥವಾಗಿರುವುದಿಲ್ಲ. ಹಾಗೆಯೇ ಇದ್ದುಕೊಂಡು ಸಂಕಟವನ್ನೇ ನೆನಸಿಕೊಳ್ಳುತ್ತಾ ಕಾಲವನ್ನು ಕಳೆದರೆ ಕೆಲವು ಕಾಲದಲ್ಲಿ ಬುದ್ಧಿಯು ಕೆಟ್ಟುಹೋಗಿ ಹುಚ್ಚು ಹಿಡಿಯುತ್ತದೆ. ಆಗುವುದು ತಪ್ಪುವುದಿಲ್ಲ; ಅದಕ್ಕಾಗಿ ದುಃಖಪಟ್ಟು ಉಪಯೋಗವಿಲ್ಲ. ಆದಾಗ್ಯೂ ಮನುಷ್ಯನ ಮನಸ್ಸು ದುರ್ಬಲವಾದುದರಿಂದ ವ್ಯಸನದಲ್ಲಿ ತಪ್ತವಾಗುತ್ತಾ ಇರುತ್ತದೆ. ಇಂಥ ಕಾಲದಲ್ಲಿ ಮನಸ್ಸನ್ನು ಬೇರೆಕಡೆಗೆ ತಿರುಗಿಸಬೇಕು. ದಾರಿದ್ರ್ಯ, ರೋಗ ಮುಂತಾದುದನ್ನು ನಿವಾರಿಸಲಿಕ್ಕೆ ಅಸಾಧ್ಯವಾದ ದುಃಖಗಳು ಬಂದಲ್ಲಿ ದೇವರ ಮೇಲೆ ಭಾರವನ್ನು ಹಾಕಿ ಅವುಗಳನ್ನು ವಿಚಾರಮಾಡುವುದಕ್ಕೆ ಯತ್ನ ಮಾಡಬೇಕು; ಪಾಲುಮಾರಬಾರದು. ಆವಾಗಲೂ ಆವುದಾದರೂ ಒಂದು ಕೆಲಸವನ್ನು ಮಾಡುತ್ತಿರಬೇಕು. ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿ ಇಡಬೇಕಾದರೆ ಉದ್ಯೋಗಕ್ಕೆ ಸರಿಯಾದ ಉಪಾಯವಿಲ್ಲ. ಉದ್ಯೋಗವೆಂದರೆ ಆವುದಾದರೂ ಲಾಭಕರವಾದ ಕೆಲಸವನ್ನು ಮಾಡುವುದು. ಕೆಲಸವಿಲ್ಲದೆ ಇದ್ದರೆ ಆವಾಗಲೂ ದುಃಖವನ್ನೇ ನೆನಸಿಕೊಂಡು ವ್ಯಾಕುಲಪಡಬೇಕಾಗುತ್ತದೆ. ಉದ್ಯೋಗದ ರುಚಿಯನ್ನು ಒಂದುಸಲ ಕಂಡವರು ಅದನ್ನು ಎಂದಿಗೂ ಬಿಡುವುದಿಲ್ಲ. ಇಂಥವರು ಪ್ರಾಯೇಣ ಯಾವ ಅಕೃತ್ಯವನ್ನೂ ಮಾಡುವುದಿಲ್ಲ. ಇವರ ಮನಸ್ಸಿನಲ್ಲಿ ಇತರ ವಿಷಯಕ್ಕೆ ಅವಕಾಶವಿರುವುದಿಲ್ಲ. ಉದ್ಯೋಗ, ಧೈರ್ಯ, ಸತ್ಯ ಮುಂತಾದುವು ಮನುಷ್ಯನ ಉನ್ನತಿಗೆ ಮುಖ್ಯ ಕಾರಣಗಳಾಗಿರುತ್ತವೆ. ಸತ್ಸಹವಾಸವಿಲ್ಲದೆ ಇವು ಸಾಧ್ಯವಾಗುವುದಿಲ್ಲ; ಆದುದರಿಂದ ಯಾವಾಗಲೂ ಒಳ್ಳೆಯವರಸಂಗಡ ಒಳಕೆಯನ್ನು ಮಾಡಬೇಕು. ಆರ ಸಂಗಡಲೇ ಆಗಲಿ ಅತಿಸ್ನೇಹವನ್ನು ಮಾಡಬಾರದು. ಒಬ್ಬರಲ್ಲಿಯೂ

ಸೇರದೆ ಏಕಾಂಗಿಯಾಗಿಯೂ ಇರಬಾರದು. ಅತಿಸ್ನೇಹ ಮಾಡುವುದರಿಂದ ತಮ್ಮ ಹೊತ್ತು ಅವರ ಹೊತ್ತು ಸಹ ಅನ್ಯಾಯವಾಗಿ ಹೋಗುತ್ತದೆ. ಒಂದುವೇಳೆ ಕೆಟ್ಟವರಲ್ಲಿ ಅತಿಸ್ನೇಹ ವುಂಟಾದರೆ ಅವರ ದುರ್ಗುಣಗಳು ಬರುತ್ತವೆ. ಯಾರಸಂಗಡಲೂ ಸ್ನೇಹವನ್ನೇ ಮಾಡದಿದ್ದರೆ, ಒಳ್ಳೆಯವರ ಸಹವಾಸದಿಂದ ನಮ್ಮ ನಡತೆಯನ್ನು ತಿದ್ದಿಕೊಳ್ಳುವದಕ್ಕೆ ಅವಕಾಶವಾಗುವುದಿಲ್ಲ. ಮತ್ತು ಯಾರಸಂಗಡಲೂ ನಡತೆಯನ್ನು ಬಳಸದೆ ಇದ್ದರೆ ಇವರು ಒಳ್ಳೆಯವರು, ಇವರು ಕೆಟ್ಟವರು ಎಂಬ ತಾರತಮ್ಯ ತಿಳಿಯದೆ ಕೆಟ್ಟವರ ಮೋಸಕ್ಕೆ ಒಳಗಾಗಬೇಕಾಗುತ್ತದೆ.

ಮನುಷ್ಯನಿಗೆ ಬಡತನವು ದೊಡ್ಡ ವಿಪತ್ತೆಂದು ತಿಳಿಯಬೇಕು. ಬಡವರನ್ನಾರೂ ಹತ್ತಿರಕ್ಕೆ ಕರೆವುದಿಲ್ಲ. ಅವರು ಯಾರಿಗೂ ಬೇಕಾಗಿರುವದಿಲ್ಲ. ದರಿದ್ರನಾಗಿ ನಿರುದ್ಯೋಗನಾಗಿ ಎಲ್ಲಕ್ಕೂ ಅನ್ಯರನ್ನೇ ಆಶ್ರಯಿಸಿಕೊಂಡು ಇರುವವನ ಸಂಕಟವು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ಬಡತನವಿದ್ದಾಗ್ಯೂ ದೇವರಲ್ಲಿ ನಂಬಿಕೆಯನ್ನಿಟ್ಟು ಕೆಲಸವನ್ನು ಮಾಡುತ್ತಾ, ಯಾರಲ್ಲಿಯೂ ದೈನ್ಯವನ್ನು ಮಾಡದೆ, ಇರುವವರನ್ನು ಎಲ್ಲರೂ ಪುರಸ್ಕರಿಸುತ್ತಾರೆ. ಆದಕಾರಣ ಸಂಕಟ ಕಾಲದಲ್ಲಿ ಆತ್ಮಾವಲಂಬಿಗಳಾಗಿಯೂ ಉದ್ಯೋಗಿಗಳಾಗಿಯೂ ಇರುವವರೇ ಧನ್ಯರು.

ಯಾರಿಗಾದರೂ ಬಡತನ ಬಂದುದೇ ಆದರೆ ಅನೇಕರು ಅವರಿಗೆ ದುಡ್ಡಿನ ಆಸೆಯನ್ನು ತೋರಿಸಿ ದುರ್ಮಾರ್ಗಕ್ಕೆ ಎಳೆಯಲು ಯತ್ನಮಾಡುತ್ತಾರೆ. ಇದಕ್ಕೆ ಬುದ್ಧಿವಂತರಾದವರು ಒಳಪಡಬಾರದು. ಲೋಭದಿಂದ ಬುದ್ಧಿಯು ಭ್ರಷ್ಟವಾಗದೆ ಇರುವವರೆಗೂ ಮನುಷ್ಯರಿಗೆ ಗೌರವವಿರುತ್ತದೆ. ಲೋಭವಿಲ್ಲದೆ ತಮ್ಮ ಕಷ್ಟಾರ್ಜಿತದ್ರವ್ಯದಲ್ಲಿ ಕಾಲಕ್ಷೇಪಮಾಡಿ ಧರ್ಮದಿಂದ ನಡೆವರಿಗೆ ಇರುವ ಗೌರವವೂ, ಸುಖವೂ, ಶಾಂತಿಯೂ, ಕೀರ್ತಿಯೂ ಇನ್ನಾರಿಗೂ ಇರುವುದಿಲ್ಲ. ಇವರ ಸುಖವೂ, ಧನವೂ, ರಾಜರ ಸುಖಕ್ಕಿಂತಲೂ, ಧನಕ್ಕಿಂತಲೂ ಹೆಚ್ಚಾದುವು. ನಮ್ಮ ಕ್ಷುದ್ರವಾದ ಹೊಟ್ಟೆಗೋಸ್ಕರ ಇತರರ ಉಪಸರ್ಪಣೆಯನ್ನು ಮಾಡುವುದಾಗಲಿ ಅಥವಾ ಅಧರ್ಮಾಚರಣೆಯನ್ನು ಮಾಡುವುದಾಗಲೀ ಕೇವಲ ಅಶ್ಲಾಘ್ಯವಾದ ಕೆಲಸವು. ಕೆಲಸ ಮಾಡುವುದಕ್ಕೆ ತನಗೆ ಶಕ್ತಿ ಇರುವ ಪರ್ಯಂತಕ್ಕೂ ಎಂಥ ಸಂಕಟಬಂದಾಗ್ಯೂ ಭಿಕ್ಷಾವೃತ್ತಿಯನ್ನು

ಮಾಡಬಾರದು ; ನೆಂಟರಿಷ್ಟರಲ್ಲಿಯೂ ಸೇರಬಾರದು. ಮಣ್ಣಿನ ಮುದ್ದೆಯಂತೆ ಒಂದುಕಡೆ ಕುಳಿತುಕೊಳ್ಳುವುದಕ್ಕಾಗಿ ದೇವರು ಮನುಷ್ಯರಿಗೆ ಕಣ್ಣು ಕೈಕಾಲು ಮುಂತಾದ ಸಾಧನಗಳನ್ನು ಕೊಟ್ಟಿಲ್ಲ; ಉದ್ಯೋಗವನ್ನು ಮಾಡಿ ತಮ್ಮ ಕಾಲಕ್ಷೇಪವನ್ನು ಮಾಡಿಕೊಂಡು ಸಾಧ್ಯವಾದ ಮಟ್ಟಿಗೂ ದುರ್ಬಲರಾದವರಿಗೆ ಸಹಾಯ ಮಾಡಬೇಕೆಂದು ಕೊಟ್ಟಿದ್ದಾನೆ. ಭಿಕ್ಷಾಟನದಂಥ ನೀಚವೃತ್ತಿಯು ಬಂದೂ ಇಲ್ಲ. ಶಾಸ್ತ್ರಜ್ಞರು ಇದಕ್ಕೆ ಮೃತವೃತ್ತಿಯೆಂದು ಹೆಸರನ್ನು ಇಟ್ಟಿದ್ದಾರೆ. ಆದುದರಿಂದ ಎಷ್ಟಷ್ಟಾದರೂ ಆತ್ಮಾಭಿಮಾನವುಳ್ಳವರು ಇದರಲ್ಲಿ ಪ್ರವೇಶ ಮಾಡಬಾರದು. ಉದ್ಯೋಗವನ್ನು ಮಾಡುತ್ತಾ ಇರುವವನು ಈಗ ನೀಚವೃತ್ತಿಯಲ್ಲಿ ಇದ್ದಾಗ್ಗೂ, ಬೇಗನೆ ಪುನಃ ಉನ್ನತವಾದ ಪದವಿಗೆ ಬರುತ್ತಾನೆ. ಜಾತಿಯಿಂದಾಗಲಿ, ಕುಲದಿಂದಾಗಲಿ, ಇನ್ನಾವ ಕಾರಣದಿಂದಾಗಲಿ ಮನುಷ್ಯನಿಗೆ ದೊಡ್ಡತನ ಬರುವುದಿಲ್ಲ. ತಮ್ಮ ಕಷ್ಟದಿಂದ ಯಾರು ಉತ್ತಮ ಸ್ಥಿತಿಗೆ ಬರುತ್ತಾರೋ ಅವರೇ ದೊಡ್ಡವರು. ಪರಾವಲಂಬನದಿಂದ ಕಾಲಕ್ಷೇಪವನ್ನು ಮಾಡುವವರು ಸೀಮೆಯನ್ನು ಆಳುವ ರಾಜರಾದಾಗ್ಗೂ, ಭಿಕ್ಷುಕರಿಗೆ ಸರಿಯೆಂದು ತಿಳಿಯಬೇಕು. ಆದುದರಿಂದ ಅನ್ಯರಿಗೆ ಭಾರವಾಗದಂತೆ ತಮ್ಮ ಉದ್ಯೋಗದಿಂದ ತಮ್ಮ ನಿರ್ವಾಹವನ್ನು ತಾವು ಮಾಡಿಕೊಳ್ಳಬೇಕು. ಸಂಕಟಬಂದ ಕಾಲದಲ್ಲಿ ಅನ್ಯರ ಆಶ್ರಯವನ್ನು ಮಾಡುವುದಕ್ಕಿಂತಲೂ ಸ್ವತಂತ್ರದಿಂದ ಕೂಲಿಯನ್ನು ಮಾಡುವುದಾದರೂ ಉತ್ತಮವು. ಅಜ್ಞರಾದವರು ವಿಪತ್ಕಾಲದಲ್ಲಿ ತಮ್ಮ ಬಂಧುಜನರನ್ನು ಆಶ್ರಯಿಸುತ್ತಾರೆ ; ಆ ಬಂಧುಜನರು ಇವರನ್ನು ಆದರಿಸುವುದಿಲ್ಲ. ಆದುದರಿಂದ ತಾವೇ ಶ್ರಮಪಟ್ಟು ಸ್ವತಂತ್ರವಾಗಿ ಜೀವಿಸುವುದಕ್ಕೆ ಯತ್ನವನ್ನು ಮಾಡಬೇಕು. ವಿಪತ್ತು ಬಂದಕಾಲದಲ್ಲಿ ಮನೆಮನೆಗೆ ಅಲೆಯುತ್ತಾ ಹೋದರೆ, ಪ್ರಾಯೇಣ ಎಲ್ಲರೂ ಅವನಲ್ಲಿ ಉದಾಸೀನರಾಗುತ್ತಾರೆ. ಯಾರನ್ನಾದರೂ ಒಂದು ಪದಾರ್ಥವನ್ನು ಕೇಳಿ ಅದನ್ನು ಅವರು ಕೊಡದೆ ಇದ್ದರೆ ಬಹುದುಃಖವುಂಟಾಗುತ್ತದೆ. ಆದುದರಿಂದ ದೇವರಮೇಲೆ ಭಾರಹಾಕಿ ನಮ್ಮ ಇಷ್ಟಸಿದ್ಧಿಗಾಗಿ ನಾವೇ ಪ್ರಯತ್ನ ಮಾಡಬೇಕು. ಸಣ್ಣ ಹುಳುಗಳು ಮೊದಲುಗೊಂಡು ಸರ್ವ ಪ್ರಾಣಿಗಳನ್ನು ಸಮಾನ ದೃಷ್ಟಿಯಿಂದ ಕಾಪಾಡುವ

ದೇವರು ನಮ್ಮನ್ನು ಮರೆವುದಿಲ್ಲ. ನಮ್ಮ ವಿಷಯದ ಯೋಚನೆ ನಮ ಗಿಂತಲೂ ದೇವರಿಗೆ ಹೆಚ್ಚಾಗಿರುತ್ತದೆ. ನಮ್ಮ ಇಷ್ಟಾರ್ಥಗಳನ್ನು ನಾವು ಪಡೆದುಕೊಳ್ಳುವುದಕ್ಕೋಸ್ಕರ ದೇವರು ನಮಗೆ ಕೈಕಾಲು ಮುಂ ತಾದ ಅವಯವಗಳನ್ನು ಕೊಟ್ಟು, ಇತರ ಸಾಧನಗಳನ್ನೂ ಅನುಕೂ ಲಪಡಿಸಿ ಇದ್ದಾನೆ. ನಮಗೆ ಇದಕ್ಕಿಂತ ಹೆಚ್ಚಾಗಿ ಏನು ಬೇಕಾಗಿದೆ. ದೇವರು ನಮಗೆ ಸಕಲ ವಿಷಯದಲ್ಲಿಯೂ ಅನುಕೂಲಪಡಿಸಿಕೊಟ್ಟು ಇರುವುದಕ್ಕೋಸ್ಕರ ನಾವು ಬಹಳ ಕೃತಜ್ಞರಾಗಿರಬೇಕು. ನಮ್ಮ ಸಂಪತ್ತು ಹೋಗಿ ನಮಗೆ ಸಂಕಟವುಂಟಾದರೆ ತಿರುಗಿ ನಾವು ಉದ್ಯೋಗಮಾಡಿ ಆ ಸಂಕಟವನ್ನು ನಿವಾರಣೆ ಮಾಡಿಕೊಳ್ಳಬಹು ದು. ಈ ಸಂಸಾರಚಕ್ರದಲ್ಲಿ ಕಳೆದುಕೊಂಡುದು ತಿರುಗಿ ಸಿಕ್ಕುವುದುಂ ಟು. ಆದುದರಿಂದ ಇದಕ್ಕಾಗಿ ವೃಥಾ ಸಂಕಟಪಡಬಾರದು. ಅನೇ ಕರು ತಮಗೆ ಪ್ರಿಯರಾದವರು ಯಾರಾದರೂ ಸತ್ತುಹೋದರೆ ಅವರ ಸಂಗತಿಯು ತಿರುಗಿ ಸಿಕ್ಕುವುದಿಲ್ಲವೆಂದು ಬಹು ಶೋಕಪಟ್ಟು, ತಮ್ಮ ಕರ್ತವ್ಯವನ್ನು ಮರೆತುಬಿಟ್ಟು, ದುರ್ಲಭವಾಗಿರುವ ಮನುಷ್ಯದೇಹ ವನ್ನು ಬಿಟ್ಟು ಬಿಡುತ್ತಾರೆ. ಅದು ಮೂರ್ಖತನವು. ಈ ಸಂಸಾರವು ಒಂದು ದೊಡ್ಡ ಮಾರ್ಗವೆಂದೂ, ಇದರಲ್ಲಿರುವವರು ದಾರಿ ನಡೆವವ ರೆಂದೂ, ದಾರಿ ನಡೆವ ಕಾಲದಲ್ಲಿ ಅರವಟ್ಟಿಗೆಯಲ್ಲಿ ಸೇರಿದ ಜನರಂತೆ ಇಷ್ಟಮಿತ್ರರು ಕೆಲವುಕಾಲಮಾತ್ರ ಕೂಡಿದ್ದು ಮುಂದೆ ತಮ್ಮ ತಮ್ಮ ದಾರಿಯನ್ನು ಹಿಡಿದು ಹೋಗುವರೆಂದೂ, ಜ್ಞಾನಿಗಳು ಹೇಳಿದ್ದಾರೆ. ಆದುದರಿಂದ ಯಾರಾದರೂ ಮೃತಪಟ್ಟ ವಿಷಯದಲ್ಲಿ ವೃಥಾ ಶೋಕಪಡ ಬಾರದು. ಶೋಕ ಮಾಡುವುದರಿಂದ ಸತ್ತವರು ತಿರುಗಿ ಬರುವುದಿಲ್ಲ. ಆದುದರಿಂದ ಇದಕ್ಕಾಗಿ ಜ್ಞಾನಿಗಳು ಬಹಳ ಶೋಕವನ್ನು ಮಾಡುವು ದಿಲ್ಲ. ಜನರು ಒಬ್ಬರಲ್ಲೊಬ್ಬರು ಪ್ರೇಮ ಮಾಡತಕ್ಕುದು ಸಹಜ; ಇಂಥ ಪ್ರೇಮಪಾತ್ರರು ಸತ್ತುಹೋದರೆ ಶೋಕವುಂಟಾಗುವುದೂ ಸಹ ಜ. ಆದಾಗ್ಗೂ ಶೋಕವನ್ನು ಈ ರೀತಿ ತೋರಿಸುವುದರಿಂದ ಏನೂ ಪ್ರಯೋಜನವಿಲ್ಲವೆಂದು ತಿಳಿಯಬೇಕು.

ಎಲ್ಲರಲ್ಲಿಯೂ ತಾರತಮ್ಯವಿಲ್ಲದೆ ಪ್ರೇಮವನ್ನು ಮಾಡುತ್ತಾ ಬರ ಬೇಕು. ಇದರಿಂದ ಅತ್ಯಂತ ಶಾಂತಿಯೂ ಆನಂದವೂ ಉಂಟಾಗು

ತ್ತವೆ. ಎಲ್ಲರಲ್ಲಿಯೂ ನಿರ್ಮಲವಾದ ಅಂತಃಕರಣದಿಂದ ಪ್ರೇಮವನ್ನೂ ಅಸ್ವಾರ್ಥವಾಗಿ ಉಪಕಾರವನ್ನೂ ಮಾಡುವುದರಿಂದ ಉಂಟಾಗುವ ಆ ನಂದಕ್ಕೆ ಉಪಮಾನ ಕೊಡಲಿಕ್ಕಾಗುವುದಿಲ್ಲ. ಆದುದರಿಂದಲೇ ಸಾಧು ಗಳು ಸಂಸಾರದಲ್ಲಿ ಇರತಕ್ಕ ಪ್ರೇಮನ್ನು ತುಚ್ಛೀಕರಿಸಿ ಸರ್ವಸ್ವ ವನ್ನು ತ್ಯಾಗಮಾಡಿ ಸರ್ವರಲ್ಲಿಯೂ ಸಮವಾದ ಪ್ರೇಮವನ್ನು ಇಟ್ಟು ಪರೋಪಕಾರವನ್ನು ಮಾಡಿದರು. ಇವರಿಗೆ ಈ ಕೆಲಸದಲ್ಲಿ ಅನೇಕ ವಿಘ್ನಗಳು ಬಂದಾಗ್ಯೂ, ಹಾಕಿದ ಅಡ್ಡಕಟ್ಟನ್ನು ದಾಟಬರುವ ನದಿಗೆ ವೇಗವು ಹೆಚ್ಚುವಂತೆ ಅವರ ವೈರಾಗ್ಯವೂ ಹೆಚ್ಚಾಯಿತು. ಇಂಥವರ ಆಚರಣೆಯನ್ನು ಮುಂದಿಟ್ಟುಕೊಂಡು ಅದರಂತೆ ನಡೆದು ನಮ್ಮ ಜನ್ಮ ವನ್ನು ಸಾರ್ಥಕವನ್ನಾಗಿ ಮಾಡಬೇಕು. ದೇವರಲ್ಲಿ ಪೂರ್ಣಭಕ್ತಿಯಿ ಟ್ಟು ನಮ್ಮ ಸರ್ವದುಃಖಗಳನ್ನೂ ಮರೆಯಬೇಕು. ದುಃಖದಲ್ಲಿರು ವವರಿಗೆ ದೇವರು ಹೊರತು ಇನ್ನಾವ ಆಧಾರವೂ ಇಲ್ಲ. ಆತನು ಸರ್ವಾ ಧಾರನಾಗಿಯೂ ಪರಮಕರುಣಾಶಾಲಿಯಾಗಿಯೂ ಇದ್ದಾನೆ. ಆತ ನಲ್ಲಿ ಅಚಲವಾದ ಭಕ್ತಿಯನ್ನು ಇಟ್ಟು ಇತರ ವಿಷಯದಲ್ಲಿ ಮನಸ್ಸ ನ್ನು ಇಡದೆ ಪ್ರಾಣಿಮಾತ್ರಕ್ಕೆ ಹಿತವನ್ನು ಮಾಡುತ್ತಿರುವವರೇ ಧನ್ಯ ರೆಂದು ತಿಳಿಯಬೇಕು.

---

ಸಂಪೂರ್ಣವು.